# ಬಾಲಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು

(ಹೈದ್ರಾಬಾದ್-ಕರ್ನಾಟಕ ಪ್ರದೇಶದ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳನ್ನು ಅನುಲಕ್ಷಿಸಿ)

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಶೋಧನ ಮಹಾಪ್ರಬಂಧ)



ಸಂಶೋಧಕರು

ಜೋಗಿಸಕಟ್ಟೆ ವಿಠ್ಠಲ

ಮಾರ್ಗದರ್ಶಕರು

ಡಾ.ಎಲ್.ಶ್ರೀನಿವಾಸ

ಸಹಾಯಕ ಪ್ರಾಧ್ಯಾಪಕರು





ಮಾನವಶಾಸ್ತ್ರ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೧೩

555

# ಬಾಲಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು

*(ಹೈದ್ರಾಬಾದ್-ಕರ್ನಾಟಕ ಪ್ರದೇಶದ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳನ್ನು ಅನುಲಕ್ಷಿಸಿ)*

*(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಶೋಧನ ಮಹಾಪ್ರಬಂಧ)*


ಸಂಶೋಧಕರು

ಜೋಗಿನಕಟ್ಟೆ ವಿಠ್ಠಲ

ಮಾರ್ಗದರ್ಶಕರು

ಡಾ.ಎಲ್.ಶ್ರೀನಿವಾಸ

ಸಹಾಯಕ ಪ್ರಾಧ್ಯಾಪಕರು





ಮಾನವಶಾಸ್ತ್ರ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ-ವಿದ್ಯಾರಣ್ಯ


**2013**

# ಸಂಶೋಧಕರ ಪ್ರಮಾಣ ಪತ್ರ

"ಬಾಲಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು" (ಹೈದ್ರಾಬಾದ್-ಕರ್ನಾಟಕ ಪ್ರದೇಶದ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ಸಮಾಜಶಾಸ್ತ್ರದಲ್ಲಿ ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ. ಎಲ್.ಶ್ರೀನಿವಾಸ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಪ್ರಬಂಧ ಅಥವಾ ಇದರ ಯಾವುದೇ ಭಾಗವನ್ನು ಯಾವ ಪದವಿಗಾಗಲಿ ಅಥವಾ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲ ಎಂದು ಈ ಮೂಲಕ ಘೋಷಿಸುತ್ತೇನೆ.

ದಿನಾಂಕ : 11/11/2013
ಸ್ಥಳ : ವಿದ್ಯಾರಣ್ಯ

ಜೋಗಿನಕಟ್ಟೆ ವಿಠ್ಠಲ
ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿ
ಮಾನವಶಾಸ್ತ್ರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ.

# ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀ ಜೋಗಿನಕಟ್ಟೆ ವಿಠ್ಠಲ ಅವರು "ಬಾಲಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು" (ಹೈದ್ರಾಬಾದ್-ಕರ್ನಾಟಕ ಪ್ರದೇಶದ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು 20013-14 ನೇ ಸಾಲಿನ ಸಮಾಜಶಾಸ್ತ್ರದ ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲೆಂದು ನನ್ನ ಮಾರ್ಗದರ್ಶನದಲ್ಲಿ ಸಿದ್ಧ ಪಡಿಸಿದ್ದಾರೆ. ಈ ಪ್ರೌಢ ಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ, ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ಧೃಢೀಕರಿಸುತ್ತೇನೆ.

ದಿನಾಂಕ : 11/11/2013
ಸ್ಥಳ : ವಿದ್ಯಾರಣ್ಯ

ಡಾ. ಎಲ್.ಶ್ರೀನಿವಾಸ
ಮಾರ್ಗದರ್ಶಕರು
ಸಹಾಯಕ ಪ್ರಾಧ್ಯಾಪಕರು
ಮಾನವಶಾಸ್ತ್ರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ

# ಪರಿವಿಡಿ

# ಅಧ್ಯಾಯ-ಒಂದು : ಪ್ರಸ್ತಾವನೆ

1.1. ಅಧ್ಯಯನದ ಮಹತ್ವ.
1.2. ಅಧ್ಯಯನದ ವಿಧಾನ.
1.3. ಅಧ್ಯಯನದ ಉದ್ದೇಶ, ವ್ಯಾಪ್ತಿ.
1.4. ಅಧ್ಯಾಯಗಳ ವಿನ್ಯಾಸ.

# ಅಧ್ಯಾಯ – ಒಂದು

## ಪ್ರಸ್ತಾವನೆ

ಭಾರತವು ಇಂದು ಅನೇಕ ಸಾಮಾಜಿಕ ಸಮಸ್ಯೆಗಳನ್ನು ಎದುರಿಸುತ್ತಿದೆ. ಮೀತಿ ಮೀರಿದ ಜನಸಂಖ್ಯೆ, ಬಡತನ, ನಿರುದ್ಯೋಗ ಮುಂತಾದವುಗಳು ತೀವ್ರ ಸಮಸ್ಯೆಗಳಾಗಿ ಮಾನವರನ್ನು ಒಂದೆಡೆ ಕಾಡುತ್ತಿದ್ದರೆ ಬಂಡವಾಳಶಾಹಿಗಳು ತಮ್ಮ ಅತೀ ಲಾಭದ ಆಸೆಯಿಂದ ಮಕ್ಕಳ ದುರ್ಬಳಕೆ ಅಥವಾ ಮಕ್ಕಳನ್ನು ದುಡಿಸಿಕೊಳ್ಳುವುದನ್ನು ಪ್ರಸ್ತುತ ಸಮಾಜದ ದುರಂತವೆನ್ನಬಹುದು. ಈ ಸಮಸ್ಯೆಯ ತೀವ್ರತೆಯ ಪ್ರಮಾಣ ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಾ ನಡೆದಿದೆ. 12 ಅಥವಾ 14 ವಯಸ್ಸನ್ನು ಮೀರದ ಅಪ್ರಾಪ್ತ ವಯಸ್ಕರಾದ ಎಷ್ಟೊ ಮಕ್ಕಳನ್ನು ಕೃಷಿ ಹಾಗೂ ಕೈಗಾರಿಕಾ ವಲಯಗಳಲ್ಲಿ ದುಡಿಸಿಕೊಳ್ಳಲಾಗುತ್ತಿದೆ. ಪೌಷ್ಟಿಕ ಆಹಾರದ ಕೊರತೆ, ಕ್ಷೀಣವಾದ ಆರೋಗ್ಯ, ವೈದ್ಯಕೀಯ ಸೌಲಭ್ಯಗಳ ಕೊರತೆ, ಶೈಕ್ಷಣಿಕ ಸೌಲಭ್ಯಗಳಿಂದ ವಂಚನೆ, ಶಾರೀರಿಕವಾಗಿ ಮತ್ತು ಮಾನಸಿಕವಾಗಿ ಶೋಷಣೆ ಮುಂತಾದ ಪೀಡನೆಗಳಿಂದ ಕೋಟ್ಯಾಂತರ ಮಕ್ಕಳು ಇಂದಿಗೂ ಬವಣೆ ಪಡುತ್ತಿದ್ದಾರೆ. ಮಕ್ಕಳು ದೇಶದ ಆಸ್ತಿ. ಆದರೆ ಆ ಮೊಗ್ಗುಗಳು ಅರಳುವ ಮೊದಲೇ ದುಡಿತದ ಬಂಧನಕ್ಕೆ ಒಳಪಡಿಸುವ ದಾರುಣ ಸ್ಥಿತಿಯನ್ನು ಎಲ್ಲಡೆ ಕಾಣುತ್ತಿದ್ದೇವೆ. ದಿನ ದಿನಕ್ಕೂ ಈ ಅಮಾನುಷ ಬಾಲಕಾರ್ಮಿಕ ಸಮಸ್ಯೆ ಉಲ್ಬಣಗೊಳ್ಳುತ್ತಲೇ ನಡೆದಿದೆ. ಪ್ರೌಢ ಕಾರ್ಮಿಕರಂತೆ ದಿನಗಟ್ಟಲೇ ದುಡಿಯಬೇಕಾದ ಅನಿವಾರ್ಯತೆಗೆ ಸಿಲುಕಿರುವ, ಯಾವುದೇ ಕಾನೂನಿನ ಸೌಲಭ್ಯಗಳನ್ನು ಪಡೆದುಕೊಳ್ಳಲಾಗದ, ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ತಮ್ಮದೇ ಆದ ಕಾರ್ಮಿಕ ಸಂಘಟನೆಗಳನ್ನು ಕಟ್ಟಿಕೊಳ್ಳಲಾಗದ ಈ ಮಕ್ಕಳ ಅಸಹಾಯಕ ಸ್ಥಿತಿಗತಿಗಳು ತುಂಬಾ ಶೋಚನೀಯವಾಗಿವೆ.

ಹದಿನಾಲ್ಕು ವರ್ಷದೊಳಗಿನ ಮಕ್ಕಳು ಇಂದು ರಾಷ್ಟ್ರದ ಸಂಪತ್ತುಗಳಾಗಿದ್ದಾರೆಯೇ? ಅವರು ಹೇಗೆ ಬದುಕುತ್ತಿದ್ದಾರೆ? ಮತ್ತು ಅವರಿಗಿರುವ ಸವಾಲುಗಳೇನು? ಎಂಬ ಪ್ರಶ್ನೆಗಳಿಗೆ ಸೂಕ್ತ ಉತ್ತರ ಸಿಗುವುದಿಲ್ಲ. ಜಗತ್ತಿನ 52 ಮಿಲಿಯನ್ ಹಾಗೂ ಭಾರತದ ಹತ್ತು ಕೋಟಿ ಬಾಲಕಾರ್ಮಿಕರು ಬಾಲ್ಯದ ಪ್ರೀತಿ, ವಿಶ್ವಾಸಗಳಿಂದ ವಂಚಿತರಾಗಿ ಯಾರದೋ ಮನೆಗಳ, ಹೊಲಗದ್ದೆಗಳಲ್ಲಿ, ಕಾರ್ಖಾನೆ, ಹೋಟೆಲ್, ಪ್ರಮುಖವಾಗಿ ಗಣಿಗಳಲ್ಲಿ, ತರಕಾರಿ ವ್ಯಾಪಾರದಲ್ಲಿ ಹೂವು-ಹಣ್ಣು ವ್ಯಾಪಾರಗಳಲ್ಲಿ, ಹೆಚ್ಚಿನ ಸಂಖ್ಯೆಯಲ್ಲಿ ಕೃಷಿ ಚಟುವಟಿಕೆಗಳಲ್ಲಿ, ನಿಷೇಧಿತ ಪ್ರದೇಶಗಳಲ್ಲಿ, ಗ್ಯಾರೇಜ್-ಸೈಕಲ್ ಶಾಪ್‌ಗಳಲ್ಲಿ, ಕಟ್ಟಿಗೆ ಮಾರಾಟದಲ್ಲಿ, ದುಶ್ಚಟದ ವಾತಾವರಣದಲ್ಲಿ, ಹಲವಾರು ಕಡೆ ಜೀತ ಕೆಲಸದಲ್ಲಿ ಮತ್ತು ಅಪಾಯಕಾರಿ ಸನ್ನಿವೇಶಗಳಲ್ಲಿ ಮೈಮುರಿದು ದುಡಿಯುತ್ತಿದ್ದಾರೆ. ಸ್ವಾರ್ಥ ಸಮಾಜದ ಮಾಲೀಕರ ಆಸೆ, ಆಮಿಷಗಳಿಗೆ ಮಕ್ಕಳು ಬಲಿಯಾಗುತ್ತಿದ್ದು, ಅವರಿಂದ ಕಿರುಕುಳ ಅನುಭವಿಸುತ್ತಾ ಹಲವಾರು ದೌರ್ಜನ್ಯಗಳಿಗೆ ಒಳಗಾಗುತ್ತಿದ್ದಾರೆ. ಇಂದು ಬಾಲಕಾರ್ಮಿಕರ ಸಮಸ್ಯೆ ನಾಗರಿಕ ಸಮಾಜಕ್ಕೆ ಒಂದು ಸವಾಲಾಗಿ ಪರಿಣಮಿಸಿದೆ.

ಮಕ್ಕಳನ್ನು ಎಲ್ಲೆಲ್ಲೂ ಆರ್ಥಿಕವಾಗಿ ಶೋಷಣೆ ಮಾಡುತ್ತಿರುವುದು ಕಂಡುಬರುತ್ತಿದೆ. ಮಕ್ಕಳ ಮೇಲೆ ನಡೆಸಲಾಗುತ್ತಿರುವ ಅನೇಕ ದೌರ್ಜನ್ಯಗಳಲ್ಲಿ ಬಾಲಕಾರ್ಮಿಕ ಸಮಸ್ಯೆ ಸಹ ಒಂದು. ಬಾಲಕಾರ್ಮಿಕ ಪದ್ಧತಿ ಇಂದು ಕಂಡುಬರುತ್ತಿರುವ ಹೊಸ ಸಮಸ್ಯೆ ಅಲ್ಲ. ಈ ಸಮಸ್ಯೆಯನ್ನು ಇತಿಹಾಸದುದ್ದಕ್ಕೂ ನಾವು ಕಾಣಬಹುದು. ಇದು ಕೇವಲ ಒಂದು ಪ್ರದೇಶಕ್ಕೆ ಮಾತ್ರ ಸೀಮಿತವಾಗಿರದೆ, ಈ ಸಮಸ್ಯೆ ಜಗತ್ತಿನಾದ್ಯಂತ ಇರುವುದನ್ನು ನಾವು ಕಾಣಬಹುದಾಗಿದೆ.

ಪ್ರತಿಯೊಬ್ಬ ವ್ಯಕ್ತಿ ಬಾಲ್ಯದಲ್ಲಿ ದೈಹಿಕ, ಮಾನಸಿಕ ಬೆಳವಣಿಗೆ ಹೊಂದುವುದಲ್ಲದೆ ಅವಶ್ಯ ಶಿಕ್ಷಣವನ್ನು ಪಡೆದು ಪ್ರೌಢನಾದ ನಂತರ ದುಡಿಮೆಗೆ ತೊಡಗಬೇಕು. ಆದರೆ ಬಡತನ, ಶಿಕ್ಷಣದ ಸೌಲಭ್ಯ ಕೊರತೆ, ಕುಟುಂಬದ ದುರ್ಬಲ ಆರ್ಥಿಕ ಸ್ಥಿತಿ, ಪಾಲಕರ ಅಜ್ಞಾನ, ಮುಂತಾದ ಕಾರಣಗಳಿಂದಾಗಿಯೇ ಮಕ್ಕಳನ್ನು ದುಡಿಮೆಗೆ ಕಳುಹಿಸಲಾಗುತ್ತಿದೆ. ದುಡಿಯುವ ಇಂಥ ಮಕ್ಕಳೇ ಬಾಲಕಾರ್ಮಿಕರಾಗಿದ್ದಾರೆ.

2000ರ ಯುನೆಸ್ಕೋವಿನ ಸಮೀಕ್ಷೆಯಂತೆ 300 ಮಿಲಿಯನ್ ಬಾಲಕಾರ್ಮಿಕರು ಇಡೀ ಪ್ರಪಂಚದಲ್ಲಿದ್ದಾರೆ. ಭಾರತದಲ್ಲಿ 2001ರ ಜನಗಣತಿ ಪ್ರಕಾರ 20.2 ಮಿಲಿಯನ್ ಬಾಲಕಾರ್ಮಿಕರಿದ್ದಾರೆ. ಕರ್ನಾಟಕದಲ್ಲಿ 2001ರ ಜನಗಣತಿ ಪ್ರಕಾರ 35ಲಕ್ಷಕ್ಕೂ ಅಧಿಕ ಬಾಲಕಾರ್ಮಿಕರಿದ್ದಾರೆ. ಈ ಎಲ್ಲಾ ಅಂಕಿ ಅಂಶಗಳು ತಾತ್ಕಾಲಿಕವೇ ಆಗಿರುತ್ತದೆ. ಏಕೆಂದರೆ ಸಮೀಕ್ಷೆಯ ಸಮಯದಲ್ಲಿ ಬಾಲಕಾರ್ಮಿಕರು ಅಗೋಚರವಾಗಿರುತ್ತಾರೆ. ಹಾಗೂ ಮಾಲಿಕರೇ ತಪ್ಪು ಮಾಹಿತಿ ನೀಡಿರುತ್ತಾರೆ. ಇದಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಬಾಲಕಾರ್ಮಿಕರು ದೇಶದಲ್ಲಿರಬಹುದು.

**ಮಕ್ಕಳ ದುಡಿತ ಎಂದರೇನು? ಅಥವಾ ಬಾಲಕಾರ್ಮಿಕರೆಂದರೆ ಯಾರು?**

**1986ರ ಬಾಲದುಡಿಮೆಯ ಕಾಯ್ದೆಯ ಪ್ರಕಾರ**

- 14 ವರ್ಷದೊಳಗಿನ ದುಡಿಯುವ ಮಕ್ಕಳನ್ನು ಬಾಲಕಾರ್ಮಿಕರೆಂದು ಪರಿಗಣಿಸಲಾಗಿದೆ. ಈ ಕಾನೂನು ತಿಳಿಸುವಂತೆ ಬಾಲಕಾರ್ಮಿಕರು ಮಾಡುವ ಕೆಲಸದ ಅವಧಿ ದಿನವೊಂದಕ್ಕೆ 6ಗಂಟೆ ಹೆಚ್ಚಿರಬಾರದು ಮತ್ತು ಸಂಜೆಯ 7ರ ನಂತರ ದುಡಿಸಬಾರದು ಎಂಬ ಸ್ಪಷ್ಟ ವಿವರಣೆ ಇದೆ.
- ಭಾರತದ ಸಂವಿಧಾನದದ ಪ್ರಕಾರ– 14 ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಗುವೊಂದು ಸಂಪಾದನೆಯ ದೃಷ್ಟಿಯಿಂದ ದುಡಿಮೆ ಮಾಡುತ್ತಿದ್ದಲ್ಲಿ ಅಂತಹ ಮಗುವನ್ನು ದುಡಿಯುವ ಮಗು ಎನ್ನಬಹುದು.

ಬ್ರಿಟಾನಿಕ ವಿಶ್ವಕೋಶವು ಮಕ್ಕಳ ದುಡಿಮೆಯನ್ನು" ಕಾಯಿದೆಯು ನಿಗದಿಪಡಿಸಿದ ನಿರ್ದಿಷ್ಟ ವಯಸ್ಸಿನ ಒಳಗಿರುವ ಮಕ್ಕಳ ಉದ್ಯೋಗ " ಎಂದು ವ್ಯಾಖ್ಯಾನಿಸುತ್ತದೆ.

ಯು.ಎಸ್.ಎ. ರಾಷ್ಟ್ರೀಯ ಮಕ್ಕಳ ದುಡಿಮೆಯ ಸಮಿತಿಯ ಅಧ್ಯಕ್ಷರಾದ ಹೋಮರ್ ಫ್ಲೇಕ್ಸ ಅವರ ಪ್ರಕಾರ' ಮಕ್ಕಳ ಪೂರ್ಣ ಶಾರೀರಿಕ ಬೆಳವಣಿಗೆ, ನಿರೀಕ್ಷಿತ ಕನಿಷ್ಠ ಮಟ್ಟದ ಶಿಕ್ಷಣದ ಅವಕಾಶಗಳು ಮತ್ತು ಅವರಿಗೆ ಅವಶ್ಯವಾದ ಮನರಂಜನೆ, ಇವುಗಳಿಗೆ ಅಡ್ಡಿ ತರಬಲ್ಲಂತಹ ಮಕ್ಕಳು ಮಾಡುವಂತಹ ಯಾವುದೇ ಕೆಲಸವೂ ಮಕ್ಕಳ ದುಡಿಮೆ' ಎಂದು ಕರೆಯಬಹುದು ಎಂದಿದ್ದಾರೆ.

1986 ರ ಮಕ್ಕಳ ದುಡಿಮೆಯ (ನಿಷೇಧ ಮತ್ತು ನಿಯಂತ್ರಣ) ಅಧಿನಿಯಮದ ಪ್ರಕಾರ 14 ವರ್ಷ ವಯಸ್ಸಿನವರೆಗಿನ ಮಕ್ಕಳನ್ನು ಉದ್ಯೋಗಕ್ಕೆ ನೇಮಿಸಿ ಕೊಳ್ಳುವುದನ್ನು ಮಕ್ಕಳ ದುಡಿಮೆ ಎಂದು ಕರೆಯಲಾಗಿದ್ದು ಅಪಾಯಕರ ಉದ್ಯೋಗಗಳಲ್ಲಿ ಮಕ್ಕಳ ದುಡಿಮೆಯನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ.

ಡಾ.ವಿ.ವಿ.ಗಿರಿಯವರು ಬಾಲಕಾರ್ಮಿಕ ಎನ್ನುವ ಕಲ್ಪನೆಯನ್ನು ಎರಡು ಅರ್ಥದಲ್ಲಿ ವಿವರಿಸಲು ಪ್ರಯತ್ನಿಸಿದ್ದಾರೆ.

ಮೊದಲನೆಯದಾಗಿ 'ಆರ್ಥಿಕ ಆಚರಣೆಗಾಗಿ' ಮಕ್ಕಳ ದುಡಿಮೆ ಕುಟುಂಬದ ಆದಾಯವನ್ನು ಹೆಚ್ಚಿಸುವ ಸಲುವಾಗಿ ಮಗುವನ್ನು ಹಣ ತರುವ ಕೆಲಸಕ್ಕೆ ಸೇರಿಸುವುದನ್ನು ಸೂಚಿಸುತ್ತದೆ.

ಎರಡನೇಯದಾಗಿ 'ಸಾಮಾಜಿಕ ಕೆಡುಕಿಗಾಗಿ' ಮಕ್ಕಳನ್ನು ಅಪಾಯಗಳಿಗೆ ದೂಡಿ ಅವರಿಗೆ ಅಭಿವೃದ್ಧಿಯ ಅವಕಾಶಗಳನ್ನು ತಪ್ಪಿಸುವುದನ್ನು ಸೂಚಿಸುತ್ತದೆ ಎಂದಿದ್ದಾರೆ.

ಬಾಲಕಾರ್ಮಿಕರನ್ನು ಪ್ರಮುಖವಾಗಿ ಎರಡು ವಿಧಗಳಲ್ಲಿ ವಿಂಗಡಿಸಬಹುದು. ಅವುಗಳೆಂದರೆ, ಮೊದಲನೆಯದಾಗಿ ಪೂರ್ಣ ಪ್ರಮಾಣದ ಬಾಲಕಾರ್ಮಿಕರು ಎರಡನೆಯದಾಗಿ ಅರೆ ಬಾಲಕಾರ್ಮಿಕರು ಎಂದು ವಿಂಗಡಿಸಬಹುದು. ಪೂರ್ಣ ಪ್ರಮಾಣದ ಬಾಲಕಾರ್ಮಿಕರು ಶಾಲೆಯಿಂದ ಸಂಪೂರ್ಣವಾಗಿ

ಹೊರಗುಳಿದು ಕೆಲಸದಲ್ಲಿ ತೊಡಗಿಕೊಂಡಿರುವವರು ಎಂದು ಹೇಳಬಹುದು. ಇನ್ನೂ ಅರೆ ಬಾಲಕಾರ್ಮಿಕರು ಎಂದರೆ ಶಾಲೆಯ ರಜಾದಿನಗಲ್ಲಿ ಕೆಲಸಕ್ಕೆ ಹೋಗುವವರನ್ನು ಅರೆ ಬಾಲಕಾರ್ಮಿಕರು ಎಂದು ಕರೆಯಬಹುದು.

ಬಾಲಕಾರ್ಮಿಕರಲ್ಲಿ ಎರಡು ರೀತಿಯ ಬಾಲಕಾರ್ಮಿರನ್ನು ಕಾಣಬಹುದು. ಅವುಗಳೆಂದರೆ ಮಕ್ಕಳು ತಾವಾಗಿಯೇ ಕೆಲಸಕ್ಕೆ ಹೋಗುವುದನ್ನು ಮಕ್ಕಳ ದುಡಿಮೆ ಎಂದೂ ಹಾಗೂ ಮಕ್ಕಳನ್ನು ಬಲವಂತವಾಗಿ ಕೆಲಸಕ್ಕೆ ಕಳುಹಿಸುವುದನ್ನು ಬಲವಂತದ ಮಕ್ಕಳ ದುಡಿಮೆ ಎಂದು ಕರೆಯಬಹುದು. ಅದೇ ರೀತಿಯಲ್ಲಿ ಬಾಲಕಾರ್ಮಿಕರ ದುಡಿಮೆಯನ್ನು ಎರಡು ರೀತಿಯಲ್ಲಿ ವಿಂಗಡಿಸಬಹುದು. ಮೊದಲನೆಯದಾಗಿ ಅಪಾಯಕಾರಿ ಉದ್ದಿಮೆಗಳಲ್ಲಿ ಕೆಲಸ ಮಾಡುತ್ತಿರುವ ಬಾಲಕಾರ್ಮಿಕರು ಹಾಗೂ ಎರಡನೆಯದಾಗಿ ಅಪಾಯಕಾರಿಯಲ್ಲದ ಉದ್ದಿಮೆಗಳಲ್ಲಿ ಕೆಲಸಮಾಡುತ್ತಿರುವ ಬಾಲಕಾರ್ಮಿಕರು ಎಂದು ವಿಂಗಡಿಸಬಹುದು.

ಭಾರತದ ಸಂವಿಧಾನದ ಅನುಚ್ಛೇದ–45ರಲ್ಲಿ ತಿಳಿಸಿರುವಂತೆ ದೇಶದಲ್ಲಿರುವ ಪ್ರತಿಯೊಂದು ಮಗುವಿಗೂ ಕಡ್ಡಾಯ ಮತ್ತು ಉಚಿತ ಶಿಕ್ಷಣ ನೀಡಬೇಕು ಹಾಗೂ ಮೂಲಭೂತ ಹಕ್ಕುಗಳ ಪರಿಚ್ಛೇದಗಳಾದ. 23 ಮತ್ತು 24ನೇ ವಿಧಿಯು ಮಕ್ಕಳ ವಿರುದ್ಧದ ಶೋಷಣೆಯ ಹಕ್ಕನ್ನು ಸ್ಪಷ್ಟಪಡಿಸಿದ್ದು, 28ನೇ ವಿಧಿಯ ಪ್ರಕಾರ ಹದಿನಾಲ್ಕು ವಯಸ್ಸಿನೊಳಗಿನ ಮಕ್ಕಳನ್ನು ಗಣಿ, ಕಾರ್ಖಾನೆ ಹಾಗೂ ಇನ್ನಿತರ ಅಪಾಯಕಾರಿ ಕೆಲಸಗಳಲ್ಲಿ ತೊಡಗಿಸದಂತೆ ಪ್ರತಿಬಂಧಿಸಲಾಗಿದೆ. ಹೀಗೆ ಭಾರತ ಸಂವಿಧಾನದಲ್ಲಿ 14 ವರ್ಷದ ಒಳಗಿನ ಮಕ್ಕಳಿಗೆ ಹಕ್ಕುಗಳನ್ನು ಹಾಗೂ ರಕ್ಷಣೆಯನ್ನು ಕೊಡಲಾಗಿದೆ.

ಬಾಲಕಾರ್ಮಿಕರ ಕುರಿತಾಗಿ 1998ರಲ್ಲಿ ಭಾರತದ ಸರ್ವೋಚ್ಛ ನ್ಯಾಯಾಲಯವು ಒಂದು ಐತಿಹಾಸಿಕ ಮಹತ್ವದ ತೀರ್ಪನ್ನು ನೀಡಿದೆ. ಆದರೆ ಭ್ರಷ್ಟ ವ್ಯವಸ್ಥೆಯಲ್ಲಿ ಕಾನೂನು ಅನುಷ್ಠಾನ ಪರಿಸ್ಥಿತಿ ಸಡಿಲವಿರುವುದರಿಂದ ಅದರ ಪರಿಣಾಮ ಗಂಭೀರವಾಗಿಲ್ಲ. ಈ ತೀರ್ಪಿನಂತೆ ರೂ. 25,000/–ಗಳನ್ನು ದುಡಿಸಿಕೊಳ್ಳುವವರು ದಂಡ ಕೊಡಬೇಕಾಗುತ್ತದೆ. ಆದ್ದರಿಂದ ಯಾವ್ಯದೇ ಮಾಲೀಕರು ಹಾಗೂ ಪೋಷಕರು ದುಡಿಯುವ ಮಕ್ಕಳ ಇರುವಿಕೆ ಬಗ್ಗೆ ದಾಖಲೆ ಕೊಡುವುದಿಲ್ಲ.

ಭಾರತದ ಒಟ್ಟು ಜನಸಂಖ್ಯೆ ಶೇಕಡಾ 40ರಷ್ಟು ಮಂದಿ 15ವರ್ಷಕ್ಕೂ ಕೆಳಗಿನ ವಯಸ್ಸಿನ ಮಕ್ಕಳು ಇರುವರು. ಚೀನಾ ದೇಶವನ್ನು ಬಿಟ್ಟರೆ ಭಾರತದಲ್ಲಿ ಅತೀ ಹೆಚ್ಚಿನ ಮಕ್ಕಳ ಸಂಖ್ಯೆಯನ್ನು ಕಾಣಬಹುದು. 1901ರಲ್ಲಿ 15 ವರ್ಷಕ್ಕೂ ಕಡಿಮೆ ವಯಸ್ಸಿನವರ ಸಂಖ್ಯೆ ದೇಶದಲ್ಲಿ ಸುಮಾರು 90.36 ದಶಲಕ್ಷದಷ್ಟಿದ್ದರೆ, 1991ರಲ್ಲಿ ಈ ಸಂಖ್ಯೆಯ 310 ದಶಲಕ್ಷದಷ್ಟು ಏರಿದೆ.

ಅಂತರಾಷ್ಟ್ರೀಯ ಕಾರ್ಮಿಕ ಸಂಸ್ಥೆ ನಡೆಸಿದ ಸಮೀಕ್ಷೆಯೊಂದರ ಪ್ರಕಾರ ಇಡೀ ಜಗತ್ತಿನಲ್ಲಿ 15 ವರ್ಷಗಳಿಗಿಂತ ಕಡಿಮೆ ವಯಸ್ಸಿನ ಬಾಲಕಾರ್ಮಿಕರ ಸಂಖ್ಯೆ ಫ್ರಾನ್ಸ ಅಥವಾ ಬ್ರಿಟನ್ ದೇಶವೊಂದರ

ಜನಸಂಖ್ಯೆಯಷ್ಟಿವೆ. ಕುಟುಂಬ ಉದ್ಯಮಗಳಲ್ಲಿ ಹಾಗೂ ಕೃಷಿ ಕ್ಷೇತ್ರಗಳಲ್ಲಿ ಲಕ್ಷಾಂತರ ಮಕ್ಕಳು ವೇತನವಿಲ್ಲದ ದುಡಿಯುತ್ತಿದ್ದಾರೆ. ಸಣ್ಣಪುಟ್ಟ ಕಾರ್ಖಾನೆಗಳು, ಕೈಗಾರಿಕಾ ಘಟಕಗಳು ಮತ್ತಿತರ ಕ್ಷೇತ್ರಗಳಲ್ಲಿ ಹಗಲಿರುಳು ಶ್ರಮಿಸುತ್ತಿದ್ದಾರೆ ಎಂಬ ಅಂಶವು ಸಮೀಕ್ಷಾ ವರದಿಯಿಂದ ವ್ಯಕ್ತಪಟ್ಟಿವೆ. ಇಂತಹ ಬಾಲಕಾರ್ಮಿಕರ ಸಂಖ್ಯೆ ಖಚಿತವಾಗಿ ತಿಳಿಸಲಾಗದು. ಕೆಲವು ದೇಶಗಳಲ್ಲಿ 15 ವರ್ಷಗಳಿಗಿಂತ ಕಡಿಮೆ ವಯಸ್ಸಿನ ಕಾರ್ಮಿಕರನ್ನು ಅಂಕಿ–ಅಂಶಗಳಲ್ಲಿ ಸೇರಿಸದಿರುವುದರಿಂದ ಸರಿಯಾದ ಸಂಖ್ಯಾ ಮಾಹಿತಿ ಲಭ್ಯವಾಗುತ್ತಿಲ್ಲ. ಅದಾಗ್ಯೂ ಜಗತ್ತಿನ ದುಡಿಯುವ ಮಕ್ಕಳಲ್ಲಿ ಸುಮಾರು 1/4 ಭಾಗದಷ್ಟು ಮಂದಿ ಭಾರತದಲ್ಲಿದ್ದಾರೆ. ಅಂತರಾಷ್ಟ್ರೀಯ ಕಾರ್ಮಿಕ ಸಂಸ್ಥೆಯ ವರದಿಯಲ್ಲಿ ಅಧಿಕ ಸಂಖ್ಯೆಯಲ್ಲಿ ಇಂದು ಕಡಿಮೆ ವೇತನವನ್ನು ನಿಡಿ ಹೆಚ್ಚು ಗಂಟೆಗಳ ಕಾಲ ಕೆಲಸ ಮಾಡಿಕೊಳ್ಳುವವರಲ್ಲಿ ಬಾಲಕಿಯರು ಅಧಿಕವಾಗಿದ್ದರೆಂದು ತಿಳಿಸಿದೆ.

ಯೋಜನಾ ಆಯೋಗದ (Planning Commission) ಮಾಹಿತಿಯೊಂದರ ಪ್ರಕಾರ ಭಾರತದಲ್ಲಿ ಬಾಲಕಾರ್ಮಿಕರ ಸಂಖ್ಯೆ 17.36 ದಶಲಕ್ಷದಷ್ಟಿದೆ. ಆದರೆ ಅನಧಿಕೃತ ಮೂಲದ ಪ್ರಕಾರ ಬಾಲಕಾರ್ಮಿಕರ ಸಂಖ್ಯೆ 44 ರಿಂದ 100 ದಶಲಕ್ಷವೆಂದು ಅಂದಾಜು ಮಾಡಲಾಗಿದೆ.

ದಿ ಹಿಂದೂಸ್ತಾನ ಟೈಮ್ಸ ಪತ್ರಿಕೆಯ ಪ್ರಕಾರ– 1989ರ ಹೊತ್ತಿಗೆ ಒಟ್ಟು ಜನಸಂಖ್ಯೆಯ 5.5. ರಷ್ಟು ಮಂದಿ ಅಂದರೆ 44 ದಶಲಕ್ಷ ಬಾಲ ಕಾರ್ಮಿಕರಿದ್ದರೆಂದು ವರದಿ ಮಾಡಿದೆ.

ಭಾರತ ಸಕಾರದ ಕಾರ್ಮಿಕ ಇಲಾಖೆ(Ministry of Labour) ಸಮೀಕ್ಷೆಯ ಪ್ರಕಾರ 1986ರಲ್ಲಿ ಸುಮಾರು 102.3 ದಶಲಕ್ಷ ಕುಟುಂಬಗಳಲ್ಲಿ ಸುಮಾರು 34.7ರಷ್ಟು ಕುಟುಂಬಗಳು ದುಡಿಯುವ ಮಕ್ಕಳನ್ನು ಹೊಂದಿದ್ದವೆಂದು ತಿಳಿಸಲಾಗಿದೆ. ಈ ಮಕ್ಕಳಲ್ಲಿ ಸುಮಾರು 79%ರಷ್ಟು ಮಂದಿ ಗ್ರಾಮೀಣ ಪ್ರದೇಶದವರಾಗಿದ್ದುದು ವಿಶೇಷವಾಗಿದೆ. ದುಡಿಯುವ ಮಕ್ಕಳಲ್ಲಿ ಸುಮಾರು 2/3ರಷ್ಟು ಮಂದಿ 12 ರಿಂದ 15 ವರ್ಷ ವಯಸ್ಸನವರಾದರೆ ಉಳಿದವರೆಲ್ಲರೂ 12 ವರ್ಷಗಳಿಗಿಂತಲೂ ಚಿಕ್ಕವರಾಗಿದ್ದರು.

ಇಂದಿನ ಮಕ್ಕಳೇ ನಾಳಿನ ಪ್ರಜೆಗಳು ಎಂಬ ಮಾತು ಅಕ್ಷರಶಃ ನಿಜವಾಗಬೇಕಾದರೆ ಮಕ್ಕಳ ಬಗೆಗೆ ಪ್ರತಿಯೊಬ್ಬರು ವಿಶೇಷವಾಗಿ ಕಾಳಜಿ ವಹಿಸುವುದು ತುಂಬಾ ಅಗತ್ಯವಾಗಿದೆ. ವೈಜ್ಞಾನಿಕವಾಗಿ ಮತ್ತು ತಾಂತ್ರಿಕವಾಗಿ ಬಹಳಷ್ಟು ಮುನ್ನಡೆದಿದ್ದೇವೆ ಎನ್ನುವ ನಾವು ಬಾಲಕಾರ್ಮಿಕ ಸಮಸ್ಯೆಯ ನಿವಾರಣೆಯತ್ತ ಸೋತಿದ್ದೇವೆ. ಈ ಸಮಸ್ಯೆ ಹಾಗೆಯೇ ಮುಂದುವರೆದಿದೆ. ಮಕ್ಕಳ ದುಡಿಮೆಯ ಸಮಸ್ಯೆಯು ದೇಶದಲ್ಲಿ ವ್ಯಾಪಕ ಹಾಗೂ ಗಂಭೀರ ಸ್ವರೂಪದ್ದಾಗಿದ್ದು, ಅದನ್ನು ಸುಧಾರಿಸುವ ಪ್ರಯತ್ನಕ್ಕೆ ಒಂದು ಸವಾಲೆನಿಸಿದೆ. ವ್ಯಾಪಕವಾದ ಬಡತನ ಮತ್ತು ಇತರ ಸಾಮಾಜಿಕ – ಆರ್ಥಿಕ ಪರಿಸ್ಥಿತಿಗಳಿಂದಾಗಿ ಮಕ್ಕಳ ದುಡಿಮೆಯನ್ನು ನಿವಾರಿಸುವುದು ಸಧ್ಯದಲ್ಲಿ ಕಷ್ಟವೆನಿಸಿದೆ.

ಒಂದು ಅಂದಾಜಿನ ಪ್ರಕಾರ ಭಾರತದಲ್ಲಿ ಹತ್ತು ಕೋಟಿಗಿಂತ ಹೆಚ್ಚು ಬಾಲಕಾರ್ಮಿಕರು ದುಡಿಯುತ್ತಿದ್ದಾರೆ. ಈ ಪ್ರಮಾಣ ಒಟ್ಟು ಕಾರ್ಮಿಕರ ಶೇ.20 ರಷ್ಟಿದೆ. ನಮ್ಮ ರಾಜ್ಯದಲ್ಲಿಯೇ ಸುಮಾರು 12 ರಿಂದ 15 ಸಾವಿರ ಬಾಲಕಾರ್ಮಿಕರು ಅಪಾಯಕಾರಿ ಉದ್ದಿಮೆಗಳಲ್ಲಿಯೂ ಮತ್ತು 30 ರಿಂದ 40 ಸಾವಿರ ಬಾಲಕಾರ್ಮಿಕರು ಅಪಾಯಕಾರಿ ಅಲ್ಲದ ಉದ್ದಿಮೆಗಳಲ್ಲಿ ದುಡಿಯುತ್ತಿದ್ದಾರೆ.

ಭಾರತದ ಜನಸಂಖ್ಯೆಯ ಸುಮಾರು ಅರ್ಧದಷ್ಟು ಜನರು ಬಡತನ ರೇಖೆಯ ಕೆಳಗಡೆ ಜೀವಿಸುತ್ತಿದ್ದಾರೆ. ಹಾಗೂ ಗ್ರಾಮೀಣ ಪ್ರದೇಶದಲ್ಲಿ ಭೂಮಿಯ ಹಂಚಿಕೆ ಮತ್ತು ಭೂ ಒಡೆತನವು ಅತ್ಯಂತ ಅಸಮಾನ ರೀತಿಯಲ್ಲಿದೆ. ಕೆಳವರ್ಗದಲ್ಲಿರುವ ಸುಮಾರು ಅರ್ಧದಷ್ಟು ಸಂಸಾರಗಳು ಕೇವಲ ಶೇ.4 ರಷ್ಟು ಭಾಗ ಜಮೀನನ್ನು ಸಾಗುವಳಿ ಮಾಡುತ್ತಿದ್ದರೆ, ಸುಮಾರು ಶೇ.30.4 ರಷ್ಟು ಕುಟುಂಬಗಳು ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಬೃಹತ್ ನಗರಗಳ ಸುಮಾರು 1/3 ಜನರು ಕೊಳಚೆ ಪ್ರದೇಶಗಳಲ್ಲಿ ಹಾಗೂ ತಾತ್ಕಾಲಿಕ ಆಸರೆ ಒದಗಿಸುವ ಜೋಪಡಿಗಳಲ್ಲಿ ವಾಸಿಸುತ್ತಿದ್ದಾರೆ. ಇಂತಹ ಕುಟುಂಬಗಳಲ್ಲಿ ಪ್ರತಿ ಒಂದು ಮಗುವನ್ನು ದುಡಿಯುವ ಮತ್ತೋರ್ವ ಸದಸ್ಯನೆಂದೇ ಪರಿಗಣಿಸಲಾಗುತ್ತಿದೆ. ಮಕ್ಕಳ ದುಡಿಮೆಯಿಂದಾಗಿ ಬರುವ ಆದಾಯವು ಅತ್ಯಲ್ಪವೆನಿಸಿದರೂ ಇಂತಹ ಕುಟುಂಬಗಳನ್ನು ಆರ್ಥಿಕ ದುಃಸ್ಥಿತಿಯಿಂದ ಪಾರುಮಾಡಲು ನೆರವಾಗಬಲ್ಲದು. ಆರ್ಥಿಕ ಪರಿಸ್ಥಿತಿಯ ಒತ್ತಡವು ಬಡ ಕುಟುಂಬಗಳ ಪೋಷಕರು ತಮ್ಮ ಮಕ್ಕಳನ್ನು ದುಡಿಮೆಗೆ ಹಾಗೂ ಶೋಷಣೆಗೆ ನೂಕಲೂ ಪ್ರೇರೇಪಿಸುತ್ತದೆ ಬಡತನ ಮತ್ತು ಮಕ್ಕಳ ದುಡಿಮೆಯು ಒಂದು ಮತ್ತೊಂದನ್ನು ಸೃಷ್ಟಿಸುವುದಲ್ಲದೆ, ಇವೆರಡೂ ಅಂತಹ ಕುಟುಂಬಗಳಲ್ಲಿ ಬೇರೂರುತ್ತವೆ.

ಭಾರತದಲ್ಲಿ ಮಕ್ಕಳ ದುಡಿತಕ್ಕೆ ಜೀವನಾವಶ್ಯಕ ವಸ್ತುಗಳ ಕೊರತೆಯೇ ಕಾರಣವಾಗಿದೆ. ಅದರಲ್ಲೂ ಗ್ರಾಮೀಣ ಸಮುದಾಯದ ಬಡಜನರು ಆಸ್ತಿಪಾಸ್ತಿಯಿಲ್ಲದೆ ಜೀವನ ನಿರ್ವಹಣೆಗೆ ಕಷ್ಟವಾಗಿರುವದರಿಂದ ತಮ್ಮ ಜೀವನಾವಶ್ಯಕತೆಗಳನ್ನು ಈಡೇರಿಸಿಕೊಳ್ಳಲು ಮಕ್ಕಳನ್ನೇ ಒತ್ತೆಯಿಡುತ್ತಿದ್ದಾರೆ ಕುಟುಂಬದ ಆದಾಯವನ್ನು ಹೆಚ್ಚಿಸಲು ಮಕ್ಕಳನ್ನು ಒತ್ತಾಯ ಪೂರ್ವಕವಾಗಿ ಕೆಲಸಕ್ಕೆ ಕಳುಹಿಸುತ್ತಾರೆ ಅವರಿಗೆ ಸಿಗುವ ದಿನಗೂಲಿ ಕೂಡ ಕಡಿಮೆಯಾಗಿರುತ್ತದೆ ತಂದೆ ತಾಯಿಗಳ ಅನಾರೋಗ್ಯ, ದೈಹಿಕ ಹಾಗೂ ಮಾನಸಿಕ ಅಂಗವಿಕಲತೆ, ನಿರುದ್ಯೋಗ ಮುಂತಾದ ಅಂಶಗಳು ಮಕ್ಕಳನ್ನು ದುಡಿಯುವಂತೆ ಪ್ರೇರೆಪಿಸುತ್ತದೆ. ಬದುಕಿನ ಅನಿವಾರ್ಯತೆಗೆ ದುಡಿಯಲೇ ಬೇಕಾಗುತ್ತದೆ. ಮಕ್ಕಳ ದುಡಿಮೆಯ ಹಣ ಇಲ್ಲದಿದ್ದರೆ, ಆ ಕುಟುಂಬಗಳ ಪರಿಸ್ಥಿತಿ ಶೋಚನಿಯವಾಗಿರುತ್ತದೆ. ಒಬ್ಬನ ಕೂಲಿಯಿಂದ ಇಡೀ ಕುಟುಂಬ ಜೀವನ ಸಾಗಿಸಲು ದುಸ್ತರವಾಗುತ್ತದೆ. ಪುರುಷರು, ಸ್ತ್ರೀಯರು ಮತ್ತು ಮಕ್ಕಳು ಎಲ್ಲ ಸದಸ್ಯರು ದುಡಿಯಲೇ ಬೇಕು. ಪರ್ಯಾಯವಾದ ವ್ಯವಸ್ಥೆಯಿಲ್ಲದಿದ್ದರೆ ದಿನಕ್ಕೆ ಎರಡು ಹೊತ್ತಿನ

ಊಟ ಸಿಗುವುದು ಕಷ್ಟವಾಗುತ್ತದೆ. ಹೀಗಾಗಿ ಅವರು ಅನುಭವಿಸುತ್ತಿರುವ ಕಡುಬಡತನ ಮಕ್ಕಳ ದುಡಿಮೆಗೆ ಪ್ರಮುಖ ಕಾರಣವಾದ ಅಂಶವಾಗಿದೆ.

ಭಾರತವು ವಿಶ್ವದಲ್ಲಿಯೇ ಅತೀ ಹೆಚ್ಚು ಮಕ್ಕಳನ್ನು ಹೊಂದಿರುವ ದೇಶ. ಪ್ರತಿ ವರ್ಷ ಇಲ್ಲಿ ಸುಮಾರು ಐವತ್ತು ಸಾವಿರ ಮಕ್ಕಳು ಕಾಣೆಯಾಗುತ್ತಾರೆ. ಇವರಲ್ಲಿ ಸುಮಾರು 15 ಸಾವಿರ ಮಕ್ಕಳು ಪತ್ತೆಯಾಗುವುದೇ ಇಲ್ಲ. ರಾಜ್ಯದಲ್ಲಿ ಪ್ರತಿದಿನ ಒಬ್ಬ ಬಾಲಕಾರ್ಮಿಕ ಅಪಾಯಕಾರಿ ಉದ್ದಿಮೆಗಳಲ್ಲಿ ಕೆಲಸ ಮಾಡುವ ಸಂದರ್ಭದಲ್ಲಿ ದುರ್ಮರಣಕ್ಕೀಡಾಗುತ್ತಾನೆ. ಸಮಾಜದ ನಿರ್ಲಕ್ಷ್ಯ, ಬಂಡವಾಳ ಶಾಹಿಗಳ ದುರಾಸೆ, ಅಧಿಕಾರಿಗಳ ನಿಷ್ಕ್ರಿಯತೆಯಿಂದ ಬಾಲಕಾರ್ಮಿಕ ಪದ್ದತಿ ಇನ್ನೂ ಜೀವಂತವಾಗಿ ಉಳಿದಿದೆ. 1993 ರಿಂದ ಇತ್ತೀಚಿನವರೆಗೂ ಸರ್ಕಾರ ಬಾಲಕಾರ್ಮಿಕ ಪದ್ದತಿ ನಿಷೇಧಕ್ಕೆ ಸಂಬಂಧಿಸಿದಂತೆ ಅನೇಕ ಕಾಯಿದೆ ಕಾನೂನುಗಳನ್ನು ರೂಪಿಸಿದೆ. ಆದರೆ ಇವುಗಳನ್ನು ಜಾರಿಗೆ ತರಬೇಕಾದ ಅಧಿಕಾರಿಗಳ ನಿಷ್ಕ್ರಿಯತೆ ಮತ್ತು ರಾಜಕೀಯ ಇಚ್ಛಾಶಕ್ತಿಯ ಕೊರತೆಯಿಂದಾಗಿ ಜಾರಿ ಹಂತದಲ್ಲಿಯೇ ಸೋತಿವೆ.

ಕರ್ನಾಟಕ ರಾಜ್ಯ ಸರ್ಕಾರ 2002 ರಲ್ಲಿ ಬಾಲಕಾರ್ಮಿಕ ಪದ್ದತಿ ನಿರ್ಮೂಲನಾ ಕ್ರಿಯಾ ಯೋಜನೆ ಆರಂಭಿಸಿ ರಾಜ್ಯವನ್ನು 2007 ರ ಒಳಗಾಗಿ ಬಾಲಕಾರ್ಮಿಕ ಮುಕ್ತ ರಾಜ್ಯವನ್ನಾಗಿ ಮಾಡುವುದಾಗಿ ಘೋಷಿಸಿತ್ತು. ಅಧಿಕಾರಿಗಳ ನಿಷ್ಕ್ರಿಯತೆಯಿಂದಾಗಿ ಈ ಯೋಜನೆಯ ಮೂಲ ಉದ್ದೇಶವೇ ವಿಫಲವಾಗಿದೆಯೆಂದು ಹೇಳಲಾಗುತ್ತಿದೆ. ಆದಾಗ್ಯೂ ಈ ಯೋಜನೆಯನ್ನು ಪುನಃ 2012 ರವರೆಗೆ ವಿಸ್ತರಿಸಲಾಗಿದೆ.

ಬಾಲಕಾರ್ಮಿಕರ ಸಂರಕ್ಷಣಾ ಕಾನೂನುಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರುವ ಪ್ರಯತ್ನ ನಡೆಯಬೇಕು. ಭಾರತದಲ್ಲಂತೂ ಕಾನೂನುಗಳಿಗೆ ಕೊರತೆ ಇಲ್ಲ. ಆದರೆ ಅನುಷ್ಠಾನ ಮಾತ್ರ ಸಾಧ್ಯವಾಗಿಲ್ಲ. ಸಮೂಹ ಮಾಧ್ಯಮಗಳ ಮೂಖಾಂತರ ಈ ಬಗ್ಗೆ ಪ್ರಚಾರ ಆಂದೋಲನವನ್ನು ಕೈಗೊಳ್ಳಬೇಕು. ಇವೆಲ್ಲಕ್ಕಿಂತ ಮಿಗಿಲಾಗಿ ಬಾಲಕಾರ್ಮಿಕರ ಶೋಷಣೆಯ ಬಗೆಗೆ ಸಾಮಾಜಿಕ ಅರಿವು, ಸಾಮಾಜಿಕ ಜಾಗೃತಿ ಪ್ರತಿಯೊಬ್ಬರಲ್ಲಿ ಮೂಡಿಸಬೇಕು. ಪ್ರತಿಯೊಬ್ಬ ತಂದೆ-ತಾಯಿಂದಿರು ತಮ್ಮ ಮಕ್ಕಳ ಭವಿಷ್ಯವನ್ನು ನಿರ್ಧರಿಸುವಲ್ಲಿ ನಿರ್ಣಾಯಕ ಪಾತ್ರ ವಹಿಸಿದ್ದೆ ಆದರೆ ಈ ಸಮಸ್ಯೆಯನ್ನು ಕೆಲವೇ ವರ್ಷಗಳಲ್ಲಿ ಬಗೆಹರಿಸಬಹುದು. ನಮ್ಮ ದೇಶದಲ್ಲಿ ನವಂಬರ್ 14 ರಂದು ಮಕ್ಕಳ ದಿನಾಚರಣೆಯನ್ನು ಆಚರಿಸುತ್ತೇವೆ. ಅಂದು ಮಕ್ಕಳ ಯೋಗಕ್ಷೇಮ, ಬಾಲಕಾರ್ಮಿಕರ ದುಡಿಮೆಯ ಕುರಿತು ಚರ್ಚಿಸಬೇಕು. ಈ ವಿಚಾರ ಕುರಿತು ಅಂದು ವಿಚಾರ ಸಂಕೀರ್ಣಗಳನ್ನು ಏರ್ಪಡಿಸಬೇಕು. ಈ ನಿಟ್ಟಿನಲ್ಲಿ ತಜ್ಞರು ಸಲಹೆ ಪ್ರವೃತ್ತರಾಗಬೇಕು. ಇಲ್ಲದಿದ್ದರೆ ಈ ಸಮಸ್ಯೆಗೆ ಪರಿಹಾರವಿಲ್ಲ.

## 1.1 ಅಧ್ಯಯನದ ಮಹತ್ವ

ಬಾಲಕಾರ್ಮಿಕರನ್ನು ಸಾಮಾಜಿಕ-ಆರ್ಥಿಕ ನೆಲೆಯಲ್ಲಿ ವಿಶ್ಲೇಷಣೆಗೊಳಪಡಿಸುವ ಅಗತ್ಯವಿದೆ. ಇಂದು ದೇಶದಾದ್ಯಂತ ಒಂದು ಗಂಭೀರ ಸಮಸ್ಯೆಯಾಗಿ ಪರಿಣಮಿಸಿರುವ ಬಾಲ ಕಾರ್ಮಿಕರ ಇಂದಿನ ಸಾಮಾಜಿಕ ಸ್ಥಿತಿಗಳು ಹಾಗೂ ಶೋಷಣೆಗಳನ್ನು ವಿಶ್ಲೇಷಣೆಗೊಳಪಡಿಸಬೇಕಾದ ತುರ್ತು ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಅವರ ಸ್ಥಿತಿಗತಿಗಳ ಕುರಿತು ಅಧ್ಯಯನ ಮಾಡಲಾಗಿದೆ.

ಬಾಲಕಾರ್ಮಿಕರಲ್ಲಿ ಸುಮಾರು ಶೇ.90ರಷ್ಟು ಮಂದಿ ಗ್ರಾಮೀಣ ಭಾಗಗಳಲ್ಲಿ ದುಡಿಯುತ್ತಿದ್ದಾರೆ. ಶೇ.10ರಷ್ಟು ಬಾಲಕಾರ್ಮಿಕರು ನಗರ ಪ್ರದೇಶಗಳಲ್ಲಿ ಕೆಲಸವನ್ನು ನಿರ್ವಹಿಸುತ್ತಿದ್ದಾರೆ. ಅವರಲ್ಲಿ ಸುಮಾರು ಶೇ.60 ರಷ್ಟು ಮಕ್ಕಳು 10 ವರ್ಷವಯಸ್ಸಿಗಿಂತ ಚಿಕ್ಕವರು. ಶೇ.23 ರಷ್ಟು ಬಾಲಕಾರ್ಮಿಕರು ವ್ಯಾಪಾರ ವಹಿವಾಟುಗಳಲ್ಲಿ ತೊಡಗಿಕೊಂಡಿದ್ದಾರೆ. ಶೇ.36 ರಷ್ಟು ಮನೆಗೆಲಸಗಳಲ್ಲಿ ನಿರತರಾಗಿದ್ದಾರೆ. ನಗರಗಳಲ್ಲಿ ಅಪಾರ ಸಂಖ್ಯೆಯ ಬಾಲಕಾರ್ಮಿಕರು ಹೋಟೆಲು, ಬಾರ್ ಹಾಗೂ ಧಾಬಾಗಳಲ್ಲಿ ಕೆಲಸ ಮಾಡಿದರೆ ಇನ್ನು ಹಲವರು ಪೇಪರ್, ಪ್ಲಾಸ್ಟಿಕ್ ಮತ್ತು ಚಿಂದಿ ಹೆಕ್ಕುವ ಕೆಲಸಮಾಡುತ್ತಿದ್ದಾರೆ. ದುರ್ದೈವ ವಶಾತ್ ಇವರೆಲ್ಲರ ಸಂಖ್ಯೆಯು ದಾಖಲೆಗಳಿಗೆ ಸೇರಿಕೊಂಡಿರುವುದಿಲ್ಲ. ದಾಖಲಿಸಿದ ಬಾಲಕಾರ್ಮಿಕರ ಸಂಖ್ಯೆಗಿಂತ ದಾಖಲಿಸದಿರುವ ಬಾಲಕಾರ್ಮಿಕರ ಸಂಖ್ಯೆಯು ಹೆಚ್ಚಿದೆ. ಇದರಿಂದ ಬಾಲಕಾರ್ಮಿಕರ ಸಂಖ್ಯೆಯ ಭೀಕರತೆಯ ಅರಿವು ನಮಗಾಗುತ್ತದೆ.

ಜಗತ್ತಿನಾದ್ಯಂತ ಬಹುತೇಕ ಮಕ್ಕಳು ಈ ಸಮಸ್ಯೆಗೆ ಸಿಲುಕಲು ಆರ್ಥಿಕ ದುರವ್ಯವಸ್ಥೆಯಿಂದಲೇ ಎಂದು ಹೇಳಬಹುದು. ಮಕ್ಕಳನ್ನು ದುಡಿಮೆಗೆ ಬಳಸುವುದು ಒಂದು ಆಚರಣೆ ಎಂಬಂತೆ ಕಾಣುತ್ತದೆ. ಕುಟುಂಬದ ಆದಾಯವನ್ನು ಹೆಚ್ಚಿಸುವುದಕ್ಕಾಗಿ ಹಿರಿಯರು ಮಕ್ಕಳನ್ನು ದುಡಿಮೆಗೆ ಕಳಿಸುವ ದುರವಸ್ಥೆ ಕುಟುಂಬದ ಮುಖ್ಯಸ್ಥನಾಗಿರುತ್ತದೆ.

ಆದರೆ ಬಾಲ ದುಡಿಮೆಯ ಬಗೆಗೆ ತಂದೆ-ತಾಯಿಗಳು, ಮಾಲೀಕರು, ಕಾರ್ಮಿಕ ಸಂಘಗಳು ಬೇರೆ ಬೇರೆ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಬಡವರ ಮಕ್ಕಳನ್ನು ಮಾನವೀಯ ಕಾರಣಗಳಿಂದಾಗಿ ತಾವು ಉದ್ಯೋಗಕ್ಕೆ ನೇಮಿಸಿಕೊಂಡಿರುವುದಾಗಿ ಮಾಲೀಕರು ಹೇಳುತ್ತಾರೆ. ಕಡಿಮೆ ಕೂಲಿಕೊಟ್ಟು ಸುಲಭವಾಗಿ ದುಡಿಸಿಕೊಳ್ಳಬಹುದಾದ್ದರಿಂದ ಈ ಮಾಲೀಕರು ಮಕ್ಕಳನ್ನು ನೇಮಿಸಿಕೊಳ್ಳುತ್ತಾರೆ ಎಂಬ ಮಾತಿನಲ್ಲಿ ಸತ್ಯವಿದೆ. ಮಾಲೀಕರಿಗೆ ಲಾಭವೊಂದೇ ಮುಖ್ಯ ಗುರಿಯಾಗಿರುವುದರಿಂದ ಅವರು ತಮ್ಮ ಸ್ವಾರ್ಥ ಸಾಧನೆಗೆ ಮಕ್ಕಳನ್ನು ಶೋಷಿಸುವುದಕ್ಕೆ ಹಿಂಜರಿಯುವುದಿಲ್ಲ. ದೊಡ್ಡವರು ಮಾಡಲಗದ ಕೆಲಸಕ್ಕೆ ತಾವು ಮಕ್ಕಳನ್ನು ನೇಮಿಸಿಕೊಂಡಿರುವುದಾಗಿ (ಅಂತಹ ಕೆಲಸಕ್ಕೆ ಚುರುಕು ಬೆರಳುಗಳು ಅಗತ್ಯ ಎಂಬ ಸಿದ್ಧಾಂತದ ಮೇರೆಗೆ) ಕೆಲವು ಮಾಲೀಕರು ದೃಢವಾಗಿ ನಂಬಿದ್ದಾರೆ. ಬಾಲಕಾರ್ಮಿಕರು ದುಡಿಯದಂತೆ ಮಾಡಿದರೆ ಕೈಗಾರಿಕಾ ಪ್ರಗತಿ ಸಾಧಿಸುತ್ತದೆ ಎಂದು ಸರ್ಕಾರ ನಿರೀಕ್ಷಿಸಲಾಗದು.

## 1.2. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ.

ಬಾಲಕಾರ್ಮಿಕ ಎಂಬ ಅನಿಷ್ಟ ಪದ್ಧತಿ ಇಂದು ಸಾಮಾಜಿಕ, ಆರ್ಥಿಕ ಸಮಸ್ಯೆಯಾಗಿದ್ದು, ಎಲ್ಲಾ ಗ್ರಾಮೀಣ ಮತ್ತು ನಗರ, ಪಟ್ಟಣ ಪ್ರದೇಶದಲ್ಲಿ ಇಂದಿಗೂ ಬೇರು ಬಿಟ್ಟಿದೆ. ಆದರೆ ಅದರ ಸ್ವರೂಪದಲ್ಲಿ ಮಾತ್ರ ಒಂದು ಕಾಲಘಟ್ಟದಿಂದ ಮತ್ತೊಂದು ಕಾಲಘಟ್ಟದವರೆಗೆ ಸ್ವಲ್ಪ ವ್ಯತ್ಯಾಸವನ್ನು ಕಾಣಬಹುದು.

ಆಟ ಪಾಠದೊಂದಿಗೆ ನಲಿಯುತ್ತ ಕಲಿಯುತ್ತಾ ಬಾಲ್ಯ ಕಳೆಯುವುದು ಪ್ರತಿಯೊಂದು ಮಗುವಿನ ಜನ್ಮಸಿದ್ಧ ಹಕ್ಕು. ಆದರೆ ಅನೇಕ ನತದೃಷ್ಟ ಮಕ್ಕಳು ಬಾಲ್ಯದಲ್ಲಿ ಸಂತಸ ಕ್ಷಣಗಳನ್ನು ಕಾಣದೆ ಈ ಹಕ್ಕಿನಿಂದ ವಂಚಿತರಾಗುತ್ತಿದ್ದಾರೆ. ಬಡತನ ಮತ್ತಿತರ ಕಾರಣಗಳಿಂದ ಹೋಟೆಲ್, ಬಾರ್, ರೆಸ್ಟೋರೆಂಟ್‌ಗಳಲ್ಲಿ ಮತ್ತು ಅಂಗಡಿ ಮುಂಗಟ್ಟುಗಳಲ್ಲಿ ಹಾಗೂ ಖಾಸಗಿ ಕೈಗಾರಿಕಾ ಘಟಕಗಳಲ್ಲಿ ಅಪ್ರಾಪ್ತ ವಯಸ್ಸಿನ ಮಕ್ಕಳ ಬಾಲ್ಯದ ಕನಸುಗಳು ಕಮರಿ ಹೋಗುತ್ತಿವೆ. ಶಾಲೆಗೆ ಹೋಗುವ ವಯಸ್ಸಿನಲ್ಲಿ ಹಗಲು-ರಾತ್ರಿ ದುಡಿಯುವ ಮಕ್ಕಳ ಸ್ಥಿತಿ ಶೋಚನೀಯವಾಗಿದೆ. ದೈಹಿಕ ಶ್ರಮ, ಮಾನಸಿಕ ಒತ್ತಡ, ಮಾಲಿಕರ ದಬ್ಬಾಳಿಕೆ-ದೌರ್ಜನ್ಯಗಳಿಂದಾಗಿ ಜರ್ಝರಿತರಾಗುತ್ತಿದ್ದಾರೆ. ಆರು ವರ್ಷ ದಿಂದ ಹದಿನಾಲ್ಕು ವರ್ಷ ವಯೋಮಾನದ ಮಕ್ಕಳನ್ನು ದುಡಿಸಿಕೊಳ್ಳುವುದು ಅಪರಾಧವಾಗಿದೆ. ಈ ಅಪರಾಧವನ್ನು ತಡೆಗಟ್ಟಲು ಅನೇಕ ದೇಶಗಳಲ್ಲಿ ಕಾಯ್ದೆ, ಕಾನೂನುಗಳಿವೆ. ಆದರೂ ಅವುಗಳು ಪರಿಣಾಮಕಾರಿಯಾಗಿ ಜಾರಿಯಾಗಿಲ್ಲ. ಬಹುಸಂಖ್ಯೆಯ ಮಕ್ಕಳು ದುಡಿದು ಬೆವರು ಸುರಿಸುತ್ತಲೇ ಇದ್ದಾರೆ. ದುಡಿಸಿಕೊಳ್ಳುವವರು ಅವರನ್ನು ಶೋಷಣೆ ಮಾಡುತ್ತಲೇ ಇದ್ದಾರೆ.

ಪ್ರಸ್ತುತ ಸಂಶೋಧನ ಮಹಾಪ್ರಬಂಧವು "ಬಾಲಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು (ಹೈದ್ರಾಬಾದ್ ಕರ್ನಾಟಕ ಪ್ರದೇಶದ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳನ್ನು ಅನುಲಕ್ಷಿಸಿ)" ಎಂಬ ಶೀರ್ಷಿಕೆಯನ್ನಿಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ಹೈದ್ರಾಬಾದ್-ಕರ್ನಾಟಕ ಪ್ರದೇಶದ ಜಿಲ್ಲೆಗಳಾದ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಹೆಚ್ಚಿನ ಬಾಲಕಾರ್ಮಿಕರನ್ನು ಹೊಂದಿರುವ ಬಳ್ಳಾರಿ ಜಿಲ್ಲೆಯ ಅಭಿವೃದ್ಧಿ ಹೊಂದಿದ ತಾಲ್ಲೂಕಾದ ಹೊಸಪೇಟೆ ಹಾಗೂ ಅಭಿವೃದ್ಧಿ ಹೊಂದುತ್ತಿರುವ ತಾಲ್ಲೂಕಾದ ಹಗರಿಬೊಮ್ಮನಹಳ್ಳಿ ತಾಲ್ಲೂಕುಗಳನ್ನು ಮತ್ತು ಕೊಪ್ಪಳ ಜಿಲ್ಲೆಯ ಅಭಿವೃದ್ಧಿ ಹೊಂದಿದ ತಾಲ್ಲೂಕಾದ ಗಂಗಾವತಿ ಹಾಗೂ ಅಭಿವೃದ್ಧಿ ಹೊಂದುತ್ತಿರುವ ತಾಲ್ಲೂಕಾದ ಕೊಪ್ಪಳ ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ ಈ ಹಿನ್ನಲೆಯಲ್ಲಿ ಅಧ್ಯಯನದ ಉದ್ದೇಶಗಳು ಕೆಳಗಿನಂತಿವೆ.

- ಬಾಲಕಾರ್ಮಿಕರ ಇಂದಿನ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳನ್ನು ಗುರುತಿಸಲಾಗಿದೆ.

- ಬಾಲಕಾರ್ಮಿಕ ಪದ್ಧತಿಗೆ ಕಾರಣವಾದ ಅಂಶಗಳ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ.
- ಬಾಲಕಾರ್ಮಿಕರು ಇಂದು ಎದುರಿಸುತ್ತಿರುವ ಹಲವು ಸಮಸ್ಯೆಗಳನ್ನು ಕಂಡು ಕೊಳ್ಳಲಾಗಿದೆ.
- ಬಾಲಕಾರ್ಮಿಕರನ್ನು ಪೋಷಿಸುವಲ್ಲಿ ಸರ್ಕಾರದ ಕಾನೂನಾತ್ಮಕ ಕ್ರಮಗಳ ಬಗ್ಗೆ ಹಾಗೂ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಪಾತ್ರಗಳ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ.
- ಬಾಲಕಾರ್ಮಿಕರ ಸಮಸ್ಯೆಗಳಿಗೆ ಪರಿಹಾರೋಪಾಯಗಳನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಬಾಲಕಾರ್ಮಿಕರು ಈ ಕೆಳಕಂಡ ಸ್ಥಳಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಇರುವುದನ್ನು ನನ್ನ ಅಧ್ಯಯನದಲ್ಲಿ ಕಂಡುಕೊಂಡಿದ್ದೇನೆ.

- ಹೆಚ್ಚಿನ ಪ್ರಮಾಣದಲ್ಲಿ ಕೃಷಿ ಚಟುವಟಿಕೆಗಳಲ್ಲಿ ಬಾಲಕಾರ್ಮಿಕರು.
- ಕುರಿ ಹಾಗೂ ದನಗಳನ್ನು ಕಾಯುತ್ತಿರುವ ಬಾಲಕಾರ್ಮಿಕರು.
- ಬಾರ್-ರೆಸ್ಟೋರೆಂಟ್‌ಗಳಲ್ಲಿ ಬಾಲಕಾರ್ಮಿಕರು.
- ತರಕಾರಿ ವ್ಯಾಪಾರದಲ್ಲಿ ಬಾಲಕಾರ್ಮಿಕರು.
- ಹೂವು-ಹಣ್ಣು ವ್ಯಾಪಾರದಲ್ಲಿ ಬಾಲಕಾರ್ಮಿಕರು.
- ದಿನಸಿ ವಸ್ತುಗಳು ಮತ್ತು ದಿನಪತ್ರಿಕೆ ವ್ಯಾಪಾರದಲ್ಲಿ ಬಾಲಕಾರ್ಮಿಕರು.
- ದುಶ್ಚಟದ ವಾತಾವರಣದಲ್ಲಿ ಬಾಲಕಾರ್ಮಿಕರು.
- ಗ್ಯಾರೇಜ್, ಸೈಕಲ್ ಶಾಪ್‌ಗಳಲ್ಲಿ ಬಾಲಕಾರ್ಮಿಕರು.
- ರೈಲು, ಬಸ್‌ನಿಲ್ದಾಣಗಳಲ್ಲಿ ಬಾಲಕಾರ್ಮಿಕರು.
- ಕಟ್ಟಿಗೆ ಮಾರಾಟದಲ್ಲಿ ಬಾಲಕಾರ್ಮಿಕರು.
- ಇಟ್ಟಿಗೆ ತಯಾರಿಕಾ ಕಾರ್ಯದಲ್ಲಿ ಬಾಲಕಾರ್ಮಿಕರು.
- ಚಿಂದಿ ಆಯುತ್ತಿರುವ ಹಾಗೂ ಭಿಕ್ಷಾಟನೆಯಲ್ಲಿ ಬಾಲಕಾರ್ಮಿಕರು.

## 1.3. ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನವು ಪ್ರಯೋಗಾತ್ಮಕ [ಎಂಪಿರಿಕಲ್] ಅಧ್ಯಯನವಾಗಿದ್ದು, ಈ ಅಧ್ಯಯನಕ್ಕೆ ಎರಡು ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಒಂದು ಪ್ರಾಥಮಿಕ ಅಂಕಿಅಂಶಗಳು (Primary datas) ಮತ್ತು ಅನುಷಂಗಿಕ ಅಂಕಿಅಂಶಗಳು (Secondary datas) ಅಧ್ಯಯನದ ಮೂಲಗಳಾಗಿವೆ. ಅಧ್ಯಯನದಲ್ಲಿ ಪ್ರಾಥಮಿಕ ಮಾಹಿತಿಯನ್ನು ಪ್ರಶ್ನಾವಳಿ, ಅನುಸೂಚಿ ಮತ್ತು ಸಂದರ್ಶನಗಳಿಂದ ಬಾಲಕಾರ್ಮಿಕರ ಸಾಮಾಜಿಕ, ಆರ್ಥಿಕ ಹಾಗೂ ಇನ್ನಿತರ ಸ್ಥಿತಿಗತಿಗಳ ಅಗತ್ಯವಾದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅನುಷಂಗಿಕ ಮಾಹಿತಿಯನ್ನು ಬಾಲಕಾರ್ಮಿಕರ ಬಗ್ಗೆ ನಡೆದ ಅಧ್ಯಯನಗಳಿಂದ ಸಂಬಂಧಿಸಿದ ಸರ್ಕಾರಿ ಕಛೇರಿಗಳಿಂದ ಅಂಕಿ ಅಂಶಗಳನ್ನು ಹಾಗೂ ಇತರ ಮಾಹಿತಿಗಳನ್ನು ಸೆನ್ಸನ್ ದಾಖಲೆಗಳು, ಸಂಶೋಧನಾ ಪ್ರಬಂಧಗಳು ಹಾಗೂ ಸರ್ಕಾರದ ಆದೇಶ ಸುತ್ತೋಲೆಗಳು, ಲೇಖನಗಳು, ನಿಯತಕಾಲಿಕೆಗಳು ಮತ್ತು ಗ್ರಂಥಗಳನ್ನು ಅಧ್ಯಯನ ಮಾಡಲಾಗಿದೆ. ಸಂಗ್ರಹಿಸಿದ ಮಾಹಿತಿಯನ್ನು ವಿವರಣಾತ್ಮಕ ಕೋಷ್ಟಕಗಳ ಮೂಲಕ ವಿಶ್ಲೇಷಣೆ ನೀಡಲಾಗಿದೆ.

ಇಂದು ನಮ್ಮ ದೇಶದಲ್ಲಿ ಹಳ್ಳಿಗಳಿಂದ ನಗರ ಪಟ್ಟಣದವರೆಗೆ ಚಿಕ್ಕ ಮಕ್ಕಳು ಹೊಲ ಮನೆಗಳಲ್ಲಿ ಬೀದಿ ಬದಿಯ ಹೋಟೆಲ್‌ಗಳಲ್ಲಿ, ಬಸ್ ನಿಲ್ದಾಣಗಳಲ್ಲಿ, ರೈಲು ನಿಲ್ದಾಣಗಳಲ್ಲಿ, ಕೃಷಿ ಚಟುವಟಿಕೆಗಳಲ್ಲಿ ಕೆಲಸ ಮಾಡುವುದು, ಬೂಟ್‌ಪಾಲಿಶ್ ಮಾಡುವುದು, ಪ್ರಯಾಣಿಕರ ಸಾಮಾನುಗಳನ್ನು ಹೊರುವುದು, ಪತ್ರಿಕೆ, ತಿಂಡಿ–ತಿನಿಸುಗಳನ್ನು ಮಾರುವುದು, ಗ್ಯಾರೇಜ್‌ಗಳಲ್ಲಿ ಕೆಲಸ ಮಾಡುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಇಂತಹ ಮಕ್ಕಳ ಸ್ಥಿತಿ ಧಾರುಣವಾಗಿದೆ. ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಸಾವಿರಾರು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಪ್ರಸ್ತುತ ಸಂಶೋಧನಾ ಅಧ್ಯಯನಕ್ಕೆ ಸಂಬಂಧಿಸಿದಂತೆ 450 ಬಾಲಕಾರ್ಮಿಕರನ್ನು ರ್‍ಯಾಂಡಮ್ ಮಾದರಿಯಲ್ಲಿ ಆಯ್ಕೆ ಮಾಡಿಕೊಂಡಿ ಕೊಳ್ಳಲಾಗಿದೆ. ಬಾಲಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಧ್ಯಯನಕ್ಕೆ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಜಿಲ್ಲೆಗಳಾದ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಹೆಚ್ಚಿನ ಬಾಲಕಾರ್ಮಿಕರನ್ನು ಹೊಂದಿರುವ ಬಳ್ಳಾರಿ ಜಿಲ್ಲೆಯ ಅಭಿವೃದ್ಧಿ ಹೊಂದಿದ ತಾಲ್ಲೂಕಾದ ಹೊಸಪೇಟೆ ಹಾಗೂ ಅಭಿವೃದ್ಧಿ ಹೊಂದುತ್ತಿರುವ ತಾಲ್ಲೂಕಾದ ಹಗರಿಬೊಮ್ಮನಹಳ್ಳಿ ತಾಲ್ಲೂಕುಗಳನ್ನು ಮತ್ತು ಕೊಪ್ಪಳ ಜಿಲ್ಲೆಯ ಅಭಿವೃದ್ಧಿ ಹೊಂದಿದ ತಾಲ್ಲೂಕಾದ ಗಂಗಾವತಿ ಹಾಗೂ ಅಭಿವೃದ್ಧಿ ಹೊಂದುತ್ತಿರುವ ತಾಲ್ಲೂಕಾದ ಕೊಪ್ಪಳ ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

**ಅಧ್ಯಯನದ ಮಿತಿಗಳು**

ಪ್ರಸ್ತುತ ಅಧ್ಯಯನಕ್ಕೆ ಕೆಲವು ಮಿತಿಗಳಿವೆ. ಅಧ್ಯಯನದಲ್ಲಿ ಹೆಚ್ಚು ಎಂಪಿರಿಕಲ್ ಅಂಶಗಳಿಗೆ ಮಹತ್ವ ಕೊಡಲಾಗಿದೆ. ಅಂಕಿ-ಅಂಶಗಳ ಮತ್ತು ಮಾಹಿತಿ ಸಂಗ್ರಹಣೆಯ ಮೂಲಕ ಫಲಿತಗಳನ್ನು ಕಂಡುಕೊಳ್ಳಲಾಗಿದೆ. ಇದೊಂದು ತುಲನಾತ್ಮಕ ಅಧ್ಯಯನವಾಗಿದೆ. ಈ ಅಧ್ಯಯನವು ಸೂಕ್ಷ್ಮ ಮತ್ತು ಆಳವಾದ ಅಧ್ಯಯನವಾಗಿದ್ದರಿಂದ ಈ ಅಧ್ಯಯನಕ್ಕೆ ಹೈದ್ರಾಬಾದ್-ಕರ್ನಾಟಕ ಪ್ರದೇಶದ ಜಿಲ್ಲೆಗಳಾದ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಹೆಚ್ಚಿನ ಬಾಲಕಾರ್ಮಿಕರನ್ನು ಹೊಂದಿರುವ ಬಳ್ಳಾರಿ ಜಿಲ್ಲೆಯ ಅಭಿವೃದ್ಧಿ ಹೊಂದಿದ ತಾಲ್ಲೂಕಾದ ಹೊಸಪೇಟೆ ಹಾಗೂ ಅಭಿವೃದ್ಧಿ ಹೊಂದುತ್ತಿರುವ ತಾಲ್ಲೂಕಾದ ಹಗರಿಬೊಮ್ಮನಹಳ್ಳಿ ತಾಲ್ಲೂಕುಗಳನ್ನು ಮತ್ತು ಕೊಪ್ಪಳ ಜಿಲ್ಲೆಯ ಅಭಿವೃದ್ಧಿ ಹೊಂದಿದ ತಾಲ್ಲೂಕಾದ ಗಂಗಾವತಿ ಹಾಗೂ ಅಭಿವೃದ್ಧಿ ಹೊಂದುತ್ತಿರುವ ತಾಲ್ಲೂಕಾದ ಕೊಪ್ಪಳ ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಹಾಗೂ ಆಯ್ಕೆ ಮಾಡಿಕೊಂಡ ನಾಲ್ಕು ತಾಲ್ಲೂಕುಗಳಲ್ಲಿ ಪ್ರತಿ ತಾಲ್ಲೂಕಿನಲ್ಲಿ ಎರಡು ಗ್ರಾಮಪಂಚಾಯತಿಗಳಿಗೆ ಪ್ರಸ್ತುತ ಅಧ್ಯಯನವನ್ನು ಸೀಮಿತಗೊಳಿಸಲಾಗಿದೆ. ಇದು ಈ ಅಧ್ಯಯನದ ಮಿತಿಯು ಸಹ ಆಗಿದೆ.

## 1.4. ಅಧ್ಯಾಯಗಳ ವಿನ್ಯಾಸ

ಪ್ರಸ್ತುತ ಬಾಲಕಾರ್ಮಿಕರ ಸಾಮಾಜಿಕ ಸ್ಥಿತಿಗತಿಗಳ ಕುರಿತು ಕೈಗೊಂಡಿರುವ ಅಧ್ಯಯನ ಸ್ವರೂಪ ಈ ಕೆಳಕಂಡಂತೆ ಗುರುತಿಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆಯಲ್ಲಿ ಬಾಲಕಾರ್ಮಿಕರ ಬಗ್ಗೆ ಹಾಗೂ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನಗಳು ಹಾಗೂ ಅಧ್ಯಯನದ ಸ್ವರೂಪವನ್ನು ಈ ಅಧ್ಯಯದಲ್ಲಿ ವಿಶ್ಲೇಷಿಸಲಾಗಿದೆ.

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಕ್ಷೇತ್ರವಾದ ಹೈದ್ರಾಬಾದ್-ಕರ್ನಾಟಕ ಪ್ರದೇಶದ ಜಿಲ್ಲೆಗಳಾದ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಹೆಚ್ಚಿನ ಬಾಲಕಾರ್ಮಿಕರನ್ನು ಹೊಂದಿರುವ ಬಳ್ಳಾರಿ ಜಿಲ್ಲೆಯ ಅಭಿವೃದ್ಧಿ ಹೊಂದಿದ ತಾಲ್ಲೂಕಾದ ಹೊಸಪೇಟೆ ಹಾಗೂ ಅಭಿವೃದ್ಧಿ ಹೊಂದುತ್ತಿರುವ ತಾಲ್ಲೂಕಾದ ಹಗರಿಬೊಮ್ಮನಹಳ್ಳಿ ತಾಲ್ಲೂಕುಗಳನ್ನು ಮತ್ತು ಕೊಪ್ಪಳ ಜಿಲ್ಲೆಯ ಅಭಿವೃದ್ಧಿ ಹೊಂದಿದ ತಾಲ್ಲೂಕಾದ ಗಂಗಾವತಿ ಹಾಗೂ ಅಭಿವೃದ್ಧಿ ಹೊಂದುತ್ತಿರುವ ತಾಲ್ಲೂಕಾದ ಕೊಪ್ಪಳ ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಂಡಿದ್ದು ಈ ಪ್ರದೇಶಗಳನ್ನು ಪರಿಚಯಿಸಿದ್ದೇನೆ ಹಾಗೂ ಹೈದ್ರಾಬಾದ್-ಕರ್ನಾಟಕದ ಸಂಕ್ಷಿಪ್ತ ಪರಿಚಯವನ್ನು ಪ್ರಸ್ತುತ ಎರಡನೆಯ ಅಧ್ಯಯನದಲ್ಲಿ ವಿವರಿಸಲಾಗಿದೆ.

ಮೂರನೇ ಅಧ್ಯಯನದಲ್ಲಿ ಭಾರತದಲ್ಲಿ ಬಾಲಕಾರ್ಮಿಕರ ಐತಿಹಾಸಿಕ ಹಿನ್ನೆಲೆಯಲ್ಲಿ ಬಾಲಕಾರ್ಮಿಕರ ಇತಿಹಾಸ, ಬಾಲಕಾರ್ಮಿಕ ಪದ್ಧತಿಯ ಅರ್ಥ, ಮತ್ತು ಬಾಲಕಾರ್ಮಿಕ ಪದ್ಧತಿಗೆ ಕಾರಣವಾದ ಅಂಶಗಳ ಕುರಿತು ವಿವರಣೆ ನೀಡಲಾಗಿದೆ.

ಪ್ರಸ್ತುತ ಬಾಲಕಾರ್ಮಿಕರ ಕುರಿತು ಕ್ಷೇತ್ರಾಧ್ಯಯನ ಮಾಡಿದ ವಿವರಣಾತ್ಮಕ ಕೋಷ್ಟಕಗಳ ಮೂಲಕ ಇಂದಿನ ಸಾಮಾಜಿಕ ಸ್ಥಿತಿಗತಿಗಳು, ಆರ್ಥಿಕ ಸ್ಥಿತಿಗತಿಗಳು, ಶೈಕ್ಷಣಿಕ ಸ್ಥಿತಿಗತಿಗಳ ಕುರಿತು ನಾಲ್ಕನೆಯ ಅಧ್ಯಯನದಲ್ಲಿ ವಿವರಿಸಲಾಗಿದೆ.

ಐದನೇ ಅಧ್ಯಯನದಲ್ಲಿ ಬಾಲಕಾರ್ಮಿಕರ ಸಮಸ್ಯೆಗಳು ಮತ್ತು ಸವಾಲುಗಳು, ಬಾಲಕಾರ್ಮಿಕರ ದುಶ್ಚಟಗಳು, ಕಾನೂನು ಕ್ರಮಗಳು, ಬಾಲಕಾರ್ಮಿಕರ ಸಮಸ್ಯೆಗಳಿಗೆ ಪರಿಹಾರ ಕ್ರಮಗಳು ಮತ್ತು ಇವುಗಳಿಗೆ ಸರ್ಕಾರ ಹಾಗೂ ಸರ್ಕಾರೇತರ ಸಂಘಸಂಸ್ಥೆಗಳ ಪಾತ್ರದ ಕುರಿತು ಅಧ್ಯಯನ ಮಾಡಲಾಗಿದೆ.

ಅಧ್ಯಯನದ ಸಮಾರೋಪದಲ್ಲಿ ಉಪಸಂಹಾರ ಮತ್ತು ಅಧ್ಯಯನಕ್ಕೆ ಸಂಬಂಧಿಸಿದಂತೆ ಕೊನೆಯದಾಗಿ ಫಲಿತತೆಗಳು ಹಾಗೂ ವಕ್ತೃ ವಿವರಗಳನ್ನು ಆರನೇ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಕೊನೆಯಲ್ಲಿ ಅಗತ್ಯವಿರುವ ಗ್ರಂಥಋಣ, ಅನುಬಂಧಗಳು ಹಾಗೂ ಛಾಯಚಿತ್ರಗಳನ್ನು ಗುರುತಿಸಲಾಗಿದೆ.

**ಪರಾಮರ್ಶನ ಗ್ರಂಥಗಳು:**


- ಆನಂದಕುಮಾರ ಜೋಷಿ, – ನಾಗರಿಕ ಸಮಾಜಕ್ಕೆ ಒಂದು ಸವಾಲಾಗಿ ಪರಿಣಮಿಸಿರುವ ಬಾಲಕಾರ್ಮಿಕ ಸಮಸ್ಯೆ, – ಸಗರನಾಡ ಸಿಂಗಾರ – ಸರ್ಕಾರಿ ಪ್ರಥಮದರ್ಜೆ ಕಾಲೇಜು ವಿಶೇಷ ಸಂಚಿಕೆ –2009.
- ಗಂಗಾಧರ ಬಂಡಿಹಾಳ, – ಕೊಪ್ಪಳದಲ್ಲಿ 4,700 ಬಾಲಕಾರ್ಮಿಕರು, – 15ನೇ ಫೆಬ್ರುವರಿ 2012, – ವಿಜಯಕರ್ನಾಟಕ ವರದಿ –2012.
- ಯಮನೂರಪ್ಪ ಅಣ್ಣಿಗೇರಿ, – ಬಾಲಕಾರ್ಮಿಕರು (ಮಂಟಪಮಾಲೆ–259) – ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ –2011.
- ರವಿಕುಮಾರ, – ಸಮಗ್ರ ಬಾಲಕಾರ್ಮಿಕರ ಸಮೀಕ್ಷೆಗೆ ಸಜ್ಜು – 14ನೇ ನವಂಬರ್ 2011 – ಕನ್ನಡ ಪ್ರಭ ಲೇಖನ, –2011.
- ವಾಸುದೇವ ಶರ್ಮ, –ಬಾಲಕಣ್ಣುಗಳಲ್ಲಿ ಮೂಡಿದ ಕನಸು – 8ನೇ ಸೆಪ್ಟೆಂಬರ್ 2012 – ಪ್ರಜಾವಾಣಿ ಲೇಖನ –2012.
- ಶಶಿಧರ ಮೇಟಿ – ಬೆಳೆಯುತ್ತಿರುವ ಬಾಲಕಾರ್ಮಿಕರು, – 23ನೇ ಫೆಬ್ರುವರಿ 2012, – ಕನ್ನಡ ಪ್ರಭ ವರದಿ –2012.
- ಶಿವಮೂರ್ತಿ ಎಂ.(ಅನುವಾದ), ಮೂಲ: ವಿಲಿಯಂ ಜೆ.ಗೂಡ್, ಪಾಲ್ ಕೆ.ಹ್ಯಾಟ್. – ಸಾಮಾಜಿಕ ಸಂಶೋಧನ ವಿಧಾನಗಳು – ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು –1995.
- ಬ್ರಿಟಾನಿಕ ವಿಶ್ವಕೋಶ – ಮಕ್ಕಳ ದುಡಿಮೆ.
- ಗಿರಿ ವಿ.ವಿ. – ಬಾಲಕಾರ್ಮಿಕ ಕಲ್ಪನೆ.

# ಅಧ್ಯಾಯ–ಎರಡು : ಅಧ್ಯಯನದ ಕ್ಷೇತ್ರ ಪರಿಚಯ

2.1. ಕ್ಷೇತ್ರ ಪರಿಚಯ.

2.2. ಐತಿಹಾಸಿಕ ಹಿನ್ನೆಲೆ.

2.3. ಭೌಗೋಳಿಕ ಪರಿಚಯ.

# ಅಧ್ಯಾಯ – ಎರಡು

# ಅಧ್ಯಯನದ ಕ್ಷೇತ್ರ ಪರಿಚಯ

## 2.1 ಹೈದ್ರಾಬಾದ್-ಕರ್ನಾಟಕ ಪ್ರದೇಶ ಕ್ಷೇತ್ರ ಪರಿಚಯ

ಪ್ರಸ್ತುತ ಸಂಶೋಧನಾ ಪ್ರಬಂಧವು ಹೈದ್ರಾಬಾದ್-ಕರ್ನಾಟಕ ಪ್ರದೇಶವನ್ನು ತನ್ನ ಅಧ್ಯಯನ ಕ್ಷೇತ್ರವನ್ನಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಹೈದ್ರಾಬಾದ್-ಕರ್ನಾಟಕ ಪ್ರದೇಶದ ಒಂದು ಸಂಕ್ಷಿಪ್ತ ಪರಿಚಯವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ. ಅಧ್ಯಯನ ಕ್ಷೇತ್ರದ ಅಭಿವೃದ್ಧಿಯ ಸ್ವರೂಪವನ್ನು ತಿಳಿಯಲು ಹಾಗೂ ಪ್ರಸ್ತುತ ಸಮಸ್ಯೆಗಳನ್ನು ಪರಿಹರಿಸಲು ಅನೇಕ ರೀತಿಯ ಪರಿಹಾರೋಪಾಯಗಳನ್ನು ಕಂಡುಕೊಳ್ಳುವ ಸಲುವಾಗಿ ಈ ಪ್ರದೇಶದ ಒಂದು ಪರಿಚಯ ಅತ್ಯವಶ್ಯಕವಾಗಿದೆ.

ಹೈದ್ರಾಬಾದ್-ಕರ್ನಾಟಕ ಪ್ರದೇಶದ ಐತಿಹಾಸಿಕ ಹಿನ್ನೆಲೆ, ಭೌಗೋಳಿಕ ಲಕ್ಷಣಗಳು ಮತ್ತು ಜನಸಂಖ್ಯೆ, ಶಿಕ್ಷಣ, ಆರೋಗ್ಯ, ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿ, ಶ್ರಮಶಕ್ತಿಯ ವಿಭಜನೆ, ಭೂ-ಮಾಲಿಕತ್ವ ಈ ಎಲ್ಲಾ ವಿಷಯಗಳ ಕುರಿತಾದ ಅಭಿವೃದ್ಧಿ ಹಾಗೂ ಸಮಸ್ಯೆಗಳ ಚಿತ್ರಣವನ್ನು ನಾವು ಇಲ್ಲಿ ಕಾಣಬಹುದು. ಪ್ರಸ್ತುತ ಅಧ್ಯಯನವು ಬಾಲಕಾರ್ಮಿಕರ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ಅಧ್ಯಯನ ಕೈಗೊಂಡಿರುವುದರಿಂದ ಹೆಚ್ಚಿನ ಪ್ರಾಮುಖ್ಯತೆಯನ್ನು ಅವುಗಳಿಗೆ ಸಂಬಂಧಿಸಿದ ಮಾಪನಗಳಿಗೆ ಇಲ್ಲಿ ಪ್ರಾಮುಖ್ಯತೆ ನೀಡಲಾಗಿದೆ.

ಕರ್ನಾಟಕ ರಾಜ್ಯವನ್ನು ಆಡಳಿತ ಉದ್ದೇಶದಿಂದ ನಾಲ್ಕು ವಿಭಾಗಗಳಾಗಿ 52 ಉಪ ವಿಭಾಗಗಳಾಗಿ, 30 ಜಿಲ್ಲೆಗಳಾಗಿ, 176 ತಾಲೂಕುಗಳಾಗಿ, 747 ಹೋಬಳಿ/ಕಂದಾಯ ವೃತ್ತಗಳಾಗಿ ವಿಭಜಿಸಲಾಗಿದೆ. ಕರ್ನಾಟಕ ರಾಜ್ಯದ ಜಿಲ್ಲಾವಾರು ವಿಸ್ತೀರ್ಣ, ಜನಸಂಖ್ಯೆ ಮತ್ತು ಆಡಳಿತ ವಿಭಾಗಗಳನ್ನು ಮುಂದೆ ನೀಡಿದೆ. ಬೆಂಗಳೂರು ವಿಭಾಗದಲ್ಲಿ ಸೇರಿಸಿರುವ ಪ್ರದೇಶಗಳೆಂದರೆ ಬೆಂಗಳೂರು(ನಗರ), ರಾಮನಗರ, ಬೆಂಗಳೂರು ಗ್ರಾಮಾಂತರ, ತುಮಕೂರು, ಕೋಲಾರ, ಚಿಕ್ಕಬಳ್ಳಾಪುರ, ಚಿತ್ರದುರ್ಗ, ಶಿವಮೊಗ್ಗ ಮತ್ತು ದಾವಣಗೆರೆ ಜಿಲ್ಲೆಗಳು. ಇವೆಲ್ಲವುಗಳ ಕೇಂದ್ರ ಕಚೇರಿ ಬೆಂಗಳೂರು. ಮೈಸೂರು ವಿಭಾಗದಲ್ಲಿ ಮೈಸೂರು, ಮಂಡ್ಯ, ಹಾಸನ, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಕೊಡಗು, ಉಡುಪಿ ಮತ್ತು ಚಾಮರಾಜನಗರ ಜಿಲ್ಲೆಗಳು ಸೇರಿವೆ. ಇವುಗಳ ಕೇಂದ್ರ ಕಚೇರಿ ಮೈಸೂರು. ಬೆಳಗಾವಿ ವಿಭಾಗದಲ್ಲಿ ಬೆಳಗಾವಿ, ಬಿಜಾಪುರ, ಧಾರವಾಡ, ಗದಗ, ಹಾವೇರಿ, ಉತ್ತರಕನ್ನಡ ಮತ್ತು ಬಾಗಲಕೋಟೆ ಜಿಲ್ಲೆಗಳು ಸೇರಿವೆ. ಇದರ ಕೇಂದ್ರ ಕಚೇರಿ ಬೆಳಗಾವಿ. ಗುಲಬರ್ಗಾವನ್ನು ಕೇಂದ್ರ ಕಚೇರಿಯಾಗಿರಿಸಿಕೊಂಡಿರುವ ಗುಲಬರ್ಗಾ ವಿಭಾಗಕ್ಕೆ ಬೀದರ್, ಗುಲಬರ್ಗಾ, ಯಾದಗಿರಿ, ಬಳ್ಳಾರಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳು ಸೇರಿವೆ. ರಾಜ್ಯದಲ್ಲಿ ಒಟ್ಟು 27,481 ಹಳ್ಳಿಗಳಲ್ಲಿ ಜನವಸತಿ ಇದೆ. 1,925 ಹಳ್ಳಿಗಳು ಜನರಹಿತವಾಗಿವೆ. ಒಟ್ಟು ಪಟ್ಟಣಗಳ ಮತ್ತು ನಗರ ಸಭೆಗಳ ಸಂಖ್ಯೆ 270. ಗ್ರಾಮಪಂಚಾಯತಿಗಳ ಸಂಖ್ಯೆ 5,628. ಹಾಗೆಯೇ 219 ಮುನಿಸಿಪಲ್ ಕಾರ್ಪೋರೇಷನ್‌ಗಳಿವೆ. ಕರ್ನಾಟಕದಲ್ಲಿ ಹತ್ತು ಲಕ್ಷಕ್ಕೂ ಮಿಗಿಲಾದ ಜನಸಂಖ್ಯೆ ಇರುವ ಏಕೈಕ ನಗರವೆಂದರೆ ಬೆಂಗಳೂರು. ದೇಶದ 23 ಮಹಾನಗರಗಳ, ನಗರ ಸಂದಣಿ ಇರುವ ಆರು ನಗರಗಳ ಪೈಕಿ ಬೆಂಗಳೂರು ಕೂಡ ಒಂದು. ಒಂದು ಚದರ ಕಿಲೋ ಮೀಟರಿನಲ್ಲಿ ತಾಲೂಕುವಾರು ವಿಸ್ತೀರ್ಣ, ಜನಸಂಖ್ಯೆ, ಗ್ರಾಮೀಣ ಪ್ರದೇಶದ ಜನಸಂಖ್ಯೆ, ನಗರ ಪ್ರದೇಶದ ಜನಸಂಖ್ಯೆ ಮತ್ತು ಒಟ್ಟು ಪ್ರದೇಶದ ಜನಸಂಖ್ಯೆ ವಿವರಗಳನ್ನು ಅನುಬಂಧದಲ್ಲಿ ಕೊಡಲಾಗಿದೆ. **(ಬಳ್ಳಾರಿ ಜಿಲ್ಲಾ ಗೆಜೆಟಿಯರ್, ಪುಟ-91)**.

ಕರ್ನಾಟಕ ರಾಜ್ಯದಲ್ಲಿ ನಾವು ಪ್ರಮುಖವಾಗಿ ನಾಲ್ಕು ಕಂದಾಯ ವಿಭಾಗಗಳನ್ನು ಕಾಣಬಹುದು. ಅವುಗಳೆಂದರೆ ಬೆಂಗಳೂರು ವಿಭಾಗ, ಮೈಸೂರು ವಿಭಾಗ, ಬೆಳಗಾವಿ ವಿಭಾಗ ಮತ್ತು ಗುಲ್ಬರ್ಗಾ ವಿಭಾಗಗಳೆಂದು ನಾವು ತಿಳಿಯಬಹುದಾಗಿದೆ. ಪ್ರಸ್ತುತ ಗುಲ್ಬರ್ಗಾ ವಿಭಾಗವನ್ನೇ 'ಹೈದ್ರಾಬಾದ್-ಕರ್ನಾಟಕ' ಪ್ರದೇಶವೆಂದು ಕರೆಯಲಾಗುತ್ತದೆ. ಈ ಪ್ರದೇಶವು ಕರ್ನಾಟಕ ರಾಜ್ಯದ 6 ಜಿಲ್ಲೆಗಳನ್ನು ಅಂದರೆ ಬೀದರ್, ಗುಲ್ಬರ್ಗಾ, ಯಾದಗಿರಿ, ರಾಯಚೂರು, ಕೊಪ್ಪಳ ಹಾಗೂ ಬಳ್ಳಾರಿ ಜಿಲ್ಲೆಗಳನ್ನು ಒಳಗೊಂಡಿದೆ. ಚಾರಿತ್ರಿಕವಾಗಿ ನೋಡಿದಾಗ ಬಳ್ಳಾರಿ ಜಿಲ್ಲೆಯನ್ನು ಹೊರತುಪಡಿಸಿ ಉಳಿದ 5 ಜಿಲ್ಲೆಗಳು ಮಾತ್ರ ಹೈದ್ರಾಬಾದ್-ಕರ್ನಾಟಕ ಪ್ರದೇಶದ ವ್ಯಾಪ್ತಿಯಲ್ಲಿ ಬರುತ್ತಿದ್ದವು. 1956ರಲ್ಲಿ ಕರ್ನಾಟಕ ಏಕೀಕರಣಗೊಂಡು ಆಡಳಿತದ ಅನುಕೂಲಕ್ಕಾಗಿ ರಾಜ್ಯದಲ್ಲಿ ನಾಲ್ಕು ಕಂದಾಯ

ವಿಭಾಗಗಳನ್ನಾಗಿ ರಚನೆ ಮಾಡಲಾಯಿತು. ಪ್ರಾರಂಭದಲ್ಲಿ ಬಳ್ಳಾರಿ ಜಿಲ್ಲೆಯು ಬೆಂಗಳೂರು ಕಂದಾಯ ವಿಭಾಗದಲ್ಲಿತ್ತು. ನಂತರ ಬಳ್ಳಾರಿ ಜಿಲ್ಲೆಯನ್ನು '1ನೇ ಫೆಬ್ರುವರಿ 1966ರಂದು ಗುಲ್ಬರ್ಗಾ ಕಂದಾಯ ವಿಭಾಗಕ್ಕೆ ಸೇರ್ಪಡೆ ಮಾಡಲಾಯಿತು' ಗುಲ್ಬರ್ಗಾ ವಿಭಾಗದಲ್ಲಿ ಬಳ್ಳಾರಿಯು ಸೇರಿದ್ದರಿಂದ ಈ ಜಿಲ್ಲೆಯು ಸಹ ಹೈದ್ರಾಬಾದ್-ಕರ್ನಾಟಕ ಪ್ರದೇಶದ ಒಂದು ಭಾಗವಾಗಿ ಸೇರ್ಪಡೆಗೊಂಡಿತು. ನಂತರ 1991ರಲ್ಲಿ ಈ ಪ್ರದೇಶದ ಅಭಿವೃದ್ಧಿಗಾಗಿ ಮಂಡಳಿಯನ್ನು ರಚಿಸಲಾಯಿತು. ಬಳ್ಳಾರಿ ಜಿಲ್ಲೆಯನ್ನು ಸಹ ಈ ಅಭಿವೃದ್ಧಿ ಮಂಡಳಿಯ ವ್ಯಾಪ್ತಿಯಲ್ಲಿ ಸೇರ್ಪಡೆ ಮಾಡಲಾಯಿತು. ಹೀಗಾಗಿ ಇಂದು ಹೈದ್ರಾಬಾದ್-ಕರ್ನಾಟಕ ಪ್ರದೇಶವೆಂದರೆ ಈ ಆರು ಜಿಲ್ಲೆಗಳನ್ನು ಒಳಗೊಂಡ ಗುಲ್ಬರ್ಗಾ ವಿಭಾಗವೇ ಆಗಿದೆ ಎಂದು ನಾವು ತಿಳಿಯಬಹುದು.

## 2.2 ಐತಿಹಾಸಿಕ ಹಿನ್ನೆಲೆ

ಪ್ರಸ್ತುತ ಬಾಲಕಾರ್ಮಿಕರ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಗಳನ್ನು ಅರ್ಥಮಾಡಿಕೊಳ್ಳಲು ಹೈದ್ರಾಬಾದ್-ಕರ್ನಾಟಕ ಪ್ರದೇಶದ ಐತಿಹಾಸಿಕ ಹಿನ್ನೆಲೆಯನ್ನು ಅಧ್ಯಯನ ಮಾಡುವುದು ಅತ್ಯವಶ್ಯಕವಾಗಿದೆ. ನನ್ನ ಅಧ್ಯಯನ ಕ್ಷೇತ್ರದ ವ್ಯಾಪ್ತಿ ಹೈದ್ರಾಬಾದ್-ಕರ್ನಾಟಕ ಪ್ರದೇಶದ ಜಿಲ್ಲೆಗಳಾದ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಹೆಚ್ಚಿನ ಬಾಲಕಾರ್ಮಿಕರನ್ನು ಹೊಂದಿರುವ ಬಳ್ಳಾರಿ ಜಿಲ್ಲೆಯ ಅಭಿವೃದ್ಧಿ ಹೊಂದಿದ ತಾಲ್ಲೂಕಾದ ಹೊಸಪೇಟೆ ಹಾಗೂ ಅಭಿವೃದ್ಧಿ ಹೊಂದುತ್ತಿರುವ ತಾಲ್ಲೂಕಾದ ಹಗರಿಬೊಮ್ಮನಹಳ್ಳಿ ತಾಲ್ಲೂಕುಗಳನ್ನು ಮತ್ತು ಕೊಪ್ಪಳ ಜಿಲ್ಲೆಯ ಅಭಿವೃದ್ಧಿ ಹೊಂದಿದ ತಾಲ್ಲೂಕಾದ ಗಂಗಾವತಿ ಹಾಗೂ ಅಭಿವೃದ್ಧಿ ಹೊಂದುತ್ತಿರುವ ತಾಲ್ಲೂಕಾದ ಕೊಪ್ಪಳ ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾತದೆ. ಇಲ್ಲಿ ಈ ಎರಡು ಜಿಲ್ಲೆಗಳ ಜೊತೆಗೆ ಹೈದ್ರಾಬಾದ್-ಕರ್ನಾಟಕ ಪ್ರದೇಶದ ಐತಿಹಾಸಿಕ ಹಿನ್ನೆಲೆಯ ಒಂದು ಸ್ಥೂಲ ಪರಿಚಯವನ್ನು ಇಲ್ಲಿ ಮಾಡಿಕೊಡಲಾಗಿದೆ.

### ಕರ್ನಾಟಕ ರಾಜ್ಯದ ಸಂಕ್ಷಿಪ್ತ ಪರಿಚಯ

ಕರ್ನಾಟಕಕ್ಕೆ ಭವ್ಯವಾದ ಪ್ರಾಚೀನತೆಯಿದೆ. ಅಸಂಖ್ಯಾತ ಶಾಸನ, ಸ್ಮಾರಕಶಿಲೆ[ವೀರಗಲ್ಲು, ಮಹಾಸತಿ(ಮಾಸ್ತಿ) ಕಲ್ಲು, ಮತ್ತು ಆತ್ಮಾಹುತಿ ಕಲ್ಲು], ಸಾಂಸ್ಕೃತಿಕ ಮತ್ತು ಐತಿಹಾಸಿಕ ಮಹತ್ವದ ಸ್ಮಾರಕಗಳಿಂದ ಸಮೃದ್ಧವಾಗಿದೆ. ಇಲ್ಲಿನ ಕೃಷ್ಣ, ಭೀಮಾ, ಮಲಪ್ರಭಾ, ಘಟಪ್ರಭಾ, ಕಾವೇರಿ, ಹೇಮಾವತಿ, ತುಂಗಭದ್ರಾ, ಮಂಜ್ರಾ, ಪೆನ್ನಾರ್, ನೇತ್ರಾವತಿ ಮೊದಲಾದ ನದಿ-ಉಪನದಿಗಳ ಕಣಿವೆ ಪ್ರದೇಶಗಳಲ್ಲಿ ಇತಿಹಾಸ ಪೂರ್ವಕಾಲದ ಅನೇಕ ನಿವೇಶನಗಳು ಹರಡಿಕೊಂಡಿವೆ. ಹಿಂದಿನ ಮದ್ರಾಸ್ ಪ್ರೆಸಿಡೆನ್ಸಿ ಪ್ರಾಂತದ ಭಾಗವಾಗಿದ್ದ ಬಳ್ಳಾರಿ ಪ್ರದೇಶದ ಬ್ರಿಟೀಷ್ ಅಧಿಕಾರಿಯಾಗಿದ್ದ ಕ್ಯೂಬಾಲ್ಡ್ 1836ರಲ್ಲಿ

ಕುಪ್ಪಗಲ್ ಮತ್ತು ಕುಡತಿನಿಯ ಬೂದಿದಿಬ್ಬಗಳನ್ನು ಸಂಶೋಧಿಸಿ ವರದಿ ಮಾಡಿದ್ದೇ ಭಾರತದಲ್ಲಿ ಇತಿಹಾಸಪೂರ್ವಕಾಲದ ಅಧ್ಯಯನಕ್ಕೆ ನಾಂದಿಯಾಯಿತೆಂಬುದು ವಿಶೇಶವಾದ ವಿಷಯ.

ಕರ್ನಾಟಕದ ಇತಿಹಾಸಪೂರ್ವಕಾಲದ ಕೈಕೊಡಲಿ ಸಂಸ್ಕೃತಿಯು, ಆಫ್ರಿಕಾ ಖಂಡದಲ್ಲಿದ್ದ ಅದೇ ಬಗೆಯ ಸಂಸ್ಕೃತಿಯೊಂದಿಗೆ ಹೆಚ್ಚೂ ಕಡಿಮೆ ಹೋಲುತ್ತದೆಯಾದರೂ, ಉತ್ತರಭಾರತದ ಇತಿಹಾಸಪೂರ್ವಕಾಲದ ಸಂಸ್ಕೃತಿಯೊಂದಿಗೆ ಸಾಕಷ್ಟು ವಿಭಿನ್ನವಾಗಿದೆ. ಹುಣಸಗಿ, ಗುಲಬಾಲ್, ಕಲ್ಲದೇವನಹಳ್ಳಿ, ತೆಗ್ಗಿನಹಳ್ಳಿ, ಬೂದಿಹಾಳ್, ಪಿಕ್ಲಿಹಾಳ್, ಕಿಬ್ಬನಹಳ್ಳಿ, ನಿಟ್ಟೂರು, ಅನಗವಾಡಿ, ಕಲಾದ್ಗಿ, ಖ್ಯಾಡ್, ನ್ಯಾಮತಿ, ಬಾಳೇಹೊನ್ನೂರು ಮತ್ತು ಉಪ್ಪಿನಂಗಡಿ (ಆದಿ ಶಿಲಾಯುಗ); ಹೇರಕಲ್, ತಮ್ಮಿನಹಾಳ್, ಸಾವಳಗಿ, ಸಾಲ್ವಡಗಿ, ಮೇಣಸಿಗಿ, ಪಟ್ಟದಕಲ್ಲು, ವಜ್ಜಲ, ನಾರಾವಿ ಮತ್ತು ತಲಕಾಡು (ಮಧ್ಯ ಶಿಲಾಯುಗ); ಕೋವಳ್ಳಿ, ಇಂಗಳೇಶ್ವರ, ಯಾದವಾಡ ಮತ್ತು ಮರಳಭಾವಿ(ಅಂತ್ಯ ಶಿಲಾಯುಗ); ಬೇಗಂಪೂರ್, ವನಮಪುರಹಳ್ಳಿ, ಹಿಂಗಣಿ, ಇಂಗಳೇಶ್ವರ, ತಮ್ಮಿನಹಾಳು, ಶೃಂಗೇರಿ, ಜಾಲಹಳ್ಳಿ, ಕಿಬ್ಬನಹಳ್ಳಿ, ಸಂಗನಕಲ್ಲು, ಬ್ರಹ್ಮಗಿರಿ, ಉಪ್ಪಿನಂಗಡಿ, ಮಾಣಿ ಮತ್ತು ದೊಡ್ಡಗುಣಿ(ಸೂಕ್ಷ್ಮ ಶಿಲಾಯುಗ); ಮಾಸ್ಕಿ, ಟಿ.ನರಸೀಪುರ, ಬನಹಳ್ಳಿ, ಹಳ್ಳೂರು, ಸಂಗನಕಲ್ಲು, ಹೆಮ್ಮಿಗೆ, ಕೊಡೇಕಲ್ಲು, ಬ್ರಹ್ಮಗಿರಿ, ಕುಪ್ಪಗಲ್ಲು, ತೆಕ್ಕಲಕೋಟೆ, ಕುರ್ನಾಲ್, ಶ್ರೀನಿವಾಸಪುರ, ಬೀರಮಂಗಲ, ಫ್ರೆಂಚ್‌ರಾಕ್ಸ್ (ಪಾಂಡವಪುರ), ಮತ್ತು ಉತ್ತನೂರು(ನವಶಿಲಾಯುಗ ಮತ್ತು ತಾಮ್ರ ಶಿಲಾಯುಗ); ರಾಜನ ಕೊಲ್ಲೂರು, ಬಾಚಿಗುಡ್ಡ, ಐಹೊಳೆ, ಕೊಣ್ಣೂರು, ತೇರದಾಳ, ಹಿರೇ ಬೆಣಕಲ್ಲು, ಕುಮಾರನಹಳ್ಳಿ, ತಡಕನಹಳ್ಳಿ, ಮಾಸ್ಕಿ, ಬನಹಳ್ಳಿ, ಬಡಗ–ಕಜೇಕಾರು, ಬೇಲೂರು, ಬೋರಕಟ್ಟೆ, ಕೊಣಾಜೆ, ಕಕ್ಕುಂಜೆ, ವಡ್ಡರ್ಸೆ ಮತ್ತು ಹಳ್ಳಿಂಗಳಿ(ಬೃಹತ್ ಶಿಲಾಯುಗ) ಮುಂತಾದೆಡೆ ಕರ್ನಾಟಕದ ಇತಿಹಾಸಪೂರ್ವಕಾಲದ ಪ್ರಮುಖ ನಿವೇಶನಗಳಿವೆ. ಆಫ್ರಿಕಾ ಹಾಗೂ ಕರ್ನಾಟಕದ ಇತಿಹಾಸಪೂರ್ವಕಾಲದ ನಿವೇಶನಗಳಲ್ಲಿ ಸಾಮಾನ್ಯವಾಗಿ ರಾಗಿ ಧಾನ್ಯ ದೊರೆಯುತ್ತದೆ. ಅಲ್ಲದೆ, ಕರ್ನಾಟಕದ ಪ್ರಾಚೀನ ನಿವಾಸಿಗಳು ಉತ್ತರದವರಿಗಿಂತ ಮೊದಲೇ ಕಬ್ಬಿಣದ ಉಪಯೋಗವನ್ನು ಬಲ್ಲವರಾಗಿದ್ದರು. ಪ್ರಸಕ್ತ ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ಹಳ್ಳೂರಿನಲ್ಲಿ ಕ್ರಿ.ಪೂ. 1500ಕ್ಕೆ ಸೇರಿದ್ದೆಂದು ಗುರುತಿಸಲಾಗಿರುವ ಕಬ್ಬಿಣದ ಆಯುಧಗಳೂ ದೊರೆತಿವೆ.

ಕರ್ನಾಟಕದ ಕೆಲವು ಭಾಗಗಳನ್ನು ನಂದ ಮತ್ತು ಮೌರ್ಯ ಅರಸರು ಆಳುತ್ತಿದ್ದರೆಂದು ಸಾಂಪ್ರದಾಯಿಕವಾಗಿ ನಂಬಲಾಗಿದೆ. ಮೌರ್ಯ ದೊರೆ ಚಂದ್ರಗುಪ್ತನು (ಅಶೋಕನ ತಾತ ಚಂದ್ರಗುಪ್ತ–I ಅಥವಾ ಅಶೋಕನ ಮೊಮ್ಮಗ ಸಂಪ್ರತಿ ಚಂದ್ರಗುಪ್ತ) ಶ್ರವಣಬೆಳಗೊಳಕ್ಕೆ ಭೇಟಿ ನೀಡಿ ತನ್ನ ಅಂತ್ಯ ಕಾಲವನ್ನು ಅಲ್ಲೇ ಕಳೆದನೆಂದೂ ನಂಬಲಾಗಿದೆ. ಬಳ್ಳಾರಿ ಜಿಲ್ಲೆಯ ನಿಟ್ಟೂರು ಮತ್ತು ಉದಗೋಲಂಗಳಲ್ಲಿ ತಲಾ ಎರಡೆರಡು, ರಾಯಚೂರು ಜಿಲ್ಲೆಯ ಮಸ್ಕಿಯಲ್ಲಿ ಒಂದು, ಕೊಪ್ಪಳ ಜಿಲ್ಲೆಯ ಗವಿಮಠ ಮತ್ತು ಪಾಲ್ಕಿ ಗುಂಡುಗಳಲ್ಲಿ ತಲಾ ಒಂದೊಂದು, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಜಟಿಂಗರಾಮೇಶ್ವರ ಮತ್ತು

ಸಿದ್ದಾಪುರಗಳಲ್ಲಿ ತಲಾ ಒಂದೊಂದು, (10 ಕಿರು ಶಿಲಾಶಾಸನಗಳು); ಹಾಗೂ ಗುಲಬರ್ಗಾ ಜಿಲ್ಲೆಯ ಸನ್ನತಿಯಲ್ಲಿ ನಾಲ್ಕು (ಬೃಹತ್ ಶಿಲಾಶಾಸನಗಳು 13 ಮತ್ತು 14ನೇ ಸಂಖ್ಯೆಯವು)–ಹೀಗೆ ಅಶೋಕನ ಒಟ್ಟು 14 ಶಾಸನಗಳು ಕರ್ನಾಟಕದಲ್ಲಿ ದೊರೆತಿವೆ. ಇವು ಮೌರ್ಯ ಸಾಮ್ರಾಜ್ಯದ ವ್ಯಾಪ್ತಿಗೆ ಸಾಕ್ಷಿಯಾಗಿವೆ. ಸಾಮ್ರಾಟ್ ಅಶೋಕನ ಹೆಸರು ಮಸ್ಕಿಯ ಕಿರು ಶಿಲಾಶಾಸನದಲ್ಲಿ 'ದೇವಾನಾಂಪಿಯಪಿಯದಶಿ' ಎಂಬ ವಿಶೇಣದೊಂದಿಗೆ, ಮೊದಲ ಬಾರಿಗೆ ಕಾಣಿಸಿಕೊಂಡಿರುವುದು ಮಹತ್ವದ ವಿಷಯ. ಅಶೋಕನ ಶಾಸನಗಳ ಭಾಷೆ ಪ್ರಾಕೃತ, ಬಳಸಿರುವ ಲಿಪಿ ಬ್ರಾಹ್ಮೀ. ಬ್ರಾಹ್ಮೀಲಿಪಿ, ಭಾರತದ ಎಲ್ಲಾ ಲಿಪಿಗಳ (ದೇವನಾಗರಿಯೂ ಸೇರಿದಂತೆ) ಮಾತೃಲಿಪಿಯಾಗಿದೆ. ಬ್ರಹ್ಮಗಿರಿ, ಚಂದ್ರವಳ್ಳಿ, ಮಸ್ಕಿ, ಸಂಗನಕಲ್ಲು, ಪಿಕ್ಲಿಹಾಳು, ಬನವಾಸಿ, ಹಳ್ಳೂರು, ಟಿ.ನರಸೀಪುರ, ವಡಗಾಂವ್ ಮಾಧವಪುರ, ಬನಹಳ್ಳಿ, ಸನ್ನತಿ ಮೊದಲಾದ ಸ್ಥಳಗಳು, ಕ್ರಿ. ಪೂ. ಮೂರನೆಯ ಶತಮಾನದಿಂದ ಕ್ರಿ. ಶ. ಒಂದನೆಯ ಶತಮಾನದ ಅವಧಿಗೆ ಸೇರಿದ ಪೂರ್ವೇತಿಹಾಸ ಅಥವಾ ಪ್ರಾಗಿತಿಹಾಸ ಕಾಲದ ಮಹತ್ವದ ಅವಶೇಷಗಳನ್ನು ಹೊಂದಿವೆ.

ಕ್ರಿ.ಶ.ನಾಲ್ಕನೆಯ ಶತಮಾನದಿಂದೀಚಿನ ಕರ್ನಾಟಕದ ರಾಜಕೀಯ ಇತಿಹಾಸದ ಪರಿಚಯವನ್ನು ಇಲ್ಲಿ ನೀಡಲಾಗಿದೆ. ಗಂಗರು ಮತ್ತು ಕದಂಬರು ಕ್ರಿ.ಶ.345ರಿಂದ ಆಳ್ವಿಕೆ ನಡೆಸುತ್ತಿದ್ದರು. ಬಾಗಲಕೋಟೆ ಜಿಲ್ಲೆಯ ಬಾದಾಮಿಯ ಚಾಲುಕ್ಯರು (ಕ್ರಿ.ಶ.540ರಿಂದ783) ಕದಂಬರನ್ನು ಕೆಳಗಿಳಿಸಿ, ಗಂಗರನ್ನೂಮತ್ತು ಕರಾವಳಿ ಭಾಗವನ್ನು ಸುಮಾರು 1000 ವರ್ಷಗಳಿಗಿಂತ ಹೆಚ್ಚುಕಾಲ ಆಳುತ್ತಿದ್ದ ಸ್ಥಳೀಯ ದೊರೆಗಳಾಗಿದ್ದ ಆಳುಪರಸರನ್ನೂ ಹಿಡಿತದಲ್ಲಿಟ್ಟುಕೊಂಡರು. ಶಾತವಾಹನರು ಗುಲಬರ್ಗಾ ಜಿಲ್ಲೆಯ ಮಳಖೇಡದ ರಾಷ್ಟ್ರಕೂಟರು (ಕ್ರಿ.ಶ.753ರಿಂದ973 ರವರೆಗೆ), ಬಾದಾಮಿಯ ಚಾಲುಕ್ಯರ ಉತ್ತರಾಧಿಕಾರಿಗಳಾದರು. ಅವರನ್ನು ಅಧಿಕಾರದಿಂದ ಕೆಳಗಿಳಿಸಿದ ಕಲ್ಯಾಣದ ಚಾಲುಕ್ಯರು (ಕ್ರಿ.ಶ.973–1189) ಬೀದರ್ ಜಿಲ್ಲೆಯ ಇಂದಿನ ಬಸವಕಲ್ಯಾಣದಿಂದ ಆಳ್ವಿಕೆ ನಡೆಸಿದರು. ದಕ್ಷಿಣ ಭಾಗಗಳಲ್ಲಿ ಮೊದಮೊದಲು ಸಾರ್ವಭೌಮರಾಗಿದ್ದ (ಕ್ರಿ.ಶ.350ರಿಂದ550) ಗಂಗರು ಆನಂತರ ಬಾದಾಮಿಯ ಚಾಲುಕ್ಯರ ಅಥವಾ ಮಳಖೇಡದ ರಾಷ್ಟ್ರಕೂಟರ ಮಿತ್ರರಾಗಿಯೋ, ಸಾಮಂತರಾಗಿಯೋ ಕ್ರಿ.ಶ.1004 ರವರೆವಿಗೂ ಆಳ್ವಿಕೆ ನಡೆಸಿದರು. ಆನಂತರ, ಗಂಗವಾಡಿ–96000 (ದಕ್ಷಿಣ ಕರ್ನಾಟಕ) ಪ್ರಾಂತವನ್ನು ಚೋಳರು ಆಕ್ರಮಿಸಿದಾಗ, ಅವರ ರಾಜ್ಯದ ಬಹುಭಾಗ ಚೋಳರ ಆಳ್ವಿಕೆಗೆ ಒಳಗಾಯಿತು. ದಕ್ಷಿಣ ಕರ್ನಾಟಕದಲ್ಲಿ ಕ್ರಿ.ಶ.1004ರಿಂದ ತಮ್ಮ ಪ್ರಭುತ್ವವನ್ನು ಮೆರೆದ ಚೋಳರನ್ನು ಕ್ರಿ.ಶ.1114ರಲ್ಲಿ ಹೊಯ್ಸಳ ದೊರೆ ವಿಷ್ಣುವರ್ಧನನು ಅಧಿಕಾರದಿಂದ ಕೆಳಗಿಳಿಸಿದನು. ಕಲ್ಯಾಣದ ಚಾಳುಕ್ಯರ ಆಳ್ವಿಕೆಯ ಮಧ್ಯೆ ಕಲಚೂರಿಗಳ ಆಳ್ವಿಕೆಯೂ (ಕ್ರಿ.ಶ.1162–1184) ನಡೆಯಿತು. ಆಗಲೇ ನಡೆದದ್ದು ಬಸವಣ್ಣ ಮತ್ತಿತರರು ಪ್ರಚುರಪಡಿಸಿದ ವೀರಶೈವ ಚಳವಳಿ. ಕಲ್ಯಾಣದ ಚಾಲುಕ್ಯರ ಆಳ್ವಿಕೆಯ ಕೊನೆಯಲ್ಲಿ ಅವರ

ಸಾಮಂತರಾಗಿದ್ದ ದೇವಗಿರಿಯ ಸೇವುಣರು ಹಾಗೂ ದ್ವಾರಸಮುದ್ರದ ಹೊಯ್ಸಳರು ಪ್ರಬಲರಾಗಿ, ಕರ್ನಾಟಕವನ್ನು ತಮ್ಮಲ್ಲೇ ಹಂಚಿಕೊಂಡು ಆಳಿದರು. ದೆಹಲಿ ಸುಲ್ತಾನರ ಸೈನ್ಯವು ಈ ಎರಡೂ ವಂಶಗಳ ಅರಸರನ್ನು ಸೋಲಿಸಿದ ಬೆನ್ನಲ್ಲೇ ವಿಜಯನಗರ ಸಾಮ್ರಾಜ್ಯದ ದೊರೆಗಳು (ಕ್ರಿ.ಶ.1336) ಹಾಗೂ ಬಹಮನೀ ಸುಲ್ತಾನರು (ಕ್ರಿ.ಶ.1347) ಕರ್ನಾಟಕವನ್ನು ಆಳಲು ಮುಂದಾದರು. ಅದರಲ್ಲೂ ವಿಜಯನಗರದರಸರು ಕರ್ನಾಟಕದ ಬಹುಭಾಗವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದರು. ಬಹಮನಿ ಸುಲ್ತಾನರ ನಂತರ ಅಧಿಕಾರಕ್ಕೆ ಬಂದ ಐದು ಶಾಹೀ ಸುಲ್ತಾನರಲ್ಲಿ ಬಿಜಾಪುರದ ಆದಿಲ್‌ಶಾಹಿಗಳು (ಕ್ರಿ.ಶ.1489–1686) ಮತ್ತು ಬೀದರಿನ ಬರೀದ್‌ಶಾಹಿಗಳು (ಕ್ರಿ.ಶ.1504–1619), ಕರ್ನಾಟಕದ ಉತ್ತರ ಭಾಗಗಳ ಮೇಲೆ ತಮ್ಮ ಪ್ರಭುತ್ವವನ್ನು ಸಾಧಿಸಿದರು. ಆದರೆ ಆನಂತರದಲ್ಲಿ ಆದಿಲ್‌ಶಾಹಿಗಳು ಬರೀದ್ ಶಾಹಿಗಳನ್ನು ಉಚ್ಚಾಟಿಸಿದರು. ಮುಂದೆ 1565ರಲ್ಲಿ ಸಂಯುಕ್ತ ಶಾಹೀ ಸುಲ್ತಾನರ ಸೈನ್ಯ ರಾಜಧಾನಿ ವಿಜಯನಗರಕ್ಕೆ ನುಗ್ಗಿ ಕೊಳ್ಳೆ ಹೊಡೆಯಿತು. ಆ ವೇಳೆಗಾಗಲೇ ರಾಜಧಾನಿಯಿಂದ ಪರಾರಿಯಾಗಿದ್ದ ವಿಜಯನಗರದ ಸೇನಾಧಿಪತಿಗಳಾದ ವೆಂಕಟಪತಿರಾಯ ಮತ್ತು ತಿರುಮಲರಾಯರು ಸಾಮ್ರಾಜ್ಯದ ರಾಜಧಾನಿಯನ್ನು ಮೊದಲು ಪೆನುಗೊಂಡೆಗೆ (ಕ್ರಿ.ಶ.1565) ಸ್ಥಳಾಂತರಿಸಿದರು. ಆನಂತರ ಚಂದ್ರಗಿರಿಗೆ (ಎರಡೂ ಆಂಧ್ರಪ್ರದೇಶದಲ್ಲಿವೆ) ಮತ್ತು ಕೊನೆಯಲ್ಲಿ ತಮಿಳುನಾಡಿನ ವೆಲ್ಲೂರಿಗೆ, ವರ್ಗಾಯಿಸಲಾಯಿತು.. ವೆಲ್ಲೂರು ಕ್ರಿ.ಶ.1646ರವರೆಗೆ ರಾಜಧಾನಿಯಾಗಿತ್ತು. ಕರ್ನಾಟಕದಲ್ಲಿ ವಿಜಯನಗರದ ಉತ್ತರಾಧಿಕಾರಿಗಳಾದ ಅನೇಕ ಮಂಡಲಾಧಿಪತಿಗಳಲ್ಲಿ, ಮೈಸೂರಿನ ಒಡೆಯರು, ಚಿತ್ರದುರ್ಗದ ಪಾಳೆಯಗಾರರು, ಮಾಗಡಿಯ ಪ್ರಭುಗಳು ಮತ್ತು ಕೆಳದಿಯ ಅರಸರು ಅತ್ಯಂತ ಪ್ರಮುಖರಾಗಿದ್ದರು. ಮುಂದೆ ಕ್ರಿ.ಶ.1686ರಲ್ಲಿ ಮೊಗಲರ ಕೈಯಲ್ಲಿ ಸೋಲುವವರೆವಿಗೂ ಉತ್ತರದ ಪ್ರಾಂತಗಳೆಲ್ಲಾ ಬಿಜಾಪುರದ ಆದಿಲ್‌ಶಾಹಿಗಳ ಹಿಡಿತದಲ್ಲಿದ್ದವು. ಉತ್ತರದಲ್ಲಿ ಮೊಗಲರ ಪ್ರಾಬಲ್ಯ ಕಡಿಮೆಯಾದಂತೆ, ಕರ್ನಾಟಕದ ಉತ್ತರ ಜಿಲ್ಲೆಗಳ ಮೇಲೆ ಮರಾಠರು ಹಿಡಿತವನ್ನು ಸಾಧಿಸಿದರು. ಕಿ.ಶ.1761ರಲ್ಲಿ ಮೈಸೂರಿನ ಒಡೆಯರಿಂದ ಅಧಿಕಾರವನ್ನು ಸೆಳೆದುಕೊಂಡ ಹೈದರಾಲಿಯು, ಕೆಳದಿ ಹಾಗೂ ಚಿತ್ರದುರ್ಗ ಸಂಸ್ಥಾನಗಳನ್ನು ಕ್ರಮವಾಗಿ ಕ್ರಿ.ಶ.1763 ಮತ್ತು ಕ್ರಿ.ಶ. 1779ರಲ್ಲಿ ವಶಪಡಿಸಿಕೊಂಡು, ಮಂಗಳೂರಿನವರೆವಿಗೂ ತನ್ನ ಅಧಿಕಾರವನ್ನು ವಿಸ್ತರಿಸಿದನು. ಹೈದರ್‌ನ ಮಗ ಟಿಪ್ಪೂವನ್ನು ಕ್ರಿ.ಶ.1799ರಲ್ಲೂ, ಮರಾಠ ಪೇಶ್ವೆಗಳನ್ನು ಕ್ರಿ.ಶ.1818ರಲ್ಲೂ ಬ್ರಿಟೀಷರು ಸೋಲಿಸಿದಾಗ, ಕರ್ನಾಟಕವು ಬ್ರಿಟೀಷರ ಆಳ್ವಿಕೆಗೆ ಒಳಗಾಯಿತು. ಬ್ರಿಟೀಷರ ಆಳ್ವಿಕೆಯ ಸಮಯದಲ್ಲಿ ಮೈಸೂರು ಸಂಸ್ಥಾನವೂ ಸೇರಿದಂತೆ ವಿವಿಧ ಆಡಳಿತಕ್ಕೆ ಒಳಪಟ್ಟಿದ್ದ ಕರ್ನಾಟಕವೂ ಸ್ವಾತಂತ್ರ್ಯ ಹೋರಾಟದಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸಿತು. ಇದು ಮುಂದೆ ಕ್ರಿ.ಶ.1956ರಲ್ಲಿ ಒಂದು ಭಾಷಾ ರಾಜ್ಯವಾಗಿ ಜನಿಸಿ, ಕ್ರಿ.ಶ.1973ರಲ್ಲಿ 'ಕರ್ನಾಟಕ' ಎಂದು ಪುನರ್‌ನಾಮಕರಣಗೊಂಡಿತು.

ದೆಹಲಿಯ ಸುಲ್ತಾನರ ಸೈನ್ಯಗಳು, ದಕ್ಷಿಣದ ನಾಲ್ಕು ಬೃಹತ್ ಸಾಮ್ರಾಜ್ಯಗಳಾದ ದೇವಗಿರಿಯ ಸೇವುಣರು, ವಾರಂಗಲ್ಲಿನ ಕಾಕತೀಯರು, ದ್ವಾರಸಮುದ್ರದ ಹೊಯ್ಸಳರು ಮತ್ತು ಮಧುರೆಯ ಪಾಂಡ್ಯರನ್ನು ನಿರ್ನಾಮ ಮಾಡಿದಾಗ, ಈ ಪರ್ಯಾಯ ದ್ವೀಪಕ್ಕೆ ಭಿನ್ನವಾದ ಧಾರ್ಮಿಕ ನಂಬಿಕೆಯ ರಾಜಕೀಯ ಶಕ್ತಿಯೊಂದು ದಕ್ಷಿಣದಲ್ಲಿ ಪ್ರಭಾವಶಾಲಿಯಾಗುತ್ತದೆಂದು ತೋರಿತು. ಸೇವುಣರ ಸಾಮಂತನಾದ ಬಳ್ಳಾರಿ ಜಿಲ್ಲೆ ಕಂಪ್ಲಿಯ ಕಂಪಿಲರಾಯನ ಧೀರ ಹಾಗೂ ಸಾಹಸಿ ಪುತ್ರ ಕುಮಾರರಾಮನೂ ಸೇರಿದಂತೆ ಅನೇಕ ರಾಜಕುಮಾರರು ಮುಸ್ಲಿಮರ ಆಕ್ರಮಣಗಳನ್ನು ಪ್ರತಿಭಟಿಸಿ ನಾಮಾವಶಿ

ಅಮಾನವೀಯ ಧೋರಣೆಯಿಂದ ಜನರು ದಿಗ್ಭ್ರಾಂತರಾಗಿದ್ದರು. ಕುಮಾರರಾಮನ ಮೇಲೆ ಕಟ್ಟಿರುವ ಹಾಡು ಮತ್ತು ಲಾವಣಿಗಳು ಜನರ ಆ ಆತಂಕವನ್ನು ವ್ಯಕ್ತಪಡಿಸುತ್ತವೆ. ಸಂಗಮ ವಂಶದ ಪಂಚಸೋದರರಾದ ಹರಿಹರ, ಬುಕ್ಕ, ಕಂಪಣ, ಮುದ್ದಪ್ಪ ಮತ್ತು ಮಾರಪ್ಪ, ಜನಬಲದೊಂದಿಗೆ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದಾಗ ಜನತೆ ಅದನ್ನು ತುಂಬು ಹೃದಯದಿಂದ ಸ್ವಾಗತಿಸಿತು. ಸಂಗಮ ಸಹೋದರರಿಗೆ ಧನಸಹಾಯ ಮಾಡಲು ವಿದ್ಯಾರಣ್ಯ ಯತಿಗಳು ಸುವರ್ಣ ಮಳೆಗರೆದರೆಂದು ಐತಿಹ್ಯ ಹೇಳುತ್ತದೆ. ವಿಜಯನಗರದ ಸ್ಥಾಪಕರಿಗೆ ಬೇರೆ ಬೇರೆ ಮೂಲಗಳಿಂದ ಧನಸಹಾಯವನ್ನು ದೊರಕಿಸಿಕೊಡುವಲ್ಲಿ ಪ್ರಾಯಶಃ ಈ ಯತಿಗಳು ಸಫಲರಾಗಿದ್ದರೆಂಬುದನ್ನು ಇದು ಸೂಚಿಸುವಂತೆ ತೋರುತ್ತದೆ. ವಿದ್ಯಾರಣ್ಯರ ಗುರುಗಳಾದ ಭಾರತೀತೀರ್ಥರಿಗೆ ಹರಿಹರ ಮತ್ತು ಅವನ ಸಹೋದರರು ಕ್ರಿ.ಶ.1346ರಲ್ಲಿ ಕೆಲವು ದಾನಗಳನ್ನು ನೀಡಿದ್ದಾರೆ. ಇದೇ ಶೃಂಗೇರಿ ಶಾಸನದಲ್ಲಿ, ಆ ಸಂದರ್ಭದಲ್ಲಿ ಅಲ್ಲೇ ಹಾಜರಿದ್ದ ಅಳುಪ ಮೂಲದ ಹೊಯ್ಸಳ ರಾಣಿ ಚಿಕ್ಕಾಯಿ ತಾಯಿ ಅದೇ ದಿನದಂದು ಇದಕ್ಕೆ ಪೂರಕವಾಗಿ ದಾನ ನೀಡಿದ ಉಲ್ಲೇಖವೂ ಇದೆ.

ಸಂಗಮ ವಂಶದ (ಕ್ರಿ.ಶ.1336–1485) ಹರಿಹರನು (ಕ್ರಿ.ಶ.1336–56) ಈ ಸಾಮ್ರಾಜ್ಯವನ್ನು ಕ್ರಿ.ಶ. 1336ರ ಸುಮಾರಿನಲ್ಲಿ ಸ್ಥಾಪಿಸಿ, ಕರ್ನಾಟಕ ಮತ್ತು ಆಂಧ್ರ ರಾಜ್ಯಗಳ ಸಮುದ್ರ ಮೇರೆಗಳ ನಡುವಣ ಉತ್ತರ ಕರ್ನಾಟಕಾಂಧ್ರ ಭಾಗಗಳನ್ನು ಹಿಡಿತಕ್ಕೆ ತೆಗೆದುಕೊಂಡನು. ಮೂರನೆಯ ಬಲ್ಲಾಳ (ಕ್ರಿ.ಶ.1343) ಹಾಗೂ ಅವನ ಮಗ ವಿರೂಪಾಕ್ಷ ಬಲ್ಲಾಳ (ಕ್ರಿ.ಶ.1346) ರ ಸಾವಿನ ನಂತರ ಹೊಯ್ಸಳ ಸಾಮ್ರಾಜ್ಯವು ಹರಿಹರನ ಆಳ್ವಿಕೆಗೆ ಸಂಪೂರ್ಣ ಒಳಗಾಯಿತು. ಇವನ ತಮ್ಮನಾದ ಬುಕ್ಕರಾಯನು (ಕ್ರಿ.ಶ.1366–77) ಮಧುರೆಯ ಸುಲ್ತಾನರ ಪ್ರಭುತ್ವವನ್ನು ನಾಶ ಪಡಿಸುವಲ್ಲಿ ಯಶಸ್ವಿಯಾದನು. ಅವನು ಚೀನಾ ದೇಶಕ್ಕೆ ತನ್ನ ರಾಯಭಾರಿಗಳನ್ನು ಕಳುಹಿಸಿದ್ದ. ಇಮ್ಮಡಿ ಹರಿಹರನು ತನ್ನ ಸಾಮ್ರಾಜ್ಯವನ್ನು ಕೊಂಕಣ ಪ್ರದೇಶದ ಗೋವಾದ ಆಚೆಗೆ ಚೌಲ್‌ವರೆವಿಗೂ ವಿಸ್ತರಿಸಿದ್ದನು.

ಇಮ್ಮಡಿ ದೇವರಾಯನ ನಂತರ ಬಂದ ಸಂಗಮ ವಂಶದ ದೊರೆಗಳು ಅಶಕ್ತರು ಹಾಗೂ ದುರ್ವ್ಯಸನಿಗಳೂ ಆಗಿದ್ದ ಕಾರಣದಿಂದ ಛಿದ್ರಛಿದ್ರವಾಗಬಹುದಾಗಿದ್ದ ಸಾಮ್ರಾಜ್ಯವನ್ನು, ಕ್ರಿ.ಶ.1485ರಲ್ಲಿ ಅಧಿಕಾರವನ್ನು ವಹಿಸಿಕೊಂಡ ಸಾಳುವ ನರಸಿಂಹನಂತಹ ಸಮರ್ಥ ದಂಡನಾಯಕನು ರಕ್ಷಿಸಿದ. ಇದು, ಸಾಳುವ ವಂಶದವರು (ಕ್ರಿ.ಶ.1485–1505) ಕೆಲವು ಕಾಲ ಆಳ್ವಿಕೆ ನಡೆಸಲು ಕಾರಣವಾಯಿತು. ಈ ಅವಧಿಯಲ್ಲೇ ಕ್ರಿ.ಶ.1498ರ ಪೋರ್ಚುಗೀಸ್ ಯಾತ್ರಿಕ ವಾಸ್ಕೋಡಗಾಮನು ಪಶ್ಚಿಮ ಸಮುದ್ರತೀರದ ಕಲ್ಲಿಕೋಟೆಗೆ ಬಂದು ಇಳಿದದ್ದು, ಪಾಶ್ಚಾತ್ಯರ ಆಳ್ವಿಕೆಗೆ ಮುಕ್ತ ಅವಕಾಶಕ್ಕೆ ಎಡೆ ಮಾಡಿಕೊಟ್ಟಿತು. ಕಾಲಾಂತರದಲ್ಲಿ ತುಳುವ ವೀರ ನರಸಿಂಹನ ಮುಂದಾಳತ್ವದಲ್ಲಿ ಸಿಂಹಾಸನದ ವಿಷಯದಲ್ಲಿ ಎರಡನೆಯ ಅತಿಕ್ರಮಣ ನಡೆಯಿತು. ಇವನ ನಂತರ ತುಳುವ ವಂಶದ ಆಡಳಿತಾವಧಿ(ಕ್ರಿ.ಶ.1503–1570)ಯಲ್ಲಿ, ಮಹಾಯೋಧ, ವಿದ್ವಾಂಸ ಹಾಗೂ ಆಡಳಿತಗಾರನಾದ ಕೃಷ್ಣದೇವರಾಯನು ಕ್ರಿ.ಶ.1510ರ ಜನವರಿ 24ರಂದು ಪಟ್ಟಕ್ಕೆ ಬಂದು ಕ್ರಿ.ಶ.1529ರವರೆಗೆ ಆಳ್ವಿಕೆ ನಡೆಸಿದನು. ಇವನು ರಾಯಚೂರು ದೋಅಬ್ ಅನ್ನು ಕ್ರಿ.ಶ.1512ರಲ್ಲಿ ಆಕ್ರಮಿಸಿದ. ಆನಂತರ, ಶತ್ರು ರಾಜಧಾನಿ ಪಟ್ಟಣಗಳಾದ ಬೀದರ್ (ಕ್ರಿ.ಶ.1512), ಬಿಜಾಪುರ (ಕ್ರಿ.ಶ.1523) ಮತ್ತು ಪೂರ್ವದಿಕ್ಕಿನ ಗಜಪತಿ ದೊರೆಗಳ ಕಟಕ್(ಕ್ರಿ.ಶ.1518)ಗಳನ್ನು ಗೆಲ್ಲಲು ಸೈನ್ಯವನ್ನು ಮುನ್ನಡೆಸಿ ವಿಜಯಶಾಲಿಯಾದ. ತಿರುಮಲೆಯ ವೆಂಕಟೇಶನ ಮಹಾಭಕ್ತನಾಗಿದ್ದ ಇವನು ಮೇಲಿಂದ ಮೇಲೆ (ಏಳು ಬಾರಿ) ತಿರುಪತಿಗೆ ಭೇಟಿ ನೀಡಿ ವೆಂಕಟೇಶ್ವರನಿಗೆ ಉದಾರವಾಗಿ ದಾನ–ದತ್ತಿಗಳನ್ನು ನೀಡಿದ. ಅವನ ಭಕ್ತಿಯ ದ್ಯೋತಕವಾಗಿ ಈಗಲೂ ತಿರುಮಲೆಯಲ್ಲಿ ರಾಯ ಮತ್ತವನ ಇಬ್ಬರು ರಾಣಿಯರ ಕಂಚಿನ ಪ್ರತಿಮೆಗಳಿವೆ. ಪೋರ್ಚುಗೀಸ್ ಪ್ರವಾಸಿ ಪೇಸ್‌ನ ಮಾತಿನಂತೆ 'ಮಹಾ ಆಡಳಿತಗಾರ ಹಾಗೂ ನ್ಯಾಯಪಕ್ಷಪಾತಿ' ಯಾಗಿದ್ದ ಕೃಷ್ಣದೇವರಾಯನು ಸ್ವತಃ ಸಾಹಿತಿಯಾಗಿದ್ದು, ವಿದ್ವಾಂಸರಿಗೆ ಆಶ್ರಯದಾತನೂ ಆಗಿದ್ದು 'ಆಮುಕ್ತಮೌಲ್ಯದ' ಎಂಬ ತೆಲುಗು ಮಹಾ ಕಾವ್ಯವನ್ನು ರಚಿಸಿದ್ದಾನೆ. ಅವನ ಆಸ್ಥಾನದಲ್ಲಿ ಅಷ್ಟದಿಗ್ಗಜಗಳೆಂದೇ ಪ್ರಸಿದ್ಧರಾಗಿದ್ದ ಎಂಟು ಜನ ಕವಿಗಳಿದ್ದರು. ಅವರಲ್ಲಿ ಒಬ್ಬ ಅಲ್ಲಸಾನಿ ಪೆದ್ದಣ. ರಾ

ದೇವಾಲಯವನ್ನು ರಚಿಸಿದ. ಅವನ ಆಳ್ವಿಕೆಯ ಕಾಲದಲ್ಲಿಯೇ ಕ್ರಿ.ಶ.1510ರಲ್ಲಿ ಪೋರ್ಚುಗೀಸರು ಗೋವೆಯನ್ನು ಬಿಜಾಪುರದ ಸುಲ್ತಾನರಿಂದ ಕಿತ್ತುಕೊಂಡರು. ಪೋರ್ಚುಗೀಸರು ವಿಜಯನಗರದವರೊಂದಿಗೆ ಸಮೃದ್ಧವಾದ ವ್ಯಾಪಾರ ಸಂಬಂಧವನ್ನು ಹೊಂದಿದ್ದು ವಿಜಯನಗರದರಸರಿಗೆ ಆದ್ಯತೆಯ ಮೇರೆಗೆ ಅರಬ್ಬೀ ಕುದುರೆಗಳನ್ನು ಒದಗಿಸುತ್ತಿದ್ದ ಪೋರ್ಚುಗೀಸರ

ಕಡ್ಲೇಕಾಯಿ, ಮೆಣಸಿನಕಾಯಿ ಮೊದಲಾದ ಹೊಸ ಸಸ್ಯವರ್ಗಗಳನ್ನು ಈ ಭಾಗಕ್ಕೆ ಪರಿಚಯ ಮಾಡಿಕೊಡುವುದರ ಜೊತೆಗೆ ಮುದ್ರಣ ತಂತ್ರಜ್ಞಾನವನ್ನೂ ನವಜಗತ್ತಿನಿಂದ ತಂದು ಭಾರತದಲ್ಲಿ

ಮೊದಲ ಬಾರಿಗೆ ಪರಿಚಯಿಸಿದರು. ಮಂಗಳೂರು ಮತ್ತು ಬಾರಕೂರುಗಳು ವಿಜಯನಗರದ ಕಾಲದಲ್ಲಿ ಕರಾವಳಿ ಪ್ರದೇಶದ ಪ್ರಮುಖ ಪ್ರಾಂತಗಳಾಗಿದ್ದು, ವಿಜಯನಗರದ ಅರಸರಿಂದ ನೇಮಕವಾದ ರಾಜ್ಯಪಾಲರುಗಳಿಂದ ಆ ಪ್ರಾಂತಗಳ ಆಳ್ವಿಕೆ ನಡೆಯಿತು. ಸದಾಶಿವರಾಯನ ಆಳ್ವಿಕೆಯ ಸಮಯದಲ್ಲಿ (ಕ್ರಿ.ಶ.1543–70) ನಾಲ್ವರು ಷಾಹಿ ಸುಲ್ತಾನರು ಸಾಮ್ರಾಜ್ಯದ ಮೇಲೆ ಆಕ್ರಮಣ ಮಾಡಿದರು. ಕ್ರಿ.ಶ.1565ರಲ್ಲಿ ನಡೆದ ರಕ್ಕಸ–ತಂಗಡಿ (ರಕ್ಕಸಗಿ–ತಂಗಡಗಿ) ಯುದ್ಧದಲ್ಲಿ, ವಿಜಯನಗರದ ಮಂತ್ರಿಯಾಗಿದ್ದ ಅರವೀಡು ರಾಮರಾಯನನ್ನು (ಕ್ರಿ.ಶ.1542–65) ಕೊಂದು, ರಾಜಧಾನಿ ವಿಜಯನಗರವನ್ನು ಸೂರೆ ಮಾಡಿದರು. ಆನಂತರ, ರಾಮರಾಯನ ತಮ್ಮಂದಿರಾದ ತಿರುಮಲರಾಯ ಹಾಗೂ ವೆಂಕಟಪತಿರಾಯರು, ರಾಜಧಾನಿಯನ್ನು ಪೆನುಗೊಂಡೆಗೆ ಬದಲಾಯಿಸಿದರು. ಕಾಲಾಂತರದಲ್ಲಿ ವಿಜಯನಗರದ ದೊರೆಗಳಿಗೆ ಚಂದ್ರಗಿರಿ ಮತ್ತು ವೆಲ್ಲೂರುಗಳು ರಾಜಧಾನಿಗಳಾದವು.

ತುಳುವ ವಂಶದ ಆಳ್ವಿಕೆಯನ್ನು ಅರವೀಡು ವಂಶದವರು ಕ್ರಿ.ಶ.1570ರಲ್ಲಿ ಬದಿಗೊತ್ತಿ, ತಾವೇ ದೊರೆಗಳಾದರು. ಅರವೀಡು ವಂಶದ ಕೊನೆಯ ದೊರೆಯಾದ ಮೂರನೆಯ ಶ್ರೀರಂಗರಾಯನಿಗೆ ಅವನ ಮರಣದವರೆವಿಗೂ ಕೆಳದಿಯ ದೊರೆಗಳು ಆಶ್ರಯ ನೀಡಿದರು. ವಿಜಯನಗರದ ಆಳ್ವಿಕೆಯ ಕಾಲದಲ್ಲಿ ಕರ್ನಾಟಕದ ಕರಾವಳಿ ಪ್ರಾಂತದಲ್ಲಿ ಅಜಿಲ, ಚೌಟ, ಬಂಗ, ಮೂಲ, ಹೆಗ್ಡೆ, ಬಲ್ಲಾಳ, ಡೊಂಬ ಮುಂತಾದ ಕೆಲವು ಸಣ್ಣಪುಟ್ಟ ಸ್ಥಳೀಯ ಪಾಳೆಯಪಟ್ಟುಗಳ ರಾಜರು ಹೆಚ್ಚು ಕಡಿಮೆ ಸ್ವತಂತ್ರರಾಗಿಯೇ ಆಳ್ವಿಕೆ ನಡೆಸಿದರು. ಈ ಕಾಲದಲ್ಲಿ ವೇಣೂರು, ಮೂಡಬಿದ್ರೆ ಹಾಗೂ ಕಾರ್ಕಳಗಳು ಪ್ರಮುಖ ಜೈನ ಕೇಂದ್ರಗಳಾಗಿ ಬೆಳೆದವು. ವಿಜಯನಗರದ ಅರಸರು ಎಲ್ಲಾ ಧರ್ಮಗಳಿಗೂ ಆಶ್ರಯ ನೀಡಿದ್ದರು. ಪೋರ್ಚುಗೀಸ್ ಪ್ರವಾಸಿ ಬಾರ್ಬೋಸಾ ವಿಜಯನಗರದ ಚಕ್ರವರ್ತಿಗಳ ಈ ಔದಾರ್ಯ ಗುಣವನ್ನು ಪ್ರಮಾಣ ಪೂರ್ವಕವಾಗಿ ಗುರುತಿಸಿದ್ದಾನೆ. ದಕ್ಷಿಣ ಭಾರತದ ಎಲ್ಲಾ ಭಾಷೆಗಳ ಸಾಹಿತ್ಯಿಕ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಲಾಯಿತು.

ಭಾರತೀಯ ಪರಂಪರೆಯ ತತ್ತ್ವಶಾಸ್ತ್ರ, ಧರ್ಮ, ವಿಜ್ಞಾನ, ಸಾಹಿತ್ಯ ಮತ್ತು ಸಂಸ್ಕೃತಿಗಳನ್ನು ಸಂರಕ್ಷಿಸುವ ಜವಾಬ್ದಾರಿ ಯನ್ನು ತಾನಾಗಿಯೇ ನಿಭಾಯಿಸುವ ಸಂದರ್ಭ ಈ ಸಾಮ್ರಾಜ್ಯಕ್ಕೆ ಅನಿವಾರ್ಯವಾಯಿತು. ಸ್ಥಳೀಯ ಧಾರ್ಮಿಕ ಹಾಗೂ ಸಾಂಸ್ಕೃತಿಕ ಪರಂಪರೆಗಳನ್ನು ಕಾಪಾಡುವ ಕೆಲಸದಲ್ಲಿ ವಿಜಯನಗರ ಸಾಮ್ರಾಜ್ಯವು ಪ್ರಮುಖ ಪಾತ್ರ ವಹಿಸಿತು. ವೇದಗಳಿಗೆ ವ್ಯಾಖ್ಯಾನಗಳನ್ನು ಬರೆಯುವುದರ ಜೊತೆಗೆ ಸಾಯಣರು, 'ಯಜ್ಞತಂತ್ರ ಸುಧಾನಿಧಿ', 'ಆಯುರ್ವೇದ ಸುಧಾನಿಧಿ', 'ಸುಭಾಷಿತ ಸುಧಾನಿಧಿ' ಮತ್ತು 'ಅಲಂಕಾರ ಸುಧಾನಿಧಿ' ಮೊದಲಾದ ಕೃತಿಗಳ ಸಂಕಲನಾ ಕಾರ್ಯವನ್ನು ಮಾಡುವ ಮೂಲಕ ಭಾರತೀಯ ಪರಂಪರೆಯ ಸಂರಕ್ಷಣೆಗೆ ಮುಂದಾದರು. ಮಾಧವರು ಭಾರತೀಯ ಮೂಲದ ಎಲ್ಲಾ ಧರ್ಮಗಳನ್ನು ಪರಿಚಯಿಸುವ 'ಸರ್ವದರ್ಶನ ಸಂಗ್ರಹ'

ಕೃತಿಯನ್ನು ರಚಿಸಿದ್ದಾರೆ. ಅವರ 'ಪರಾಶರ ಮಾಧವೀಯ' ಗ್ರಂಥವು 'ಪರಾಶರ ಸ್ಮೃತಿ'ಯ ವ್ಯಾಖ್ಯಾನವಾಗಿದ್ದು, ಹಿಂದೂ ಜನಜೀವನ ಹಾಗೂ ಕಾಯ್ದೆಗಳ ಬಗೆಗಿನ ವಿಭಿನ್ನ ಕೃತಿಯಾಗಿದೆ. ಈ ಕೃತಿಯಲ್ಲಿ ಸತಿಪದ್ಧತಿಯನ್ನು 'ಕಲಿವರ್ಜ್ಯ' ಎಂದರೆ, ಕಲಿಯುಗದಲ್ಲಿ ಸಂಪೂರ್ಣ ತ್ಯಜಿಸಬೇಕಾದ ಆಚರಣೆ ಎಂದು ಸೂಚ್ಯವಾಗಿ ಹೇಳಲಾಗಿದೆ.

ಈ ಸಾಮ್ರಾಜ್ಯದ ದೊರೆಗಳು ಎಲ್ಲಾ ಧಾರ್ಮಿಕ ಪಂಥಗಳ (ಶೈವ, ವೈಷ್ಣವ, ಶ್ರೀವೈಷ್ಣವ, ಜೈನ ಇತ್ಯಾದಿ) ದೇವಾಲಯಗಳನ್ನು ಕಟ್ಟಿಸಿದಷ್ಟೆ ಅಲ್ಲ, ತಮ್ಮ ಕಾಲಕ್ಕೂ ಮೊದಲೇ ಹಾಳಾಗಿದ್ದ ದೇವಾಲಯಗಳ ಪುನರ್ ನಿರ್ಮಾಣ ಕಾರ್ಯವನ್ನೂ ಮಾಡಿಸಿದ್ದಾರೆ. ಅದಾಗಲೇ ಅಸ್ತಿತ್ವದಲ್ಲಿದ್ದ ದೇವಾಲಯಗಳಿಗೆ ವಿಸ್ತಾರವಾದ ಪ್ರಾಕಾರಗಳನ್ನು ಒದಗಿಸಲಾಯಿತು. 'ರಾಯಗೋಪುರ' ಎಂದೇ ಪ್ರಸಿದ್ಧವಾಗಿರುವ, ಎತ್ತರವೂ ಭವ್ಯವೂ ಆದ ಗೋಪುರಗಳನ್ನು ರಾಜಧಾನಿ ಹಂಪಿಯೂ ಸೇರಿದಂತೆ ಆಂಧ್ರಪ್ರದೇಶ ಹಾಗೂ ತಮಿಳುನಾಡಿನ ಶ್ರೀಶೈಲಂ, ಕಾಳಹಸ್ತಿ, ತಿರುಪತಿ, ಶ್ರೀರಂಗಂ, ಚಿದಂಬರಂ, ಕಂಚಿ ಮೊದಲಾದ ಸ್ಥಳಗಳಲ್ಲಿ ನಿರ್ಮಿಸಲಾಯಿತು. ಅಲ್ಲದೆ ಬಹುಕಂಬಗಳಿಂದೊಡಗೂಡಿದ ತೆರೆದ ಕಲ್ಯಾಣಮಂಟಪ ಹಾಗೂ ಸಭಾಮಂಟಪಗಳನ್ನು ದೇವಾಲಯಗಳ ಸಂಕೀರ್ಣಕ್ಕೆ ಸೇರಿಸಲಾಯಿತು. ಇಂತಹ ಪ್ರತಿಯೊಂದು ಮಂಟಪಕ್ಕೂ ಸುಂದರ ಕಲಾಕೃತಿಗಳಾಗಿ ಎತ್ತರವಾದ ಹತ್ತಾರು ಏಕಶಿಲಾ ಕಂಬಗಳನ್ನು ಒದಗಿಸಲಾಯಿತು. ಈ ಸಾರ್ವಜನಿಕ ಕೆಲಸಗಳು ಸಾವಿರಾರು ಜನಗಳಿಗೆ ಕೂಲಿಕೆಲಸವನ್ನು ಒದಗಿಸಿದವು. ಹಂಪಿ, ಹರವು, ಬೆಳ್ಳೂರು, ಕಿಕ್ಕೇರಿ, ಅಂಬಲಿಗೆರೆ, ಹೊಳಲ್ಕೆರೆ, ಶೃಂಗೇರಿ, ಕುರುಗೋಡು, ಬಾಗಳಿ, ಖಾಂಡ್ಯ, ಕಳಸ ಮೊದಲಾದ ಸ್ಥಳಗಳಲ್ಲಿರುವ ಈ ಕಾಲದ ದೇವಾಲಯಗಳು ಗಮನಾರ್ಹವಾಗಿವೆ. ಇವುಗಳ ಜೊತೆಗೆ ನೆರೆರಾಜ್ಯಗಳಾದ ತಮಿಳುನಾಡು ಮತ್ತು ಆಂಧ್ರಪ್ರದೇಶಗಳಲ್ಲಿಯೂ ಅಸಂಖ್ಯಾತ ದೇವಾಲಯಗಳನ್ನು ಇವರು ನಿರ್ಮಾಣ ಮಾಡಿಸಿದ್ದಾರೆ. ಇವರ ಕಾಲದಲ್ಲಿ ಸಂಸ್ಕೃತ, ಕನ್ನಡ, ತಮಿಳು ಮತ್ತು ತೆಲುಗು ಸಾಹಿತ್ಯಗಳು ಅಭಿವೃದ್ಧಿ ಹೊಂದಿ, ವೀರಶೈವ ಧರ್ಮ ಪುನರುಜ್ಜೀವನಗೊಂಡಿತು. ವಿದ್ಯಾರಣ್ಯ, ಕಲ್ಲಿನಾಥ, ರಾಮಾಮಾತ್ಯ, ಪುರಂದರದಾಸ ಮತ್ತು ಕನಕದಾಸರಿಂದ ಕರ್ನಾಟಕ ಸಂಗೀತ ಅರಳಿತು. ಪ್ರಾಥಮಿಕ ಸರಳ ರಚನೆಗಳನ್ನು ರಚಿಸುವುದರ ಮೂಲಕ, ಕರ್ನಾಟಕ ಸಂಗೀತವನ್ನು ಕಲಿಸುವ ವ್ಯವಸ್ಥೆಗೆ ಜನಪ್ರಿಯತೆಯನ್ನು ತಂದುಕೊಟ್ಟ ಪುರಂದರದಾಸರನ್ನು, ಸಂತ ತ್ಯಾಗರಾಜರು 'ಕರ್ನಾಟಕಸಂಗೀತ ಪಿತಾಮಹ' ಎಂದು ಕರೆದಿರುವುದು ಅನ್ವರ್ಥವಾಗಿಯೇ ಇದೆ. ಈ ಸಾಮ್ರಾಜ್ಯಕ್ಕೆ ಭೇಟಿ ನೀಡಿದ್ದ ನಿಕೊಲೊಕಾಂಟಿ (ಕ್ರಿ.ಶ.1420), ಅಬ್ದುಲ್ ರಜಾಕ್ (ಕ್ರಿ.ಶ.1443), ಬಾರ್ಬೊಸ್ (ಕ್ರಿ.ಶ.1500-11), ಪೇಸ್ (ಕ್ರಿ.ಶ.1520), ನ್ಯೂನಿಜ್ (ಕ್ರಿ.ಶ.1535), ಸೀಜರ್ ಫ್ರೆಡರಿಕ್ (ಕ್ರಿ.ಶ.1567) ಮೊದಲಾದ ವಿದೇಶೀ ವ್ಯಾಪಾರಿಗಳು ಮತ್ತು ಪ್ರವಾಸಿಗಳು

ವಿಜಯನಗರ ಸಾಮ್ರಾಜ್ಯದ ಉಚ್ಛ್ರಾಯ ಸ್ಥಿತಿಯನ್ನು, ಅದರಲ್ಲೂ ವಿಶೇಷವಾಗಿ ರಾಜಧಾನಿ ವಿಜಯನಗರವನ್ನು ಅತ್ಯಂತ ಸೂಚ್ಯವಾದ ಮಾತುಗಳಲ್ಲಿ ವರ್ಣರಂಜಿತವಾಗಿ ಬಣ್ಣಿಸಿದ್ದಾರೆ.

**ಭಾರತ ಸ್ವಾತಂತ್ರ್ಯ ನಂತರದ ಹೈದ್ರಾಬಾದ್-ಕರ್ನಾಟಕ ಪ್ರದೇಶ**

ಸ್ವಾತಂತ್ರ್ಯ ಪೂರ್ವ ಭಾರತದಲ್ಲಿ 565 ಸಂಸ್ಥಾನಗಳು ಇದ್ದು, ಆ ಎಲ್ಲ ಸಂಸ್ಥಾನಗಳು ರಾಜ ಮಹಾರಾಜರು, ಅವರ ಮಾಂಡಲೀಕರು ಆಳುತಿದ್ದರು. ಬ್ರಟೀಷರು ಈ ದೇಶ ಬಟ್ಟು ಹೋಗುವಾಗ ಆ ಎಲ್ಲ ಸಂಸ್ಥಾನಗಳಿಗೆ ಒಂದು ಆಹ್ವಾನವನ್ನು ನೀಡಿದ್ದರು. ಯಾವುದೇ ಸಂಸ್ಥಾನ ತಾನು ಇಚ್ಚೆಪಟ್ಟರೇ ಭಾರತ ಒಕ್ಕೂಟದಲ್ಲಿ ಸೇರಬಹುದು ಅಥವಾ ಪಾಕಿಸ್ತಾನಕ್ಕೆ ಸೇರಬಹುದು ಅಥವಾ ಪ್ರತ್ಯೇಕವಾಗಿ ಉಳಿಯಬಹುದು ಎಂಉ ದ್ವಿಮುಖ ನೀತಿಯನ್ನು ಬಟ್ಟು ಹೋದರು. ಈ ಹಿನ್ನಲೆಯಲ್ಲಿ ಭಾರತದ ಅವಿಭಾಜ್ಯ ಅಂಗವಾಗಿರುವ ಜಮು-ಕಾಶ್ಮೀರದ ರಾಜ ಹರಿಸಿಂದ್, ಪಂಜಾಬದ ಜುನಾಗಡ ಸಂಸ್ಥಾನದ ಮಹರಾಜ ಮೊಹಮ್ಮದ್ ಮಹಾಬಾತ್ ಕಣಜಿ-111 ಹಾಗೂ ಹೈದ್ರಾಬಾದ ಸಂಸ್ಥಾನದ ನಿಜಾಮರಾದ ಮೀರ್ ಉಸ್ಮಾನ ಅಲೀ ಖಾನ ಇವರುಗಳೂ ಆಗಸ್ಟ 15, 1947 ರಂದು ಭಾರತ ಒಕ್ಕೂಟದಲ್ಲಿ ಸೇರಲು ನಿರಾಕರಿಸಿ ಪ್ರತ್ಯೇಕವಾಗಿ ಉಳಿಯಲು ನಿರ್ಧರಿಸಿದರು. ಕಾಲಕ್ರಮೇಣ ಜಮ್ಮುಕಾಶ್ಮೀರ ಸಂಸ್ಥಾನವು ಭಾರತ ಒಕೂಟದಲ್ಲಿ ಕೆಲವು ಷರತ್ತುಗಳೊಂದಿಗೆ ಸೇರಿತು. ಅದೇ ರೀತಿ ಪಂಜಾಬ್ ಸಂಸ್ಥಾನವು ಕೂಡ 24 ನೇ ಫೆಬ್ರವರಿ 1948ರಂದು ಭಾರತ ಒಕ್ಕೂಟದಲ್ಲಿ ಸೇರಲು ಒಪ್ಪಿಕೊಂಡಿತ್ತು.

ಆದರೆ ಹೈದ್ರಾಬಾದ ಸಂಸ್ಥಾನದ ನಿಜಾಮರು ಪ್ರತ್ಯೇಕವಾಗಿ ಉಳಿಯುವ ಯೋಚನೆಯೊಂದಿಗೆ ಭಾರತ ಸರಕಾರಕ್ಕೆ ಒಂದು ವರ್ಷಗಳು ಕಾಲಾವಕಾಶವನ್ನು "ಸ್ಟ್ಯಾಂಡ್ ಸ್ಟಿಲ್ ಅಗ್ರಿಮೆಂಟ್" ಮುಖಾಂತರ ಕೋರಿದರು. ಹಾಗಾಗಿ ಇಡೀದೇಶಕ್ಕೆ 15.ಆಗಸ್ಟ 1947 ರಂದು ಸ್ವಾತಂತ್ರ್ಯ ಸಿಕ್ಕರೂ ಈ ಸಂಸ್ಥಾನದ ಜನರಿಗೆ ಆ ಭಾಗ್ಯ ದೊರೆಯಲಿಲ್ಲ. ಇದರಿಂದ ಈ ಸಂಸ್ಥಾನದ ಜನರು ಮತ್ತೊಂದು ಸವಾತಂತ್ರ್ಯ ಸಂಗ್ರಾಮಕ್ಕೆ ತಯಾರಾಗುವುದು ಅನಿವಾರ್ಯವಾಯಿತು. ಈ ಪ್ರದೇಶದ ಅನೇಕ ನಾಯಕರು ಸಂಸ್ಥಾನವನ್ನು ಭಾರತ ಒಕ್ಕೂಟದಲ್ಲಿ ಸೇರಿಸಬೇಕು ಎಂದು ಎಲ್ಲ ರೀತಿಯ ಹೋರಾಟ ಮಾಡುತ್ತ ಬಂದರು. ಆ ಹೋರಾಟದ ಫಲವಾಗಿ 17-09-1948 ರಂದು ಹೈದ್ರಾಬಾದ ಸಂಸ್ಥಾನವನ್ನು ಭಾರತ ಸರಕಾರ ಪೋಲಿಸ್ ಕರ್ಯಚರಣೆಯನ್ನು "ಆಪರೇಶನ್ ಪೋಲೋ" ಎಂಬ ಹೆಸರಿನಿಂದ 13-09-1948 ರಂದು ಪ್ರಾರಂಭಿಸಿ ಕೇವಲ ನಾಲ್ಕು ದಿನಗಳಲ್ಲಿ ಹೈದ್ರಾಬಾದ ನಗರಕ್ಕೆ ಮುತ್ತಿಗೆ ಹಾಕಲಾಯಿತ್ತು, ಈ ಸಂದರ್ಭದಲ್ಲಿ ಪರಸ್ಥಿತಿಯ ಗಂಭೀರತೆಯನ್ನು ಅರಿತ ನಿಜಾಮ ಮೀರ್ ಉಸ್ಮಾನ ಅಲಿ ಖಾನ ಹೈದ್ರಾಭಾದ ಸಂಸ್ಥಾನವನ್ನು ಭಾರತ ಒಕ್ಕೂಟದಲ್ಲಿ ವಿಲೀನಗೋಳಿಸಿದರು.ಆಗ ದೇಶದಲ್ಲಿ ಹೈದ್ರಾಬಾದ ಒಂದು ರಾಜ್ಯವಾಯಿತು. ಪೋಲಿಸ್ ಕಾರ್ಯಚರಣೆಯ ಮುಖ್ಯಸ್ಥರಾಗಿದ್ದ ಜನರಲ್ ಚೌಧರಿಯವರೆ ಮಿಲಿಟರಿ ಗೌವರ್ನರ್ ಆಗಿ ಅಧಿಕಾರ ಸ್ವೀಕರಿಸಿದರು ಹಾಗು ಅವರು ಡಿಸೆಂಬರ್ 1949ವರೆಗೆ

ಮುಂದುವರೆದರು. ಅವರ ನಂತರ ಹೈದ್ರಾಬಾದ್ ರಾಜ್ಯದ ಮುಖ್ಯಮಂತ್ರಿಯಾಗಿ ಎಂ.ಕೆ ವೆಲ್ಲೊಡಿ.ಐ.ಸಿ.ಎಸ್. ನೇಮಕವಾದರು. ನಿಜಾಮ ಮೀರ್ ಉಸ್ಮಾನ ಅಲಿ ಖಾನ ಕೇಂದ್ರ ಸರಕಾರದ ಜೊತೆ ಸಂಧಾನವನ್ನು ಏರ್ಪಡಿಸಿ 26ನೇ ಜನವರಿ 1950ರಿಂದ ಹೈದ್ರಾಬಾದ ರಾಜ್ಯದ ರಾಜಪ್ರಮುಖರಾಗಿ 1956ರ ವರೆಗೆ ಅಧಿಕಾರದಲ್ಲಿದ್ದರು. ಹೈದ್ರಾಬಾದ ರಾಜವನ್ನು ರಾಜ್ಯ ಪುನರ್ವಿಗಡಣೆಯ ಸಂದರ್ಭದಲ್ಲಿ ಮೂರು ಭಾಗಗಳನ್ನಾಗಿ ವಿಭಜಿಸಿ ಬೇರೆ ರಾಜ್ಯಗಳ ಜೊತೆ ವಿಲೀನಗೊಳಿಸಿದರು. ಈ ಸಂದರ್ಭದಲ್ಲಿ ಹೈದ್ರಾಬಾದ ರಾಜ್ಯ ಅಸ್ತಿತ್ವ ಕಳೆದುಕೊಂಡಿತು. ಹೀಗಾಗಿ ಹೈದ್ರಾಬಾದ ಕರ್ನಾಟಕದರವರು ವರ್ಷದಲ್ಲಿ ಎರಡು ಸಲ ಸ್ವಾತಂತ್ರಯ ದಿನಾಚಾರಣೆಯನ್ನು ಆಚರಿಸುತ್ತಾರೆ. ಒಂದು ಭಾರತಕ್ಕೆ ಸಿಕ್ಕ ಸ್ವಾತಂತ್ರ್ಯಕ್ಕಾಗಿ, ಇನ್ನೋಂದು ಹೈದ್ರಾಬಾದ ಸಂಸ್ಥಾನ ಭಾರತ ಒಕ್ಕೂಟದಲ್ಲಿ ಸೇರಿದ ದಿನ 17ನೇ ಸೆಪ್ಟೆಂಬರ್ ರಂದು ಹೈದ್ರಾಆದ್-ಕರ್ನಾಟಕ ವಿಮೋಚನಾ ದಿನಾಚರಣೆ ಎಂದು ಆಚರಿಸಲಾಗುತ್ತದೆ.

**ಹೈದ್ರಾಬಾದ ಸಂಸ್ಥಾನ:** ಹೈದ್ರಾಬಾದ ಸಂಸ್ಥಾನವು ಕ್ರಿ.ಶ.1724ರಲ್ಲಿ ಮೊಗಲ ಸಾಮ್ರಾಜ್ಯದ ವಿಸ್ತರಣೆಯ ಅಂಗವಾಗಿ ಡೆಕ್ಕನನ ಪ್ರಾಂತ್ಯವಾಗಿ ಉದಯವಾಯಿತು ಇದರ ಮೊದಲ ವೈಸ್‌ರಾಯಿಯಾಗಿ ನಿಜಾಮಯಲ್-ಮುಲ್ಕ ಎಂದು, "ಆಸೀಫ ಜಾಹೀ" ವಂಶಸ್ಥರನ್ನು ಮೊಗಲ ದೊರೆ ಔರಂಗಜೇಬ್ ನೇಮಿಸಿದನ್ನು, ಇದರ ಮೊದಲ ರಾಜಧಾನಿ ಔರಂಗಾಬಾದ ಆಗಿತ್ತು. "ಆಸೀಫ ಜಾಹೀ" ವಂಶದ ಮೊದಲ ಆಡಳಿತಗಾರನಾಗಿ ಖಮರುದ್ದೀನ ಖಾನ ಸಿದ್ದಿಖಿ ಆಧಿಕಾರ ಸ್ವೀಕರಿಸಿದನು. ಇವನ ಆಡಳಿತವು ಮಾರ್ಚ್ 1724 ರಿಂದ 1ನೇ ಜೂನ್ 1748ಕ್ಕೆ ಕೊನೆಗೊಳ್ಳುತ್ತದೆ. ಇವನ ನಂತರ ಇವನ ನಾಲ್ಕನೇ ಮಗನಾದ ನವಾಬ್ ಮೀರ್ ನಿಜಾಮ ಅಲೀ ಖಾನ ಸಿದ್ದಿಖಿ ಬಹದೂರ ಇವನ ಅಧಿಕಾರಕ್ಕೆ ಬರುತ್ತಾನೆ. ಕ್ರಿ.ಶ.1762ರಲ್ಲಿ ರಾಜಧಾನಿಯನ್ನು ಔರಂಗಾಬಾದ್‌ದಿಂದ ಹೈದ್ರಾಬಾದಗೆ ಸ್ಥಳಾಂತರಿಸಿದ ಇವನು ಕ್ರಿ.ಶ.1803ರಲ್ಲಿ ನಿಧನವಗುತ್ತಾನೆ. ಇವನ ನಂತರ ಇವನ ಎರಡನೇ ಮಗ ಮೀರ್ ಅಕ್ಬರ್ ಅಲೀ ಖಾನ ಸಿದ್ದಿಖಿ ಸಿಕಂದರ ಜಹಾ ಅಧಿಕಾರಕ್ಕೆ ಬರುತ್ತಾನೆ. ಇವನು ನಿಧನಾಂತರ 1826ರಲ್ಲಿ ಇವನ ಮಗ ನಾಸೀರ್ ಉದ್-ದವಲಾಹ ಮೀರ್ ಫರಕುಂದಾ ಅಲೀಖಾನ ಸಿದ್ದಿಖಿ ಅಧಿಕಾರಕ್ಕೆ ಬರುತ್ತಾನೆ. ಇವನು 1857 ರವರೆಗೆ ಅಧಿಕಾರದಲ್ಲಿರುತ್ತಾನೆ, ಇವನ ನಂತರ ಇವನ ಮಗನಾದ ಅಫ್ಜಲ್-ಅದ್-ದವಲ್ 1857 ರಲ್ಲಿ ಅಧಿಕಾರಕ್ಕೆ ಬರುತ್ತಾನೆ. ಇವನು ಕ್ರಿ.ಶ.1867ರವರೆಗೆ ಅಧಿಕಾರದಲ್ಲಿರುತ್ತಾನೆ, ಇವನ ನಂತರ ಇವನ ಮಗನಾದ ಮಹಿಬೂಬ ಅಲಿ ಖಾನ ಸಿದ್ದಿಖಿ ಕ್ರಿ.ಶ.1869 ರಲ್ಲಿ ಅಧಿಕಾರಕ್ಕೆ ಬರುತ್ತಾನೆ. ಇವನ ನಂತರ ಕೊನೆಯ ನಿಜಾಮ ದೊರೆ ಮೀರ ಉಸ್ಮಾನ್ ಅಲೀ ಖಾನ (ಆಸೀಫ್ ಜಾಹ-7) ಕ್ರಿ.ಶ.1911 ರಲ್ಲಿ ಅಶಿಕಾರಕ್ಕೆ ಬರುತ್ತಾನೆ. ಇವನ ಆಡಳಿತದಲ್ಲಿ ಹೈದ್ರಾಬಾದ ಸಂಸ್ಥಾನ ಸಭಿವೃದ್ಧಿಯಲಿ ಮುನ್ನಡೆ ಸಾಧಿಸುತ್ತದೆ.

**ಕೊನೆಯ ನಿಜಾಮನ ಆಡಳಿತ:** ಈ ಸಂಸ್ಥಾನದ ಕೊನೆಯ ನಿಜಾಮ ಮೀರ್ ಉಸ್ಮಾನ ಅಲಿ ಖಾನ ಕ್ರಿ.ಶ.1886 ಏಪ್ರಲ್ 6 ರಂದು ಮಹಿಬೂಬ ಅಲಿ ಖಾನ ಸಿದ್ದಿಖಿ ಎಡನೆಯ ಮಗನಾಗಿ ಜನಿಸಿದನು. ಇವನು 18ನೆ ಸೆಪ್ಟೆಂಬರ್ ಕ್ರಿ.ಶ.1911ರಲ್ಲಿ ಅಧಿಕಾರಕ್ಕೆ ಬಂದನು. ಇವನ ಆಡಳಿತದಲ್ಲಿ ಜಗತ್ತಿನ ಅತ್ಯಂತ ಶ್ರೀಮಂತ ವ್ಯಕ್ತಿಗಳಲ್ಲಿ ಇವನು ಕೊಡ ಒಬ್ಬನಾಗಿದ್ದನು. ಕ್ರಿ.ಶ.1940ರಲ್ಲಿ ಇವನ ಹತ್ತಿ 2 ಬಿಲಿಯನ್ ಡಾಲರ್ ಹಣವಿತ್ತು. ಆ ಸಂದರ್ಭದಲಿ ಭಾರತ ಸರಕಾರದ ನಾರ್ಷಿಕ ಬಜೆಟ್ 1 ಬಿಲಯನ್ ಡಾಲರ್ ಆಗಿತ್ತು. ಹೀಗಾಗಿ ಇವನು ಸಾಯುವವರೆಗೂ ಕ್ರಿ.ಶ.1967ವರೆಗೆ ಏಷಿಯಾ ಖಂಡದ ಅತ್ಯಂತ ಆರೀಮಂತ ವ್ಯಕ್ತಿಯಾಗಿಯ್ಯ ಉಳಿದ ಇವನು ಸುಶಿಕ್ಷಿತನು, ಒಳ್ಳೆಯ ಆಡಳಿತಗಾರನು ಆಇದ್ದನು. ಇವನು ಒಳ್ಳೆಉ ಶಿಕ್ಷಣ ಪಡೆದಿದ್ದನು ಇಂಗ್ಲಿಷ್, ಉರ್ದು, ಪರ್ಷಿಯನ್ ಭಾಷೆಗಳಲ್ಲಿ ಪಾಂಡಿತ್ಯ ಹೊಂದಿದ್ದನು. ಇವನ ಆಡಳಿತದಲ್ಲಿ ಹೈದ್ರಾಬಾದ ಸಂಸ್ಥಾನವು ಸ್ವಾತಂತ್ರ್ಯ ಪೂರ್ವ ಭಾರತದ ಅತ್ಯಂತ ದೊಡ್ಡ ಸಂಸ್ಥಾನವಾಗಿತ್ತು, ಹೈದ್ರಾಬಾದ ಸಂಸ್ಥಾನವು 2,23,000 ಚ.ಕಿ. ವಿಸ್ತೀರ್ಣ ಹೊಂದಿತ್ತು.

ಈ ಸಂಸ್ಥಾನದ ಆಡಳಿತ ಭಾಷೆ ಉರ್ದುವಾಗಿತ್ತು, ಶಿಕ್ಷಣ ಮಾದ್ಯಮ ಕೊಡ ಉರ್ದುವಾಗಿತ್ತು. ಈತನ ಆಡಳಿತದಲಿ ಹಲವಾರು ಅಭಿವೃದ್ಧಿ ಯೋಜನೆಗಳನ್ನು ಹಮ್ಮಿಕೊಂಡಿದ್ದನು. ಅವುಗಳಲ್ಲಿ ಮುಖ್ಯವಾದವುಗಳೆಂದರೆ. ಕ್ರಿ.ಶ.1917ರಲ್ಲಿ ಹೈದ್ರಾಬಾದ ನಗರದಲ್ಲಿ ಉಸ್ಮಾನಿಯ ವಿಶ್ವವಿದ್ಯಾಲಯ ಸ್ಥಾಪನೆ, ಕ್ರಿ.ಶ.1926ರಲ್ಲಿ ಉಸ್ಮಾನಿಯ ವೈದ್ಯಕೀಯ ಕಾಲೇಜು ಸ್ಥಾಪಿಸಿದನು. ಬನಾರಸ್ ಹಿಂದು ವಿಶ್ವವಿದ್ಯಲಯ ಹಾಗೂ ಅಲಿಗಡ್ ಮುಸ್ಲಿಂ ವಿಶ್ವವಿದ್ಯಲಯದ ಅಭಿವೃದ್ಧಿಗೆ 10 ಲಕ್ಷ ರೂ. ಹಣವನ್ನು ಮೀಸಲಿಟ್ಟನು. ಆದರೆ ತನ್ನ ಸಂಸ್ಥಾನದ ಪ್ರಜೆಗಳ ಅವಶ್ಯಕತೆಗೆ ತಕ್ಕಂತೆ ಶಿಕ್ಷಣ ಸಂಸ್ಥೆಗಳ ಸಂಖ್ಯೆ ಹೆಚ್ಚು ಮಾಡಲಿಲ್ಲಿ. ಇದರಂದ ರಾಜ್ಯ ಶಕ್ಷಣದಲ್ಲಿ ಭಾರಿ ಹಿನ್ನಡೆ ಸಾಧಿಸಿತು.

7ನೇ ನವೆಂಬರ್ 1919ರಲ್ಲಿ ಸರಕಾರ ನಡೆಸಲು ಹೊಸ ಸಂವಿಧಾನವನ್ನು ಜಾರಿಗೆ ತಂದನು. ಅವನ ಸಂಸ್ಥಾನದಲ್ಲಿ ಹೈದ್ರಾಬಾದ ಸಿವಿಲ್ ಸರ್ವಿಸ್ ಎಂಬ ಸರಕಾರಿ ಆಡಳಿತ ವ್ಯವಸ್ಥೆಯನ್ನು ಜಾರಿಗೆ ತಂದಿದ್ದನ. 1920ರಲ್ಲಿ ಉಸ್ಮಾನ ಸಾಗರ, ಹಿಮಾಯತ್ ಸಾಗರ ಎರಡು ಜಲಾಶಯಗಳನ್ನು ನಿರ್ಮಿಸಿದನು. ಹೊಸಪೇಟೆ ಹತ್ತಿರ ತುಂಗಾ-ಭದ್ರಾ ನದಿಗೆ 1945ರಲ್ಲಿ ಜಲಾಶಯವನ್ನು ನಿರ್ಮಿಸಲು ಪ್ರಾರಂಭಿಸಿದುನು. ಅದು 1953ರಲ್ಲಿ ಪೂರ್ಣಗೊಂಡಿದೆ. ಕೃಷ್ಣ ನದಿಗೆ ಜಲಾಶಯ ನಿರ್ಮಸುವ ಸರ್ವೆ ಕಾರ್ಯಕ್ಕೆ ಚಾಲನೆ ನೀಡಿದನು. ಅದೇ ರೀತಿ ವಾಡಿ-ಗದಗ ಹಾಗೂ ಮಹಿಬೂಬ ನಗರ-ಮಿನಿರಾಬಾದ ರೈಲ್ವೆ ಯೋಜನೆಗೆ ಚಾಲನೆ ನೀಡಿ ಸರ್ವೆ ಕಾರ್ಯ ಪೂರ್ಣಗೊಳಿಸಿದನು. ಆ ರೈಲ್ವೆ ಯೋಜನೆಗಳು ಇಂದಿಗೂ ನೆನೆಗುದಿಗೆ ಬಿದ್ದಿರುವುದು ಪ್ರಜಾಪ್ರಭುತ್ವ ಸರಕರಗಳ ದುರಂತವೇ ಸರಿ. ಅವನು ಹಣಕಾಸಿನ ವ್ಯವಹಾರಕ್ಕೆ ತನ್ನೆದೇ ಆದ ನಾಣ್ಯವನ್ನು ಹೊಂದಿದ್ದು (ಹೈದ್ರಾಬಾದ ಸಿಕ್ಕಾ), ಸಂಸ್ಥಾನದ ಹಣಕಾಸಿನ ವ್ಯವಹಾರವನ್ನು ನಡೆಸಲು 1941ರಲ್ಲಿ "ಹೈದ್ರಾಬಾದ ಸ್ಟೇಟ್ ಬ್ಯಾಂಕ್" (ಈಗಿನ

ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದ)ನ್ನು ರಾಜ್ಯದ ಕೇಂದ್ರ ಬ್ಯಾಂಕನ್ನಾಗಿ ಸ್ಥಾಪಿಸಿದನು. ಸ್ವಂತ ರೈಲ್ವೆ ಇಲಾಖೆಯನ್ನು ಸಹ ಹೊಂದಿದ್ದು.ಸ್ವಂಸ್ಥಾನದ ಜನರಿಗೆ ಸ್ವಂತ ರೈಲ್ವೆ ಸಾರಿಗೆ ವ್ಯವಸ್ಥೆ ಮಾಡಿದ್ದನು. ಸಂಸ್ಥಾನದ ರಕ್ಷಣೆಗಾಗಿ ಮಿಲಿಟರಿ ವ್ಯವಸ್ಥೆಯನ್ನು ಕೊಡ ಹೊಂದಿದ್ದನು. ಈ ಕರಣಕ್ಕಾಗಿ ಪ್ರತ್ಯೇಕ ದೇಶವಾಗಿ ಉಳಿಯಬೇಕೆಂಬ ಬಯಕೆ ಅವನದಾಗಿತ್ತು.

**ರಾಜ್ಯಗಳ ಪುನರ್ವಿಂಗಡನೆ**: 1953ರಲ್ಲಿ ಕೊಪ್ಪಳದ ಪ್ರಥಮ ಲೋಕಸಭಾ ಸದಸ್ಯರಾದ ಡಾ. ಶಿಮೂರ್ತಿಸ್ವಾಮಿ ಅಳವಂಡಿಯವು ರಾಜ್ಯುಗಳನನ್ನು ಭಾಷೆಗಳ ಆಧಾರದ ಮೇಲೆ ವಿಂಗಡನೆ ಮಾಡಬೇಕೆಂದು ಪ್ರಪ್ರಥಮ ಬಾರಿಗೆ ಲೋಕಸಭೆಯಲ್ಲಿ ಒತ್ತಾಯಿಸಿದರು, ಈ ಹಿನ್ನಲೆಯಲ್ಲಿ ಕೇಂದ್ರ ಸರಕರವು ಆಡಳಿತತ್ಮಕ ದೃಷ್ಟಿಯಿಂದ ಪ್ರಥಮ ರಾಜ್ಯ ಪುನರ್ವಿಂಗಡಣಾ ಆಯೋಗವನ್ನು (ಎಸ್ ಆರ್ ಸಿ) ನ್ಯಾ. ಡಾ. ಫಜಲ್ ಅಲಿಯವರ ನೇತೃತ್ವದಲ್ಲಿ. ರಚಿಸಿತು. ನ್ಯಾಡಾ. ಫಜಲ್ಅಲಿಯವರು ತಮ್ಮ ವರದಿಯನ್ನು ಸಲಿಸುತ್ತಾ ಹೈದ್ರಾಬಾದ ರಾಜ್ಯವನ್ನು ಮೂರು ಭಾಗಗಳಾಗಿ ವಿಂಗಡಿಸಿ, ಬೇರೆ ರಾಜ್ಯಗಳಲಿ ವಿಲೀನಗೊಳಿಸುವ ಶಿಫರಸ್ಸನ್ನು ಮಾಡುತ್ತಾ,ಹೈದ್ರಾಬಾದ ಕರ್ನಾಟಕ ದೇಶದಲ್ಲೇ ಅತ್ಯಂತ ಹಿದುಳಿದ ಪ್ರದೇಶ, ಮೈಸೂರು ರಾಜ್ಯ ದೇಶದಲ್ಲೇ ಅತ್ಯಂತ ಮುಂದುವರೆದ ಪ್ರದೇಶ, ಅವೆರಡರಲ್ಲಿ 100 ವರ್ಷಗಳಷ್ಟು ಅಭಿವೃದ್ಧಿಯಲ್ಲಿ ವ್ಯತ್ಯಾಸವಿದೆ ಹಾಗಾಗಿ ಆ ಪ್ರದೇಶವನ್ನು ಹತ್ತು ವರ್ಷಗಳ ಕಾಲ ಪ್ರತ್ಯೇಕವಾಗಿ ಇಟ್ಟು ಅಭಿವೃದ್ಧಿಪಡಿಸಿ ಆನಂತರ ಅದನ್ನು ಮೈಸೂರು ರಾಜ್ಯಕ್ಕೆ ಸೇರಿಸಲು ಸಲಹೆಯನ್ನು ಕೇಂದ್ರ ಸರಕಾರಕ್ಕೆ ಮಾಡಿತು. ಆದರೆ ಅಂದಿನ ಪ್ರಧಾನಿ ಪಂಡಿತ್ ಜವಹಾರಲಾಲ ನೆಹರುರವರು ಆ ಸಲಹೆಯನ್ನು ತಿರಸ್ಕರಿಸುತ್ತ ಮೈಸೂರ ರಾಜ್ಯದವರಿಗೆ ಅಭಿವೃದ್ಧಿಯ ಕುರಿತು ಆಳವಾದ ಅನುಭವ ಹಾಗೂ ಕಾಳಜಿ ಇದೆ, ಇದು ಅವರ ಜವಾಬ್ದಾರಿ ಆ ಪ್ರದೇಶವನ್ನು ಅವರೇ ಅಭಿವೃದ್ಧಿ ಮಾಡುತ್ತಾರೆ ಎಂಬ ಅಪಾರವಾದ ವಿಶ್ವಾಸದೊಂದಿಗೆ ಹೈದ್ರಾಬಾದ– ಕರ್ನಾಟಕ ಪ್ರದೇಶವನ್ನು ಅಂದಿನ ಮೈಸೂರು ರಾಜ್ಯಕ್ಕೆ ಸೇರಿಸಿದರು. ಹೈದ್ರಾಬಾದ–ಕರ್ನಾಟಕ ಪ್ರದೇಶದ ಅಭಿವೃದ್ಧಿಯನ್ನು ಮೈಸೂರು ರಾಜ್ಯವೇ ಮಾಡುತ್ತದೆ ಎಂದು ಹೇಳಲಾಗಿತ್ತು ಮತ್ತು ಇದನ್ನು ಈ ಭಾಗದ ಜನ ನಂಬಿದ್ದು ಇತಿಹಾಸ. ಆದರೆ 1956 ರಿಂದ ಇಲ್ಲಿಯವರೆಗೆ ಮೈಸೂರು ಕರ್ನಾಟಕ ರಾಜ್ಯವನ್ನಾಳಿದ ಎಲ್ಲ ಸರಕಾರಗಳು ಈ ಭಾಗಕ್ಕೆ ಅಭಿವೃದ್ಧಿ ವಿಷಯದಲ್ಲಿ ಭಾರಿ ತಾರತಮ್ಯ ಮಾಡಿರುವುದು ಕಂಡುಬರುತ್ತದೆ.

ನವೆಂಬರ್ 1, 1956 ರಂದು ಹಲವಾರು ಹೋರಾಟಗಾರರ ಫಲವಾಗಿ ಮುಂಬೈ ರಾಜ್ಯದ ಬಿಜಾಪುರ, ಬೆಳಗಾವಿ, ಕಾರವಾರ, ಮದ್ರಾಸ್ ರಾಜ್ಯದ ಮಂಗಳೂರು ಮತ್ತು ಬಳ್ಳಾರಿ, ಕೇರಳದ ಮಡಿಕೇರಿ, ಹೈದ್ರಾಬಾದ ರಾಜ್ಯದ ಬೀದರ, ಅವಿಭಜಿತ ಗುಲ್ಬರ್ಗಾ ಮತ್ತು ಅವಿಭಜಿತ ರಾಯಚೂರ ಜಿಲ್ಲೆಗಳನ್ನು ಸೇರಿಸಿಕೊಂಡು ಅಖಂಡ ಮೈಸೂರು ರಾಜ್ಯ ಉದಯವಾಯಿತು.

ಹೈದ್ರಾಬಾದ ರಾಜ್ಯವು ಭಾಷೆಯ ವೈವಿದ್ಯಮಯದಿಂದ ಕೂಡಿದ ಪ್ರದೇಶವಾಗಿದ್ದು ಒಟ್ಟಾರೆಯಾಗಿ ನಾಲ್ಕು ಪ್ರಮುಖ ಭಾಷೆ ಮಾತನಾಡುವ ಜನ ಈ ರಾಜ್ಯದಲ್ಲಿದ್ದು. ತೆಲುಗು ಮಾತನಾಡುವ ಈಗಿನ ತೆಲಂಗಾಣ, ಮರಾಠಿ ಮಾತನಾಡುವ ಮರಾಠವಾಡ, ಕನ್ನಡ ಮಾತನಾಡುವ ಈಗಿನ ಹೈದ್ರಾಬಾದ ಕರ್ನಾಟಕ ಮತ್ತು ಈ ಎಲ್ ಪ್ರದೇಶಗಳಲ್ಲಿ ಉರ್ದುಮಾತನಡುವ ಜನ ಬೆರೆತುಹೋಗಿದ್ದರು. ಒಟ್ಟು 16 ಜಿಲ್ಲೆಗಳಾದ ಹೊಂದಿದ್ದ ಈ ರಾಜ್ಯವು ಕನ್ನಡ ಮಾತನಡುವ ಮೂರು ಜಿಲ್ಲೇಗಳಾದ ಬೀದರ, ಅವಿಭಜಿತ ಗುಲ್ಬರ್ಗಾ ಮತ್ತು ಅವಿಭಜಿತ ರಾಯಚೂರು, ತೆಲುಗು ಮಾತವಡುವ ಎಂಟು ಜಿಲ್ಲೆಗಳಾದ ಮಹಿಬೂಬನಗರ, ಹೈದ್ರಾಬಾದ, ಮೇಡಕ್, ಕರೀಮನಗರ, ಖಮ್ಮಮ್, ರಂಗಾರೆಡ್ಡಿ, ಆದಿಲಾಬಾದ್, ವಾರಂಗಲ್ ಹಾಗೂ ಮರಾಠಿ ಮಾತನಾಡುವ ಐದು ಜಿಲ್ಲೇಗಳಾದ ಭೀಡ್, ಔರಂಗಾಬಾದ, ನಾಂದೇಡ್, ಲತೂರ್ ಹಾಗೂ ಉಸ್ಮಾನಾಬಾದ್, ರಾಜ್ಯಗಳ ಪುನರ್ವಿಂಗಡಣೆಯಾದಾಗ ಹೈದ್ರಾಬಾದ ರಾಜ್ಯವನ್ನು ಮೂರು ಮಹಾರಾಷ್ಟ್ರಕ್ಕೆ ಹಾಗೂ ಹೈದ್ರಾಬಾದ ಕರ್ನಾಟಕವನ್ನು ಅಂದಿನ ಮೈಸೂರು ರಾಜ್ಯಕ್ಕೆ ಸೇರಿಸಲಾಯಿತು.

ನಿಜಾಮನ ಆಡಳಿತದಲ್ಲಿ ಹೈದ್ರಾಬಾದ ಸಂಸ್ಥಾನದ ಬಹುತೇಕ ಸರಕಾರಿ ಹುದ್ದೆಗಳಿಗೆ ನೇಮಕಗೊಳ್ಳುವವರು ಹಾಗು ಉಸ್ಮಾನಿಯ ವಿಶ್ವವಿದ್ಯಾಲಯದಲ್ಲಿ ಉನ್ನತ ಶಿಕ್ಷಣಕ್ಕೆ ಅತೀ ಹೆಚ್ಚು ವಿದ್ಯಾರ್ಥಿಗಳು ಪ್ರವೇಶ ಪಡೆಯುವವರು ಉತ್ತರ ಭಾರತದವರಾಗಿದ್ದರು. ಇದನ್ನು ಮನಗಂಡ ಸಂಸ್ಥಾನದ ನಿಜಾಮ ಮೀರ್ ಉಸ್ಮಾನ ಅಲಿ ಖಾನ 1919ರಲ್ಲಿ ಒದು ಫರ್ಮಾನ್ (ಸರಕಾರಿ ಆದೇಶ) ಹೊರಡಿಸಿ "ಮುಲ್ಕಿ" ಕಾನೂನನ್ನು ಜಾರಿಗೆ ತಂದನು. ಮುಲ್ಕಿ ಎಂದರೆ ಉರ್ದು ಶಬ್ದ, ಇದರರ್ಥ ದೇಶೀಯ ಅಥವಾ ಸ್ಥಳೀಯ ಎಂದರ್ಥ. ಯಾರು ಈ ಸಂಸ್ಥಾನದಲ್ಲಿ 15 ವರ್ಷಗಳು ವಾಸವಾಗಿರುತ್ತಾರೊ ಅವರಿಗೆ ಮುಲ್ಕಿ ಎಂಉದ ಪರಿಗಣಿಸಲಾಗುತ್ತಿತ್ತು. ಮುಲ್ಕಿ ಕಾನೂರು ಎಂದರೆ, ಹೈದ್ರಾಬಾದ ಸಂಸ್ಥಾನದ ಎಲ್ಲ ಸರಕರಿ ಹುದ್ದೆಗಳಲ್ಲಿ ಹಾಗೂ ಉನ್ನತ ವ್ಯಸಂಗದಲ್ಲಿ ಸ್ಥಳೀಯರಿಗೆ ಶೇ.85 ರಷ್ಟು ಹುದ್ದೆಗಳನ್ನು ಮೀಸಲಿಡುವುದು. ಈ ಕಾನೂನು ನವೆಂಬರ್ 1,1956ರವರೆಗೆ ಹೈದ್ರಾಬಾದ ರಾಜ್ಯದಲ್ಲಿ ಜಾರಿಯಲ್ಲಿತ್ತು. ಅದಾದ ನಂತರ ಆಂಧ್ರಪ್ರದೇಶದ ತೆಲಂಗಾಣದಲ್ಲಿ ಇಂದಿಗೂ ಜರಿಯಲ್ಲಿದೆ ಹಾಗೂ ಮರಾಠವಾಡಲ್ಲಿ ಇದರ ಸವಲತ್ತನ್ನು 371ನೇ ಕಲಂ ಅಡಿಯಲ್ಲಿ ನೀಡಲಾಯಿತು. ಆದರೆ ಅದೇ ಸಂಸ್ಥಾನದ, ಅದೇ ರಾಜ್ಯದ ಮತ್ತೊಂದು ಭಾಗವಾಗಿದ್ದ ಹೈದ್ರಾಬಾದ-ಕರ್ನಾಟಕಕ್ಕೆ ಮುಲ್ಕಿ ಕಾನೂನಿನ ಸವಲತ್ತು ನೀಡದೇ ವಂಚಿಸಲಾಯಿತು. ತೆಲಂಗಾಣ ಪ್ರದೇಶವನ್ನು ಆಂಧ್ರಪ್ರದೇಶಕ್ಕೆ ಸೇರಿಸುವಾಗ ಹೈದ್ರಾಬಾದ ರಾಜ್ಯದ ಮುಖ್ಯ ಮಂತ್ರಗಳಾದ ಶ್ರೀ ಡಾ.ಬಿ.ರಾಮಕೃಷ್ಣರಾವ್ ಹಾಗೂ ಆಂಧ್ರಪ್ರದೇಶ ಮುಖ್ಯ ಮಂತ್ರಗಳಾದ ಶ್ರೀ ಬಿ. ಗೋಪಾಲ್ ರೆಡ್ಡಿ ಇವರು ಜಂಟಿಯಾಗಿ "ಜಂಟಲ್ ಮ್ಯಾನ್ ಅಗ್ರಿಮೆಂಟ್"ಗೆ ಸಹಿ ಮಾಡಿದರು.ಇದರಲ್ಲಿ ಮುಖ್ಯವಾಘಿ ಮುಲ್ಕಿ ಕಾನೂನು ಮುಂದುವರೆಸಬೇಕು,

ತೆಲಂಗಾಣ ಪ್ರಾದೇಶಿಕ ಸ್ಥಾಯಿ ಅಮಿತಿ ರಚನೆ ಮಡಬೇಕು, ತೆಲಂಗಾಣಕ್ಕೆ ಸಂಬಂಧಿಸಿದ ಎಲ್ಲ ಅಭಿವೃದ್ಧಿ ಕಾರ್ಯಗಳನ್ನು ಈ ಸಮಿತಿಯ ಮುಖಾಂತರವೇ ಮಾಡಬೇಕು, ಉರ್ದು ಭಾಷೆಗೆ ಈಗಿರುವ ಸ್ಥಾನಮಾನವನ್ನು ಐದು ವರ್ಷಗಳವರೆಗೆ ಮುಂದುವರೆಸಬೇಕು, ರಾಜ್ಯ ಸಚಿವ ಸಂಪುಟದಲ್ಲಿ ಶೇ 40 ರಷ್ಟು ಸಚಿವರು ತೆಲಂಗಣದವರಿರಬೇಕು, ಆಂಧ್ರದವರು ಮುಖ್ಯಮಂತ್ರಿಯಾದರೆ ತೆಲಂಗಾಣದವರೊಬ್ಬರು ಉಪಮುಖ್ಯಮಂತ್ರಿಯಾಗಬೇಕು ಅಥವಾ ತೆಲಂಗಾಣದವರು ಮುಖ್ಯಮಂತ್ರಿಯಾದರೆ ಆಂಧ್ರದವರು ಉಪಮುಖ್ಯಮಂತ್ರಿಯಾಗಬೇಕೆಂದು "ಜಂಟಲ್ ಮ್ಯಾನ್ ಅಗ್ರಿಮೆಂಟ್" ರೂಪದಲ್ಲಿ ಒಪ್ಪಂದ ಮಾಡಿಕೊಳ್ಳಲಾಯಿತು. ಕೆಲವೇ ವರ್ಷಗಳಲ್ಲಿ "ಜಂಟಲ್ ಮ್ಯಾನ್ ಅಗ್ರಿಮೆಂಟ್" ಅನುಷ್ಠಾನದಲ್ಲಿ ಉಲ್ಲಂಘನೆಯಾಗಿದೆ ಎಂದು ತೆಲಂಗಾಣ ಪ್ರಾಂತ್ಯದಲಲಿ ಪ್ರತ್ಯೇಕ ರಾಜ್ಯದ ಕೂಗೆದ್ದಿತ್ತು. ಮುಲ್ಕಿ ಕಾನೂನಿನ ಸವಲತ್ತು 1957ರಲ್ಲಿ ಕೇಂದ್ರ ಸರಕಾರ ಸಂವಿಧಾನದ 371ನೇ ಕಲಂ ಉಪಬಂಧ ಅಡಿಯಲ್ಲಿ ತೆಲಂಗಾಣಕ್ಕೆ ನೀಡಿತು. 'ಜಂಟಲ್ ಮ್ಯಾನ್ ಅಗ್ರಿಮೆಂಟ್" ಉಲ್ಲಂಘನೆಯ ಕಾರಣದಿಂದ ತೆಲಂಗಾಣದಲ್ಲಿ ಪ್ರತ್ಯೇಕ ರಾಜ್ಯದ ಕೂಗು ಅರವತ್ತರ ದಶಕದಿಂದಲೇ ಪ್ರಾರಂಭವಾಯಿತು. 1969ರಲ್ಲಿ ಆಂಧ್ರದ ಸಿ. ಚೆನ್ನಾರೆಡ್ಡಿ ನೇತೃತ್ವದಲ್ಲಿ ತೆಲಂಗಾಣಕ್ಕೆ ನೀಡಿದ ವಿಶೇಷ ಸ್ಥಾನಮಾನನಮಗೂ ನೀಡಬೇಕು ಎಂದು "ನೈ ಆಂಧ್ರ" ಎಂದು ಅತೀ ಉಗ್ರ ಹೋರಾಟ ನಡೆದು ಕೇಂದ್ರ ಸರಕಾರದ ಕಚೇರಿಗಳನ್ನು, ರಾಜ್ಯ ಸರಕಾರದ ಕಛೇರಿಗಳನ್ನು ಧ್ವಂಸಗೊಳಿಸಿ, ಕಾನೂನಿನ ಸುವ್ಯವಸ್ಥೆಯ ಪ್ರಶ್ನೆ ಎದುರಾಗಿ ಜನರ ಜೀವನ ದುಸ್ತರವಾಗಿತ್ತು. ಈ ಹೋರಾಟಕ್ಕೆ ಮಣಿದ ಕೇಂದ್ರ ಸರಕಾರ 1973ರಲ್ಲಿ ಸಂವಿಧಾನದ 371ನೇ ಕಲಂ ಗೆ ತಿದ್ದುಪಡಿ ಮಾಡಿ, ಸಂವಿದಾನದ 371ನೇ ಕಲಂಗೆ "ಡಿ" ಉಪಬಂದವನ್ನು ಸೇರಿಸಿ ಮುಲ್ಕಿ ಕಾನೂನಿನ ಸವಲತ್ತನ್ನು ಇಡೀ ಆಂಧ್ರಪ್ರದೇಶಕ್ಕೆ ವಿಸತರಿಸಲಾಯಿತು ಮತ್ತು ಸಂವಿಧಾನದ 371ನೇ ಕಲಂಗೆ "ಇ" ಉಪಬಂಧವನ್ನು ಸೇರಿಸಿ ತೆಲಂಗಾಣದಲ್ಲಿ ಕೇಂದ್ರಿಯ ವಿಶ್ವವಿದ್ಯಾಲಯ ಸ್ಥಾಪನೆ ಮಾಡಲಾಯಿತ್ತು. ಇದರ ಜೊತೆಗೆ ತೆಲಂಗಾಣಕ್ಕೆ "ಸಿಕ್ಸ್ ಪಾಯಿಂಟ್ ಫಾರ್ಮುಲಾ" ಎದು ಮತ್ತೋಂದು ಒಪ್ಪಂದ ಮಾಡಿದರು. ಈ ಒಪ್ಪಂದವು ಕೂಡ ಅನುಷ್ಠಾನದಲ್ಲಿ ಉಲ್ಲಂಘನೆಯಾಯಿತು. ಈ ಎರಡು ಕಾರಣಕ್ಕಾಗಿ ಇಂದು ಪ್ರತ್ಯೇಕ ರಾಜ್ಯವೆ ಇದಕ್ಕೆಲ್ಲ ಲಪರಿಹಾರ ಎನನುವ ಮಟ್ಟಕ್ಕೆ ಬಂದು ನಿಂತಿದೆ. ಆದರೆ ಅದೇ ರಾಜ್ಯದ ಮತ್ತೊಂದು ಪ್ರದೇಶವಾದ ಹೈದ್ರಾಬಾದ-ಕರ್ನಾಟಕದಲ್ಲಿ ಮುಲ್ಕಿ ಕಾನೂನು ಮುಂದುವರೆಸುವ ಬಗ್ಗೆ ಹಾಗೂ ಈ ಭಾಗದ ಅಭಿವೃದ್ಧಿಯ ಕಡೆಗೆ ಯಾವೊಬ್ಬ ಮುಖಂಡರು, ಜನಪ್ರತಿನಿಧಿಗಳು ಕಾಳಜಿವಹಿಸದೇ ಇರುವುದರಿಂದ, ಈ ಭಾಗದ ಜನರ ಬದುಕು ಹೈರಾಣಾಗಿರುವದು ಸತ್ಯಸಂಗತಿ. ಕಳೆದ 56 ವರ್ಷಗಳಲ್ಲಿ ಈ ಭಾಗದಲಲಿ ಅಭಿವೃದ್ಧಿ ಮರೀಚಿಕೆಯಾಗಿ ಮೂಲಭೂತ ಸೌಕರ್ಯಗಳ ಕೊರೆತೆ ಎದುರಾಗಿದೆ. ಕನಿಷ್ಠ ಮೂಲಭೂತ ಸೌಕರ್ಯಗಳಾದ ಉತ್ತಮ ರಸ್ತೆ, ಸರಕಾರಿ ಸಾರಿಗೆ ವ್ಯವಸ್ಥೆ, ಶೈಕ್ಷಣಿಕ ಕೇಂದ್ರಗಳ ವ್ಯವಸ್ಥೆ, ಶುದ್ಧ

ಕುಡಿಯುವ ನೀರು, ಮನೆ, ವಿದ್ಯುತ್, ಇತ್ಯಾದಿಗಳನ್ನು ನೀಡುವಲ್ಲಿ ನಮ್ಮನ್ನಾಳಿದ ಯಾವ ರಾಜ ಮಹಾರಾಜರು ಮತ್ತು ಪ್ರಜಪ್ರಭುತ್ವ ಸರಕಾರಗಳು ಮಾಡಲಿಲ್ಲ ಎಂಬುದೆ ಸೋಜಿಗದ ವಿಷಯ.

**ನೈಸರ್ಗಿಕ ಸಂಪನ್ಮೂಲಗಳು**

ಹೈದ್ರಾಬಾದ–ಕರ್ನಾಟಕದಲ್ಲಿ ನೈಸರ್ಗಿಕ ಸಪನ್ಮೂಲಗಳು ಸಾಕಷ್ಟಿದೆ.

- ದೇಶದಲ್ಲಿರುವ ಏಕೈಕ ಚಿನ್ ಉತ್ಪಾದಿಸುವ ಗಣಿ ಹಟ್ಟಿ ಚಿನ್ನದ ಗಣಿ ಇರುವುದು ಹೈದ್ರಾಬಾದ–ಕರ್ನಾಟಕದ ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನ ಹಟ್ಟಿಯಲ್ಲಿ. ಈ ಗಣಿಯಿಂದ ವರ್ಷಕ್ಕೆ 4000 ಕಿ.ಗ್ರಾಂ. ಬಂಗಾರ ಉತ್ತಪಾದಿಸಲಾಗುತ್ತದೆ.
- ಗುಲ್ಬರ್ಗಾ ಜಿಲ್ಲೆಯಲ್ಲಿ ಸುಣ್ಣದ ಕಲ್ಲಿನ ಅದಿರು ಇರುವುದರಿಂದ, ಈ ಜಿಲ್ಲೆಯಲ್ಲಿ ಹತ್ತಾರು ಸಿಮೆಂಟು ಕಾರ್ಖಾನೆಗಳನ್ನು ಸ್ಥಾಪಿಸಲಾಗಿದೆ. ಇಲ್ಲಿ ಉತ್ಪಾದಿಸಲಾದ ಸಿಮೆಂಟು ರಾಜ್ಯದ, ದೇಶದ ಹಲವಾರು ನಗರಗಳಿಗೆ ಸರಬರಾಜಾಗುತ್ತದೆ.
- ರಾಯಚೂರು ಜಿಲ್ಲೆ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಗ್ರಾನೈಟ್ ಕಲ್ಲಿನ ಗಣಿಗಳಿವೆ, ಇದನ್ನು ದೇಶ ವಿದೇಶಗಳಿಗೆ ಕೂಡ ರಪ್ತು ಮಾಡಲಾಗುತ್ತದೆ.
- ತುಂಗೆ–ಭದ್ರೆ, ಕೃಷ್ಣೆ 9ದೇಶದಲ್ಲಿಯೇ ನಾಲ್ಕನೇಯ ಅತಿದೊಡ್ಡನದಿ ಎಂದು ಹೆಸರು ಪಡೆದಿದೆ.) ಭೀಮಾ, ಕಾರಂಜಾ, ಉಮರ್ಜಾ, ಕಾಗೀನಾ, ಬಾರಿ, ಬೆಣ್ಣೆತೋರಾ, ಮುಲ್ಲಾಮಾರಿ, ಮಾಂಜ್ರಾ, ಇತ್ಯಾದಿ ಹೀಗೆ ಸಾಕಷ್ಟು ಜಲರಾಶಿಯನ್ನು ಹೊಂದಿದೆ.
- ಇತ್ತಿಚೆಗೆ ಯಾದಗೀರ ಜಿಲ್ಲೆಯ ಶಹಾಪುರ ತಾಲ್ಲೂಕಿನ ಗೋಗಿ ಗ್ರಾಮದಲ್ಲಿ ಯುರೇನಿಯಮ್ ನಿಕ್ಷೇಪ ಪತ್ತೆಯಾಗಿದ್ದು, ಈಗಾಗಲೇ ಗಣಿಗಾರಿಕೆ ಕೆಲಸ ಪ್ರಾರಂಭವಾಗಿದೆ. ಇದು ವಿರಳವಾಗಿ ಸಿಗುವ ಆದಿರು.
- ಈ ಭಾಗದ ಭೂಮಿ ಫಲವತ್ತತೆಗೆ ಹೆಸರಾಗಿದೆ. ವಿಶೇಷವಾದ ಬೆಳೆಗಳನ್ನು ಬೆಳೆಯುತ್ತಾರೆ. ಬೀದರ ಜಿಲ್ಲೆಯಲ್ಲಿ ಉದ್ದಿನ ಬೆಳೆ ಹೆಚ್ಚಾಗಿ ಬೆಳೆಯಲಾಗುತ್ತದೆ.
- ರಾಜ್ಯದಲ್ಲೇ ಅತೀ ಹೆಚ್ಚು ತೊಗರಿ ಬೆಳೆಯನ್ನು ಬೆಳೆಯುವುದು ಗುಲ್ಬರ್ಗಾ ಜಿಲೆಯಲ್ಲಿ.
- ಭತ್ತದ ಕಣಜವೆಂದೆ ಪ್ರಸಿದ್ಧಿ ಪಡೆದ ಕೊಪ್ಪಳ ಜಿಲ್ಲೆಯ ಗಂಗಾವತಿ, ರಾಯಚೂರು ಜಿಲ್ಲೆಯ ಸಿಂಧನೂರು, ಮಾನವಿ, ರಾಯಚೂರು ತಾಲ್ಲೂಕುಗಳಲ್ಲಿ ಅತ್ಯತ್ತಮವಾದ ಭತ್ತವನ್ನು ಬೆಳೆಯಲಾಗುತ್ತದೆ. ಇಲ್ಲಿಯ ಸೋನಾಮಸೂರಿ ಅಕ್ಕಿಯನ್ನು ದೇಶ ವಿದೇಶಗಳಿಗೆ ರಫ್ತು ಮಾಡಲಾಗುತ್ತದೆ.

* ಕೊಪ್ಪಳ ಜಿಲ್ಲೆಯ ಕುಷ್ಟಗಿ, ರಾಯಚೂರು ಜಿಲ್ಲೆಯ ಸಿಂಧನೂರು, ಲಿಂಗಸೂಗೂರು ತಾಲ್ಲೂಕಿನಲ್ಲಿ ಬೆಳೆಯುವ ದಾಳಿಂಬೆ ಹಣ್ಣು ದೇಶ, ವಿದೇಶಗಳಿಗೆ ರಫ್ತು ಮಾಡಲಾಗುತ್ತದೆ.

**ಶೈಕ್ಷಣಿಕ ಸ್ಥಿತಿಗತಿಗಳು**

ಸ್ವಾತಂತ್ರ್ಯಪೂರ್ವದಲ್ಲಿ ಇಡೀ ಹೈದ್ರಾಬಾದ-ಕರ್ನಾಟಕದಲ್ಲಿ ಕೇವಲ ಮೂರೇ ಮೂರು ಹೈಸ್ಕೂಲುಗಳಿದ್ದವು ಮತ್ತು ಶಿಕ್ಷಣವು ಕಡ್ಡಯವಾಗಿ ಉರ್ದು ಮಾಧ್ಯಮದಲ್ಲೇ ಪಡೆಯಬೇಕಾಗಿತ್ತು.. ತೀರ ಇತ್ತಿಚಿನವರೆಗೆ ಅಂದರೆ 1990 ರ ವರೆಗೆ ತಾಲ್ಲೂಕಿಗೆ ಎರಡು-ಮೂರು ಪ್ರೌಢಶಾಲೆಗಳಿದ್ದವು ಮತ್ತು ಇಂದಿನವರೆಗೂ ಕೂಡ ಎಷ್ಟೋ ಶಾಲೆಗಳು ಏಕೋಪಾದ್ದಯ ಶಾಲೆಗಳಾಗಿವೆ. ಇಂದಿಗೂ ಈ ಭಾಗದ ಬಹಳಷ್ಟು ಶಾಲಾ/ಕಾಲೇಜುಗಳು, ಶಿಕ್ಷಕರ/ಉಪನ್ಯಾಸಕರ ಕೊರತೆಯನ್ನು ಎದುರಿಸುತ್ತಿವೆ. ಉದಾಹರಣೆ 2009-10ನೇ ಸಾಲಿನಲ್ಲಿ 4000 ಪ್ರಾಥಮಿಕ ಶಾಲಾ ಶಿಕ್ಷಕರ ಹುದ್ದೆಗಳಿಗೆ ನೇಮಕಾತಿ ನಡೆದಿದ್ದು ಅವುಗಳಲ್ಲಿ 2500 ಹುದ್ದೆಗಳು ಹೈದ್ರಾಬಾದ-ಕರ್ನಾಟಕ ವಿಭಾಗದಲ್ಲಿ ಖಾಲಿ ಇದ್ದವು ಎಂಬುದು ಶಿಕ್ಷಕರ ಕೊರತೆ ಎಷ್ಟಿತ್ತು ಎಂದು ತೋರಿಸುತ್ತೆ. ಯಾಕೆಂದರೆ, 2007-08ನೇ ಸಾಲಿನಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿ ನಡೆದಿದ್ದು, 2008ರಿಂದ 2010ರ ವರೆಗೆ ನಿವೃತ್ತಿ ವಯಸ್ಸು 60ಕ್ಕೆ ಏರಿಸಿರುವದರಿಂದ ಆ ಸಂದರ್ಭದಲ್ಲಿ ಯಾರೊಬ್ಬರು ನಿವೃತ್ತಿಯಾಗಿರಲಿಲ್ಲ ಹಾಗೂ ಹೊಸ ಸರಕಾರ ಬಂದ ಮೇಲೆ ಯಾವೊಂದು ಹೊಸ ಶಾಲೆಗಳನ್ನು ಪ್ರಾರಂಭಿಸಿರಲಿಲ್ಲ. ಹಾಗಾಗಿ 2500 ಹುದ್ದೆಗಳು ಹೇಗೆ ಖಾಲಿ ಇರಲು ಸಾಧ್ಯ ಇದೇ ಪರಸ್ಥಿತಿ ಈ ಭಾಗದ ಉನ್ನತ ಶಿಕ್ಷಣದ್ದಾಗಿದೆ. ಈ ಭಾಗದ ಉನ್ನತ ಶಿಕ್ಷಣಕ್ಕೆ ಆಶಾಕಿರಣವಾಗಿರುವುದು ಗುಲ್ಬರ್ಗಾ ವಿಶ್ವವಿದ್ಯಾಲಯ ಆದರೆ, ಇಲ್ಲಿ ಸಮಸ್ಯೆಗಳೇ ಮೂಲ. ಕಳೆದ 15 ವರ್ಷಗಳಿಂದ ಈ ವಿಶ್ವವಿದ್ಯಾಲಯದಲ್ಲಿ ನೇಮಕಾತಿಗಳೇ ನಡೆದಿಲ್ಲದಿರುವುದರಿಂದ, ಇಲ್ಲ 26 ವಿಭಾಗಗಳಲ್ಲಿ ಶೇ 75ರಷ್ಟು ಹುದ್ದೆಗಳು ಖಾಲಿ ಇವೆ. ಉದಾಹರಣೆಗೆ ಬೋಧಕರು ಮೊದಲಿನಿಂದಿದ್ದರು. ಆದರೆ ಅವರೆಲ್ಲರೂ ನಿವೃತ್ತಿಯಾಗಿ ಕಳೆದ ಹತ್ತು ವರ್ಷಗಳಿಂದ ಕೇವಲ 06 ಜನ ಬೋಧಕರಿಂದ ಈ ವಿಭಾಗ ನಡೆಯುತ್ತಿದೆ. ಇಂತಹ ವಿಭಾಗದಲ್ಲಿ ಓದಿರುವ ವಿದ್ಯಾರ್ಥಿಗಳು ಎಲ್ಲ ಸೌಲಭ್ಯ ಪಡೆದಿರುವ ವಿಶ್ವವಿದ್ಯಾಲಯದಿಂದ ಪಾಸಾದ ವಿದ್ಯಾರ್ಥಿಗಳ ಜೊತೆ ಸ್ಪರ್ಧಾತ್ಮಕ ಪರೀಕ್ಷೆ ಬರೆದು ನೌಕರಿ ಪಡೆಯುವುದು ಕನಸಿನ ಮಾತಾಗಿದೆ. ಇದಕ್ಕೆ ಉದಾಹರಣೆ, 2009ರಲ್ಲಿ ರಾಜ್ಯ ಸರಕಾರ, ಸರಕಾರಿ ಪದವಿ ಪೂರ್ವ ಕಾಲೇಜು ಉಪನ್ಯಾಕರ ಹುದ್ದೆಗಳಿಗೆ ನೇಮಕಾತಿ ಸ್ಪರ್ಧಾತ್ಮಕ ಪರೀಕ್ಷೆ ಮುಖಾಂತರ ನೇರ ನೇಮಕಾತಿ ಮಾಡಲಾಗಿತ್ತು. ಅದರಲ್ಲಿ 90 ರಸಾಯನಶಾಸ್ತ್ರ ಉಪನ್ಯಾಕರ ಹುದ್ದೆಗಿಳಿದ್ದು, ಅವುಗಳಲ್ಲಿ ಈ ವಿಶ್ವವಿದ್ಯಾಲಯದಿಂದ ಆಯ್ಕೆಯಾಗಿದ್ದು ಕೇವಲ 03 ಆದರೆ, ಕರ್ನಾಟಕ ಲೋಕಸೇವಾ ಆಯೋಗ, ವೃಂದ ಮತ್ತು ನೇಮಕಾತಿ ಇಲಾಖೆ ಹಾಗೂ ಪದವಿ ಪೂರ್ವ ಶಿಕ್ಷಣ ಇಲಾಖೆಯವರ ಕುತಂತ್ರದಿಂದ ಆ ಹುದ್ದೆಗೆ ಗುಲ್ಬರ್ಗಾ ವಿಶ್ವವಿದ್ಯಾಲಯ ಮತ್ತು ಕರ್ನಾಟಕ ವಿಶ್ವವಿದ್ಯಾಲಯ ನೀಡುವ

ರಸಾಯನಶಾಸ್ತ್ರ ಎಂ.ಎಸ್ಸಿ. ಪ್ರಮಾಣ ಪತ್ರಗಳು ವಿದ್ಯಾರ್ಹತೆಗೆ ಅರ್ಹತೆ ಅಲ್ಲ ಎಂದು ತಿರಸ್ಕರಿಸಲಾಯಿತು. ಆದ್ದರಿಂದ ಅವರ್‍ಯಾರಿಗೂ ಆ ಹುದ್ದೆ ದಕ್ಕಲಿಲ್ಲ. ಆ ನೇಮಕಾತಿಯಲ್ಲಿ ವಂಚಿತವಾದವರಲ್ಲಿ ನಾನೂ ಕೂಡ ಒಬ್ಬ.2006ರಲ್ಲಿ ರಾಜ್ಯದಲ್ಲಿ 09 ಹೊಸ ಸರಕಾರಿ ಇಂಜಿನಿಯರಿಂಗ್ ಕಾಲೇಜುಗಳನ್ನು ಪ್ರಾರಂಭಿಸಲಾಯಿತು, ಹಾಸನ, ಮಂಡ್ಯದಲ್ಲಿ ಪ್ರಾರಂಭವಾದ ಇಂಜಿನಿಯರಿಂಗ್ ಕಾಲೇಜುಗಳು ಉತ್ತಮ ಹೊಸ ಕಟ್ಟದದೊಂದಿಗೆ ಎಲ್ಲ ಮೂಲಭೂತ ಸೌಕರ್ಯಗಳನ್ನು ಪಡೆದು ಕಾರ್ಯನಿರ್ವಹಿಸುತ್ತದೆ. ಆದರೆ, ರಾಯಚೂರನಲ್ಲಿ ಮಾತ್ರ ಆ ಸರಕಾರಿ ಇಂಜಿನಿಯರಿಂಗ್ ಕಾಲೇಜು ಪ್ರಾರಂಭವಾಗಿ ನಾಲ್ಕು ವರ್ಷಗಳು ಗತಿಸಿದರೂ ಇವತ್ತಿಗೂ ಕೂಡ ಒಂದು ಕಟ್ಟಡ ಇಲ್ಲ, ಯಾವುದೋ ಒಂದು ಹಳೆಯದಾದ ಕಾಲೇಜಿನ ಕಟ್ಟಡದಲ್ಲಿ, ಯಾವ ಮೂಲಭೂತ ಸೌಕರ್ಯವಿಲ್ಲದೇ ನಡೆಸಲಾಗುತ್ತಿದೆ. ಈ ರೀತಿ ಶೈಕ್ಷಣಿಕ ಕೇಂದ್ರಗಳ ಹಾಗೂ ಮೂಲಭೂತ ಸೌಲಭ್ಯಗಳ ಕೊರತೆಯಿಂದ ಇಲ್ಲಿ ಅನಕ್ಷರತೆ ಮಡುಗಟ್ಟಿದೆ.

**ಮೂಲಭೂತ ಸೌಕರ್ಯಗಳ ಸ್ಥಿತಿಗತಿಗಳು**

ಮೂಲಭೂತ ಸೌಕರ್ಯಗಳ ಸಮಸ್ಯೆ ಹೇಳುವುದೇ ಒಂದು ಸಮಸ್ಯೆಯಾಗಿದೆ.

- ಸ್ವಾತಂತ್ರ್ಯ ಬಂದು 65 ವರ್ಷಗಳಾದರೂ ಈ ಭಾಗದ ಹಲವಾರು ಗ್ರಾಮಗಳಿಗೆ ಒಂದು ವಾಹನ ಹೋಗುವ ರಸ್ತೆಯಿಲ್ಲ, ಇಂದಿಗೂ ಆ ಗ್ರಾಮಗಳು ಸಾರಿಗೆ ಬಸ್ಸುಗಳನ್ನೇ ನೋಡಿಲ್ಲ.
- ಇಲ್ಲಿ ಸರಕಾರಿ ಆಸ್ಪತ್ರೆಗಳಿದ್ದು ಶೇ 50 ರಷ್ಟು ವೈದ್ಯರಿಲ್ಲ. ಶೇ 49.96 ರಷ್ಟು ಹೆರಿಗೆಗಳು ಅಸುರಕ್ಷಿತವೆಂದು ವರದಿಯಾಗಿದೆ.
- ರಾಜ್ಯ ಸರಕಾರದ ಯೋಜನಾ ಇಲಾಖೆಯ ವರದಿಯಂತೆ ಉಡುಪಿ ಜಿಲ್ಲೆಯಲ್ಲಿ ಇರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳ ಸಂಖ್ಯೆ ಇಡೀ ಹೈದ್ರಾಬಾದ – ಕರ್ನಾಟಕದಲ್ಲಿ ಇರುವುದಕ್ಕಿಂತ ಹೆಚ್ಚು
- ಇಂದಿಗೂ ಈ ಭಾಗದಲ್ಲಿ ಸರಕಾರಕ್ಕೆ ಶುದ್ಧವಾದ ಕುಡಿಯುವ ನೀರು ಸರಬರಾಜು ಮಾಡಲು ಸಾಧ್ಯವಾಗಿಲ್ಲ.
- ಹೈದ್ರಾಬಾದ–ಕರ್ನಾಟಕದಲ್ಲಿ ಇರುವುದು ಎರಡೇ ಕಾಲ ಒಂದು ಬೇಸಿಗೆ ಇನ್ನೊಂದು ಅತೀ ಬೇಸಿಗೆ ಕಾಲ. ಹೀಗಿರುವಾಗ ರಾಜ್ಯದಲ್ಲಿ 4800ಮೇ.ವ್ಯಾ. ವಿದ್ಯುತ್ ಉತ್ಪಾದಿಸಲಾಗುತ್ತದೆ. ಅದರಲ್ಲಿ ಹೈದ್ರಾಬಾದ – ಕರ್ನಾಟಕದಲ್ಲೇ 2500 ಮೇ.ವ್ಯಾ. ವಿದ್ಯುತ್ ಉತ್ಪಾದಿಸಲಾಗುತ್ತದೆ. ಆದರೆ ಈ ಭಾಗದಲ್ಲಿ ಯಾವಾಗಲೂ ವಿದ್ಯುತ್ ಇರುವುದಿಲ್ಲ ಯಾಕೆ ಎನ್ನುವುದು ತಿಳಿಯದ ವಿಷಯವಾಗಿದೆ.
- ಈಶಾನ್ಯ ಕರ್ನಾಟಕ ಸಾರಿಗೆ ಸಂಸ್ಥೆ ಈ ಭಾಗದಲ್ಲಿ ಇದ್ದು, ಈ ಸಂಸ್ಥೆಯಲ್ಲಿರುವ ವಾಹನಗಳು ಬೆಂಗಳೂರಿನಲ್ಲಿ ಬಳಸಿ ಇದು ರಸ್ತೆಯ ಮೇಲೆ ನಡೆಸಲು ಯೋಗ್ಯವಲ್ಲ ಎಂದು ತಿರಸ್ಕರಿಸಿದ

ಬಸ್ಸುಗಳಿಂದ ತುಂಬಿದ್ದು, ಆ ಬಸ್ಸುಗಳು ಯಾವಾಗ ನಿಗಧಿತ ಸ್ಥಳಗಳಿಗೆ ಮುಟ್ಟುತ್ತವೆ ಎನ್ನುವುದೇ ಗೊತ್ತಾಗದ ಸ್ಥಿತಿಗೆ ಪ್ರಯಾಣಿಕರು ಬಂದಿರುತ್ತಾರೆ ಹಾಗೂ ಅವುಗಳ ಪರಿಸ್ಥಿತಿ ಹೀಗಿರುತ್ತೆ ಬಹಳಷ್ಟು ಸಲ ಹೆರಿಗೆಗಳಿಗೆ ಬಸ್ಸುಗಳಲ್ಲಾಗುತ್ತವೆ.

- ಇಲ್ಲಿನ ಶಾಲಾ ಕಾಲೇಜುಗಳಲ್ಲಿ ಕನಿಷ್ಠ ಮೂಲಭೂತ ಸೌಲಭ್ಯಗಳಾದ ಶೌಚಾಲಯ, ಕುಡಿಯುವ ನೀರು, ಬೆಳಕು, ಒಂದು ಗ್ರಂಥಾಲಯ ಇಲ್ಲದಿರುವುದು.
- ಶಿಕ್ಷಣ ಸಂಸ್ಥೆಗಳ ಸಂಖ್ಯೆ ಬೇರೆ ವಿಭಾಗಗಳಿಗೆ ಹೋಲಿಸಿದರೆ ಇಂದಿಗೂ ಅತೀ ಕಡಿಮೆ ಇರುವುದು.

**ಡಾ.ಡಿ.ಎಂ. ನಂಜುಂಡಪ್ಪ ಉನ್ನತಾಧಿಕಾರ ಸಮಿತಿಯ ವರದಿ**

2000ರಲ್ಲಿ ಮಾನ್ಯ ಶ್ರೀ ಎಸ್.ಎಮ್.ಕೃಷ್ಣ ನೇತೃತ್ವದ ಸರಕಾವು ಇಡೀ ರಾಜ್ಯದ ಹಿಂದುಳಿವಿಕೆಯನ್ನು ಅಧ್ಯಯನ ಮಾಡಲು ನೇಮಿಸಿದ ಡಾ.ಡಿ.ಎಂ. ನಂಜುಂಡಪ್ಪ ಉನ್ನತಾಧಿಕಾರ ಸಮಿತಿಯ ರಾಜ್ಯದ ಉದ್ದಗಲಕ್ಕೂ ಪ್ರವಾಸ ಕೈಗೊಂಡು ಪ್ರಾದೇಶಿಕ ಅಸಮತೋಲನ ಕುರಿತು ಅಳವಾಗಿ ಅಧ್ಯಯನ ಮಾಡಿ 2002 ರಲ್ಲಿ ಒಂದು ವರದಿಯನನು ಸಲ್ಲಿಸಿತು ಡಾ.ಡಿ.ಎಂ. ನಂಜುಂಡಪ್ಪವನರು ಸಲ್ಲಿಸಿರುವ ವರದಿಯಲ್ಲಿ ಹೈದ್ರಾಬಾದ –ಕರ್ನಾಟಕ ಪ್ರದೇಶವು ಅಭೀವೃದ್ದಿಯಲ್ಲಿ ಮೈಸೂರು ಕರ್ನಾಟಕ ಮತ್ತು ಮುಂಬಯಿ ಕರ್ನಾಟಕಕ್ಕೆ ಹೋಲಿಸಿದಾಗ ನೂರು ವರ್ಷದಷ್ಟು ಹಿಂದುಳಿದಿದೆ ಎಂದು ಸ್ಪಷ್ಟವಾಗಿ ಹೇಳಲಾಗಿದೆ.

ಡಾ.ಡಿ.ಎಂ. ನಂಜುಂಡಪ್ಪ ಉನ್ನತಾಧಿಕಾರ ಸಮಿತಿ ಸಲ್ಲಿಸಿರುವ ವರದಿಯ ರಾಜಕೀಯ ಪಕ್ಷಗಳಿಗೆ ಚುನಾವಣೆ ಸಮಯದಲ್ಲಿ ಹೈದ್ರಾಬಾ–ಕರ್ನಾಟಕ ಪ್ರದೇಶದ ಜನರಿಗೆ ಚಂಚಿಸುವ ಒಂದು ಚುನಾವಣಾ ವಿಷಯವಾಯಿತೇ ವಿನಃ ಆ ವರದಿಯನ್ನು ಸಂಪೂರ್ಣವಾಗಿ ಜಾರಿ ತರುವ ಮನಸ್ಸು ಸುಮಾರು 2002 ರಿಂದ ಇಲ್ಲಿಯವರೆಗೆ ಬಂದ ಯಾವ ಸರಕಾರಗಳು ಮಾಡಲಿಲ್ಲ.

ಡಾ.ಡಿ.ಎಂ. ನಂಜುಂಡಪ್ಪ ಉನ್ನತಾಧಿಕಾರ ಸಮಿತಿ ಸಲ್ಲಿಸಿರುವ ವರದಿಯಲ್ಲಿ ರಾಜ್ಯದಲ್ಲಿರುವ ಎಲ್ಲ 175 ತಾಲ್ಲೂಕುಗಳನ್ನು ಅಭಿವೃದ್ಧಿ ದೃಷಿಯಿಂದ ನಾಲ್ಕೂ ವಿಧಗಳಾಗಿ ವಿಂಗಡಿಸಲಾಗಿದೆ.

- ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ತಾಲ್ಲೂಕುಗಳು,
- ಹಿಂದುಳಿದ ತಾಲ್ಲೂಕುಗಳು,
- ಅತೀ ಹಿಂದುಳಿದ ತಾಲ್ಲೂಗಳ ಮತ್ತು
- ಅತ್ಯಂತ ಹಿಂದುಳಿದ ತಾಲ್ಲೂಕುಗಳು

ಎಂದು ಗುರುತಿಸಲಾಗಿದೆ. ರಾಜ್ಯದಲ್ಲಿ 61 ತಾಲ್ಲೂಕುಗಳು ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ತಾಲ್ಲೂಕುಗಳು ಮತ್ತು 114 ತಾಲ್ಲೂಕುಗಳು ಹಿಂದುಳಿದ ತಾಲ್ಲೂಕುಗಳು ಎಂದೂ ತಿಳಿಸಿತು. ಆ 114 ಹಿಂದುಳಿದ ತಾಲ್ಲೂಕುಗಳಲ್ಲಿ 55 ಹಿಂದುಳಿದ ತಾಲ್ಲೂಕುಗಳ, 40 ಅತೀ ಹಿಂದುಳಿದ ತಾಲ್ಲೂಕುಗಳು ಹಾಗೂ 36 ಅತ್ಯಂತ ಹಿಂದುಳಿದ ತಾಲ್ಲೂಕುಗಳು ಎಂದು ವಿಶ್ಲೇಷಣೆ ನೀಡಲಾಗಿದೆ. ಅತ್ಯಂತ ಹಿಂದುಳಿದ ತಾಲ್ಲೂಕುಗಳು ಎಂದರೆ ಆ ತಾಲ್ಲೂಕುಗಳಲ್ಲಿ ಕನಿಷ್ಟ ಮೂಲಭೂತ ಸೌಲಭ್ಯ ದೊರೆಯಲಾರದವು ಎಂದರ್ಥ.

ಹೈದ್ರಾಬಾದ-ಕರ್ನಾಟಕ ಪ್ರದೇಶದ ಆರು ಜಿಲ್ಲೆಗಳ 31 ತಾಲ್ಲೂಕುಗಳಲ್ಲಿ ಕೇವಲ ಮೂರು ತಾಲ್ಲೂಕುಗಳು ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ತಾಲ್ಲೂಕುಗಳು ಮತ್ತು ಉಳಿದ 28 ತಾಲ್ಲೂಕುಗಳು ಹಿಂದುಳಿದವು ಎಂದಿದೆ. ಹೈದ್ರಾವಾದ-ಕರ್ನಾಟಕದ ಶೇಕಡ 91.17 ತಾಲ್ಲೂಕುಗಳು ಹಿಂದುಳಿದಿವೆ ಎಂದು ಸ್ಪಷ್ಟವಾಗುತ್ತದೆ. ರಾಜ್ಯದ 39 ಅತ್ಯಂತ ಹಿಂದುಳಿದ ತಾಲ್ಲೂಕುಗಳ ಪೈಕಿ 21 ತಾಲ್ಲೂಕುಗಳೂ ಹೈದ್ರಾಬಾದ-ಕರ್ನಾಟಕ ಪ್ರದೇಶದಲ್ಲಿವೆ ಎನ್ನುವುದೇ ಅತೀ ಸೋಜಿಗದ ವಿಷಯವಾಗಿದೆ. ಡಾ.ಡಿ.ಎಂ.ನಂಜುಂಡಪ್ಪನವರ ವದಿಯು ರಾಜ್ಯದಲ್ಲಿ ವಿಭಾಗವಾರು ಒಟ್ಟಾರೆಯಾಗಿ ಅಭಿವೃದ್ಧಿ ಹೊಂದಿದ (ಯಾವುದೇ ಹಿಂದುಳಿದ ತಾಲ್ಲೂಕುಗಳು ಇಲ್ಲದ) ಮೂರು ಜಿಲ್ಲೆಗಳನ್ನು ಗುರುತಿಸಿದ್ದು, ಆ ಮೂರು ಜಿಲ್ಲೆಗಳನ್ನು ಗುರುತಿಸಿದ್ದು, ಆ ಮೂರು ಜಿಲ್ಲೆಗಳು (ಅವಿಭಜಿತ ಗುಲ್ಬರ್ಗಾ, ರಾಯಚೂರು ಮತ್ತು ಕೊಪ್ಪಳ) ಹೈದ್ರಾಬಾದ-ಕರ್ನಾಟಕದಲ್ಲಿವೆ ಎಂಬುದು ಈ ಭಾಗದ ಜನರಿಗೆ ಚಿಂತೆಗೀಡುಮಾಡಿದೆ. ಡಾ.ಡಿ.ಎಂ.ನಂಜುಂಡಪ್ಪನವರ ವರದಿಯ ಪ್ರಕಾರ ರಾಜ್ಯದಲ್ಲಿರುವ ಇಲ್ಲ 114 ಹಿಂದುಳಿದ ತಾಲ್ಲೂಕುಗಳನ್ನು ವಿಂಗಡಿಸಿದ ಪರಿಯನ್ನು ಈ ಕೆಳಗಿನ ಕೋಷ್ಟಕದಲ್ಲಿ ನೋಡಬಹುದು.

ಈ ಎಲ್ಲ ಕಾರಣಗಳಿಂದಾಗಿ ಡಾ.ಡಿ.ಎಂ.ನಂಜುಂಡಪ್ಪ ಉನ್ನತಾಧಿಕಾರ ಸಮಿತಿಯು ಹಿಂದುಳಿದದವುಗಳೆಂದು ಗುರುತಿಸಲಾದ 114 ತಾಲ್ಲೂಕುಗಳಲ್ಲಿರುವ ಅಸಮತೋಲನಗಳಲ್ಲಿನ ಹಿಂಬಾಕಿಗಳನ್ನು ಸರಿದೂಗಿಸುವ ಸಲುವಾಗಿ ಒಟ್ಟು 31,000 ಕೋಟಿ ರೂ.ಗಳ ಅಭಿವೃದ್ಧಿ ಯೋಜನೆಗೆ 2003 ರಿಂದ 2010ರ ವರೆಗೆ ಎಂಟು ವರ್ಷಗಳ ಕಾಲಮೀತಿಯೊಳಗೆ ಪೂರ್ಣಗೊಳಿಸಲು ಸೂಚಿಸಿತು. ಇದರಲ್ಲಿ 15,000 ಕೋಟಿ ರೂ. ಸರಕಾರದ ವಾರ್ಷಿಕ ಬಜೆಟ್ ಮುಖಾಂತರ ಹಾಗೂ ಇನ್ನುಳಿದ 1.6000 ಕೋಟಿ ರೂ.ಗಳ ಒಂದು ನಿವ್ವಳ ಹೆಚ್ಚವರಿ ಬಜೆಟ್ ಒದಗಿಸುವಂತೆ ಶಿಫಾರಸ್ಸು ಮಾಡಿತು.

ಅಂದಿನ ಶ್ರೀ ಎಸ್.ಎಮ್.ಕೃಷ್ಣ ಸರಕರ ಡಾ.ಡಿ.ಎಂ. ನಂಜುಂಡಪ್ಪ ಉನ್ನತಾಧಿಕಾರ ಸಮಿತಿಯ ವರದಿ ಜಾರಿ ಮಾಡಮಾಡುವಲ್ಲಿ ವಿಫಲವಾಯಿತು. ಮುಂದೆ ಶ್ರೀ ಎನ್.ಧರ್ಮಸಿಂಗ್ ಸರಕಾರ ಕೂಡ ಎದನ್ನು ನಿರ್ಲಕ್ಷಿಸಿತು. 2007 ರಲ್ಲಿ ಶ್ರೀ.ಎಚ್.ಡಿ.ಕುಮಾರಸ್ವಾಮಿಯವರ ಸರಕಾರ

ಡಾ.ಡಿ.ಎಂ.ನಂಜುಂಡಪ್ಪ ಉನ್ನತಧಿಕಾರ ಸಮಿತಿಯ ವರದಿಯನ್ನು ಜಾರಿ ಮಾಡಿತು. ಮುಂದೆ ಈ ವರದಿಯನ್ನು ಜಾರಿ ಮಾಡಲು ಶ್ರೀ ಬಿ.ಎಸ್. ಯಡಿಯೂರಪ್ಪ ಸರಕಾರ ಅದಕ್ಕೆ ಒಂದು ಡಾ.ಡಿ.ಎಂ. ನಂಜುಂಡಪ್ಪ ಉನ್ನತಾಧಿಕಾರ ಸಮಿತಿಯ ವರದಿ ಅನುಷ್ಠಾನ ಸಮಿತಿ ರಚಿಸಿದರು. ಆ ಸಮಿತಿಯು 4 ವರ್ಷಗಳಲ್ಲಿ 9,161 ಕೋಟಿ ರೂ. ಲಭ್ಯವಿದ್ದ ಅನುದಾನದಲ್ಲಿ ಕೇವಲ 3,978 ಕೋ.ರೂ ಗಳನ್ನು ಬಳಸಿತು. ಅನುದಾನವನ್ನು ಪರಣಾಮಕಾರಿಯಾಗಿ ಬಳಸದೇ ಇರುವುದರಿಂದ ಯಾವುದೇ ಅಭಿವೃದ್ಧಿ ಕಾರ್ಯಗಳು ಕೈಗೊಳ್ಳಲು ಸಾಧ್ಯವಾಗಲಿಲ್ಲ.

ಸಂವಿಧಾನ 371ನೇ ಕಲಂ: ಸಂವಿಧಾನ ರಚನಾ ಸಂದರ್ಭದಲ್ಲಿ "ಯಾವುದೇ ರಾಜ್ಯದಲ್ಲಿ ಒಂದು ಪ್ರದೇಶ ಸಮ್ಮೃದ್ಧವಾಗಿದ್ದು, ಮತ್ತೊಂದು ತೀರ ಹಿಂದುಳಿದು ಅಲ್ಲಿನ ಜನ ಹತ್ತು ಹಲವು ಸೌಲಭ್ಯಗಳಿಂದ ವಂಚಿತವಾಗಬಾರದು ಎಂಬ ಉದ್ದೇಶದಿಂದ ಅತೀಯಾದ ಅಸಮಾನತೆ ನಿವಾರಣೆಗೆ ವಿಶೇಷ ಸವಲತ್ತು ನೀಡಲು ಸಂವಿಧಾನದ 371ನೇ ಕಲಂನ ಅಡಿಯಲ್ಲಿ ಅವಕಾಶ ನೀಡಲಾಗಿದೆ.

ಈ ದೇಶದ ಯಾವುದೇ ಒಂದು ಪ್ರದೇಶವನ್ನು 371 ನೇ ಕಲಂನಡಿ ಸೇರಿಸಿದಾಗ ಆ ಪ್ರದೇಶದ ಅಭಿವೃದ್ಧಿಯ ದೃಷ್ಟಿಯಲ್ಲಿ ಯಾವುದೇ ವಿಶೇಷ ಕಾನೂನು, ಸವಲತ್ತು, ಅನುದಾನ ನೀಡಿದರೆ, ಅದನ್ನು ಈ ದೇಶದ ಯಾವುದೇ ನ್ಯಾಯಾಲಯದಲ್ಲಿ (ಸರ್ವೋಚ್ಚ ನ್ಯಾಯಾಲಯ ಹೊರತುಪಡಿಸಿ) ಪ್ರಶ್ನಿಸಲು ಬರುವದಿಲ್ಲ. ಭಾರತದಲ್ಲಿ ಈಗಾಗಲೇ 371ನೇ ಕಲಂನ್ನು ಗುಜರಾತ, ಮಹಾರಾಷ್ಟ್ರ 1973 ರಲ್ಲಿ ಇಡೀ ಆಂಧ್ರಪ್ರದೇಶ (ಮೊದಲು ತೆಲಂಗಾಣಕ್ಕೆ ಮಾತ್ರ ನೀಡಲಾಗಿತ್ತು.) ಗೋವಾ, ಅಸ್ಸಾಂ, ಮೀಜೊರಾಂ, ನಾಗಾಲ್ಯಾಂಡ, ಸಿಕ್ಕಂ, ಅರುಣಾಚಲ ಪ್ರದೇಶ ಇತ್ಯಾದಿ ರಾಜ್ಯಗಳಿಗೆ ಬೇರೆ ಬೇರೆ ಕಾರಣಗಳಿಗಾಗಿ ನೀಡಲಾಗಿದೆ. ಡಾ.ಡಿ.ಎಂ.ನಂಜುಂಡಪ್ಪ ಉನ್ನತಾಧಿಕಾರ ಸಮಿತಿಯು ತನ್ನ ವರದಿಯಲ್ಲಿ ಈ ಭಾಗದ ಅಭಿವೃದ್ಧಿಗಾಗಿ ಹಾಗೂ ಇಲ್ಲಿಯ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ತೆಲಂಗಾಣ ಮಾದರಿಯಲ್ಲಿ 371 ನೇ ಕಲಂ ತಿದ್ದುಪಡಿ ಮಾಡಬೇಕೆಂದು ಹೇಳಿದೆ.

**ರಾಜ್ಯದ ಮೂಲಭೂತ ಸೌಕರ್ಯಗಳ ಒಂದು ಚಿತ್ರಣ ಹಾಗೂ ಪ್ರಾದೇಶಿಕ ಅಸಮತೋಲನ**

**ಕೋಷ್ಟಕ–2.1**

**ಕರ್ನಾಟಕ ರಾಜ್ಯದಲ್ಲಿರುವ ಒಟ್ಟು ಕಾರ್ಖಾನೆಗಳಲ್ಲಿ ವಿಭಾಗವಾರು ಪಾಲು**

| ವಿಭಾಗಗಳು | ರಾಜ್ಯದ ಒಟ್ಟು ಕಾರ್ಖಾನೆಗಳಲ್ಲಿ ವಿಭಾಗವಾರು ಪಾಲು ಶೇ. |
|---|---|
| ಬೆಂಗಳೂರು | 49.3.% |
| ಮೈಸೂರು | 23.3% |
| ಬೆಳಗಾವಿ | 18.2% |
| ಗುಲ್ಬರ್ಗಾ | 9.2% |

**ಮೂಲ: ರಝಾಕ ಉಸ್ತಾದ –ಹೈದರಾಬಾದ ಕರ್ನಾಟಕ ಕಥೆ–ವ್ಯಥೆ.**

ಕೋಷ್ಟಕ-2.2

ಕರ್ನಾಟಕ ರಾಜ್ಯದಲ್ಲಿರುವ ಕೈಗಾರಿಕಾ ಕಾರ್ಮಿಕರಲ್ಲಿ ವಿಭಾಗವಾರು ಪಾಲು

| ವಿಭಾಗಗಳು | ರಾಜ್ಯದ ಕೈಗಾರಿಕಾ ಕಾರ್ಮಿಕರಲ್ಲಿ ವಿಭಾಗವಾರು ಪಾಲು ಶೇ. |
|---|---|
| ಬೆಂಗಳೂರು | 43.63% |
| ಮೈಸೂರು | 27.5% |
| ಬೆಳಗಾವಿ | 20.05% |
| ಗುಲ್ಬರ್ಗಾ | 8.0% |

ಮೂಲ: ರಝಾಕ ಉಸ್ತಾದ –ಹೈದರಾಬಾದ ಕರ್ನಾಟಕ ಕಥೆ–ವ್ಯಥೆ.

ಕೋಷ್ಟಕ-2.3

ಕರ್ನಾಟಕ ರಾಜ್ಯದಲ್ಲಿರುವ ಒಟ್ಟು ಕೃಷಿ ಕಾರ್ಮಿಕರ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಪಾಲು

| ವಿಭಾಗಗಳು | ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಒಟ್ಟು ಕೃಷಿ ಕಾರ್ಮಿಕರ ಪಾಲು |
|---|---|
| ಬೆಂಗಳೂರು | 4.64% |
| ಮೈಸೂರು | 2.98% |
| ಬೆಳಗಾವಿ | 7.42% |
| ಗುಲ್ಬರ್ಗಾ | 7.51% |

ಮೂಲ: ರಝಾಕ ಉಸ್ತಾದ –ಹೈದರಾಬಾದ ಕರ್ನಾಟಕ ಕಥೆ–ವ್ಯಥೆ.

ಕೋಷ್ಟಕ-2.4

ರಾಜ್ಯದಲ್ಲಿ ಪ್ರತಿ ಒಂದು ಲಕ್ಷ ಜನಸಂಖ್ಯೆಗಿರುವ ಪ್ರಾಥಮಿಕ ಶಾಲೆಗಳ ಸಂಖ್ಯೆ

| ವಿಭಾಗಗಳು | ಪ್ರಾಥಮಿಕ ಶಾಲೆಗಳ ಸಂಖ್ಯೆ ಪ್ರತಿ ಒಂದು ಲಕ್ಷ ಜನಸಂಖ್ಯೆಗೆ |
|---|---|
| ಬೆಂಗಳೂರು | 125.2 |
| ಮೈಸೂರು | 110.3 |
| ಬೆಳಗಾವಿ | 99.5 |
| ಗುಲ್ಬರ್ಗಾ | 79.25 |

ಮೂಲ: ರಝಾಕ ಉಸ್ತಾದ –ಹೈದರಾಬಾದ ಕರ್ನಾಟಕ ಕಥೆ–ವ್ಯಥೆ.

**ಕೋಷ್ಟಕ-2.5**

**ಕರ್ನಾಟಕದಲ್ಲಿ ಶಾಲೆಗೆ ಹೋಗದ ಮಕ್ಕಳು (6-14 ವರ್ಷದೊಳಗಿನ ಶೇಕಡವಾರು)**

| ವಿಭಾಗಗಳು | ಶಾಲೆಗೆ ಹೋಗದ ಮಕ್ಕಳು (6-14 ವರ್ಷದೊಳಗಿನ) |
|---|---|
| ಬೆಂಗಳೂರು | 5.585% |
| ಮೈಸೂರು | 5.45% |
| ಬೆಳಗಾವಿ | 10.56% |
| ಗುಲ್ಬರ್ಗಾ | 20.82% |

ಮೂಲ: ರಝಾಕ ಉಸ್ತಾದ -ಹೈದರಾಬಾದ ಕರ್ನಾಟಕ ಕಥೆ-ವ್ಯಥೆ.

**ಕೋಷ್ಟಕ-2.6**

**ರಾಜ್ಯದಲ್ಲಿ ಶಾಲಾ ದಾಖಲಾತಿ ಮತ್ತು ಶಾಲೆ ಬಿಟ್ಟ ಮಕ್ಕಳು ವಿಭಾಗವಾರು (2009-10)**

| ವಿಭಾಗ | ಶಾಲಾ ದಾಖಲಾತಿ ವಿವರ | | ಶಾಲೆ ಬಿಟ್ಟ ಮಕ್ಕಳ ಸಂಖ್ಯೆ | ಶೇಕಡವಾರು ಶಾಲೆ ಬಿಟ್ಟ ಮಕ್ಕಳು |
|---|---|---|---|---|
| ಬೆಂಗಳೂರು | 3,51,639 | 2,71,876 | 79,763 | 22.68% |
| ಮೈಸೂರು | 188,224 | 1,68,433 | 19,811 | 10.52% |
| ಬೆಳಗಾವಿ | 2,97,838 | 1,93,168 | 1,04,670 | 35.14% |
| ಗುಲ್ಬರ್ಗಾ | 2,69,594 | 1,14,4121 | 1,55,182 | 57.56% |

ಮೂಲ: ರಝಾಕ ಉಸ್ತಾದ -ಹೈದರಾಬಾದ ಕರ್ನಾಟಕ ಕಥೆ-ವ್ಯಥೆ.

**ಕೋಷ್ಟಕ-2.7**

**ಕರ್ನಾಟಕ ರಾಜ್ಯದಲ್ಲಿ ತೀವ್ರ ಅಪೌಷ್ಠಿಕತೆಯಿಂದ ಬಳಲುತ್ತಿರುವ ಮಕ್ಕಳು ಶೇಕಡಾವಾರು**

| ವಿಭಾಗಗಳು | ತೀವ್ರ ಅಪೌಷ್ಠಿಕತೆಯಿಂದ ಬಳಲುತ್ತಿರುವ ಮಕ್ಕಳು |
|---|---|
| ಬೆಂಗಳೂರು | 0.25% |
| ಮೈಸೂರು | 0.08% |
| ಬೆಳಗಾವಿ | 0.37% |
| ಗುಲ್ಬರ್ಗಾ | 1.48% |

ಮೂಲ: ರಝಾಕ ಉಸ್ತಾದ -ಹೈದರಾಬಾದ ಕರ್ನಾಟಕ ಕಥೆ-ವ್ಯಥೆ.

**ಕೋಷ್ಟಕ-2.8**

**ರಾಜ್ಯದಲ್ಲಿರುವ ಒಟ್ಟು ಪ.ಜಾ/ಪ.ಪಂ. ಜನಸಂಖ್ಯೆಯಲ್ಲಿ ಪ್ರತಿ ವಿಭಾಗಗಳ ಪಾಲು (2001ರ ಜನಗಣತಿ)**

| ವಿಭಾಗಗಳು | ಪ.ಜಾ/ಪ.ಪಂ. ಜನಸಂಖ್ಯೆಯಲ್ಲಿ ಪ್ರತಿ ವಿಭಾಗಗಳ ಪಾಲು |
|---|---|
| ಬೆಂಗಳೂರು | 27.61% |
| ಮೈಸೂರು | 20.56% |
| ಬೆಳಗಾವಿ | 17.05% |
| ಗುಲ್ಬರ್ಗಾ | 31.87% |

**ಮೂಲ: ರಝಾಕ ಉಸ್ತಾದ -ಹೈದರಾಬಾದ ಕರ್ನಾಟಕ ಕಥೆ-ವ್ಯಥೆ**

**ಕೋಷ್ಟಕ-2.9**

**ರಾಜ್ಯದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ ಶೇಕಡಾವಾರು**

| ವಿಭಾಗಗಳು | ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ ಶೇ. |
|---|---|
| ಬೆಂಗಳೂರು | 31.51 |
| ಮೈಸೂರು | 25.90 |
| ಬೆಳಗಾವಿ | 33.86 |
| ಗುಲ್ಬರ್ಗಾ | 40.71 |

**ಮೂಲ: ರಝಾಕ ಉಸ್ತಾದ -ಹೈದರಾಬಾದ ಕರ್ನಾಟಕ ಕಥೆ-ವ್ಯಥೆ.**

## 2.3 ಭೌಗೋಳಿಕ ಪರಿಚಯ

ಪ್ರಸ್ತುತ ಸಂಶೋಧನಾ ಪ್ರಬಂಧವು ಹೈದ್ರಾಬಾದ್-ಕರ್ನಾಟಕ ಪ್ರದೇಶವನ್ನು ತನ್ನ ಅಧ್ಯಯನ ಕ್ಷೇತ್ರವನ್ನಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಹೈದ್ರಾಬಾದ್-ಕರ್ನಾಟಕ ಪ್ರದೇಶದ ಒಂದು ಸಂಕ್ಷಿಪ್ತ ಪರಿಚಯವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ. ಅಧ್ಯಯನ ಕ್ಷೇತ್ರದ ಅಭಿವೃದ್ಧಿಯ ಸ್ವರೂಪವನ್ನು ತಿಳಿಯಲು ಹಾಗೂ ಪ್ರಸ್ತುತ ಸಮಸ್ಯೆಗಳನ್ನು ಪರಿಹರಿಸಲು ಅನೇಕ ರೀತಿಯ ಪರಿಹಾರೋಪಾಯಗಳನ್ನು ಕಂಡುಕೊಳ್ಳುವ ಸಲುವಾಗಿ ಈ ಪ್ರದೇಶದ ಒಂದು ಪಕ್ಷಿನೋಟವು ಅತ್ಯವಶ್ಯಕವಾಗಿದೆ.

ಹೈದ್ರಾಬಾದ್-ಕರ್ನಾಟಕ ಪ್ರದೇಶದ ಐತಿಹಾಸಿಕ ಹಿನ್ನೆಲೆ, ಭೌಗೋಳಿಕ ಲಕ್ಷಣಗಳು ಮತ್ತು ಜನಸಂಖ್ಯೆ, ಶಿಕ್ಷಣ, ಆರೋಗ್ಯ, ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿ, ಶ್ರಮಶಕ್ತಿಯ ವಿಭಜನೆ, ಭೂ-ಮಾಲಿಕತ್ವ ಈ ಎಲ್ಲಾ ವಿಷಯಗಳ ಕುರಿತಾದ ಅಭಿವೃದ್ಧಿ ಹಾಗೂ ಸಮಸ್ಯೆಗಳ ಚಿತ್ರಣವನ್ನು ನಾವು ಇಲ್ಲಿ ಕಾಣಬಹುದು. ಪ್ರಸ್ತುತ ಅಧ್ಯಯನವು ಬಾಲಕಾರ್ಮಿಕರ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ಅಧ್ಯಯನ ಕೈಗೊಂಡಿರುವುದರಿಂದ ಹೆಚ್ಚಿನ ಪ್ರಾಮುಖ್ಯತೆಯನ್ನು ಅವುಗಳಿಗೆ ಸಂಬಂಧಿಸಿದ ಮಾಪನಗಳಿಗೆ ಇಲ್ಲಿ ಪ್ರಾಮುಖ್ಯತೆ ನೀಡಲಾಗಿದೆ.

**ಬಳ್ಳಾರಿ ಜಿಲ್ಲೆ**

ಕರ್ನಾಟಕ ರಾಜ್ಯದಲ್ಲಿ ಬಳ್ಳಾರಿ ಜಿಲ್ಲೆ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿರುವ ಜಿಲ್ಲೆಯಾಗಿದೆ. ಜಿಲ್ಲೆಯ ಆರ್ಥಿಕತೆಯಲ್ಲಿ ಇತ್ತೀಚಿನ ದಿನಗಳಲ್ಲಿ ಬಹಳಷ್ಟು ಬದಲಾವಣೆಗಳಾಗುತ್ತಿವೆ. ಹಿಂದಿನಿಂದಲೂ ಕೃಷಿಯನ್ನು ಆಧರಿಸಿದ ಜನಸಮುದಾಯ ಒಂದೆಡೆ ಇದ್ದರೆ, ಮತ್ತೊಂದೆಡೆ ಜಿಲ್ಲೆಯಲ್ಲಿ ಅಗಾಧ ಪ್ರಮಾಣದಲ್ಲಿ ಕೈಗಾರಿಕರಣ ಪ್ರಕ್ರಿಯೆ ಆರಂಭಗೊಂಡಿದ್ದು ಅದರಲ್ಲಿ ತೊಡಗಿದವರ ಪ್ರಮಾಣ ಅಧಿಕಗೊಳ್ಳುತ್ತಿರುವಂತೆ ಕಾಣುತ್ತಿದೆ. ಜಿಲ್ಲೆಯ ಆರ್ಥಿಕತೆಯನ್ನು ಗಮನಿಸಿದಾಗ ಮೇಲ್ನೋಟದಲ್ಲಿ ಜಿಲ್ಲೆಯಲ್ಲಿ ಕೃಷಿಯ ಪ್ರಾಬಲ್ಯ ಕಡಿಮೆಯಾಗಿ, ದ್ವಿತೀಯ ಮತ್ತು ತೃತೀಯ ವಲಯಗಳ ಪ್ರಾಬಲ್ಯ ಅಧಿಕಗೊಂಡಿರುವಂತೆ ತೋರುತ್ತದೆ. ಆದರೆ ಒಂದು ಸಂಗತಿ ಕುರಿತಂತೆ ಅಧ್ಯಯನ ಕೈಗೊಂಡಾಗ ಮಾತ್ರ ಅದರ ನೈಜ ಚಿತ್ರಣವನ್ನು ತಿಳಿಯಲು ಸಾದ್ಯ ಈ ಪ್ರಬಂಧದಲ್ಲಿ ಬಾಲಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಕುರಿತು ಚರ್ಚಿಸುವ, ವಿಶ್ಲೇಷಿಸುವ ಪ್ರಯತ್ನವನ್ನು ಮಾಡುವುದಾಗಿದೆ.

ಬಳ್ಳಾರಿ ಜಿಲ್ಲೆಯು ನೈರುತ್ಯ ಮತ್ತು ಈಶಾನ್ಯ ದಿಕ್ಕುಗಳ ನಡುವೆ ಚಾಚಿಕೊಂಡಿದೆ. ಇದು ಸರಿಯಾಗಿ ಕರ್ನಾಟಕದ ಮಧ್ಯ ಭಾಗದಲ್ಲಿ ಇದೆ. ಪ್ರಸ್ತುತ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯನ್ನು ಗಮನಿಸಿದಾಗ ನೈರುತ್ಯ ದಿಕ್ಕಿನ ಹಗರಿಬೊಮ್ಮನಹಳ್ಳಿ, ಕಲ್ಲಹಳ್ಳಿ ಎಂಬ ಗ್ರಾಮದಿಂದ ಈಶಾನ್ಯ ದಿಕ್ಕಿಗೆ ಶಿರುಗುಪ್ಪ ತಾಲೂಕಿನ ಸಲ್ಲಕುದಲೂರು ಎಂಬ ಗ್ರಾಮದವರೆಗೆ 187 ಕಿ.ಮೀ. ಉದ್ದವಾಗಿ, ಪೂರ್ವ ಪಶ್ಚಿಮವಾಗಿ ಬಳ್ಳಾರಿ ತಾಲ್ಲೂಕಿನ ಕಾರೇಕಲ್ಲುವೀರಾಪುರದಿಂದ ಹಡಗಲಿ ತಾಲೂಕಿನ ಹಿರೇಬನ್ನಿಹಲ್ಯೆಯವರೆಗೆ 161 ಕಿ.ಮೀ. ಅಗಲವಾಗಿ ಹರಡಿಕೊಂಡಿದೆ. ಜಿಲ್ಲೆಯು ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಮದ್ರಾಸ್ ಪ್ರಾಂತ್ಯದ ಬಹುದೊಡ್ಡ ಜಿಲ್ಲೆಯಾಗಿತ್ತು. 1953ಕ್ಕೆ ಮೊದಲ ಜಿಲ್ಲೆಯ 12 ತಾಲೂಕುಗಳನ್ನು ಹೊಂದಿದ್ದು, ಅವುಗಳನ್ನು ಬಳ್ಳಾರಿ, ಶಿರಗುಪ್ಪ, ಸಂಡೂರು, ಹೊಸಪೇಟೆ, ಹರಪನಹಳ್ಳಿ, ಹಡಗಲಿ, ಕೂಡ್ಲಿಗಿ, ಮಲ್ಲಾಪುರ ಮತ್ತು ಈಗಿನ ಆಂದ್ರಪ್ರದೇಶದ ಆಲೂರು, ಆದೋನಿ ರಾಯದುರ್ಗ ತಾಲೂಕುಗಳನ್ನು ಹೊಂದಿತ್ತು. 1953ರ ರಾಜ್ಯಪುನರ್ ವಿಂಗಡನೆ ಸಂದರ್ಭದಲ್ಲಿ ಪ್ರಾಂತವಾಗಿ ಪ್ರತ್ಯೇಕಗೊಂಡಾಗ ಬಳ್ಳಾರಿ ಜಿಲ್ಲೆಗೆ ಸೇರಿದ್ದ ಆಲೂರು, ಆದೋನಿ ಮತ್ತು ರಾಯದುರ್ಗ

ತಾಲೂಕುಗಳನ್ನು ಆಂಧ್ರಪ್ರದೇಶ ರಾಜ್ಯಕ್ಕೆ ಸೇರಿಸಲಾಯಿತು. ಕರ್ನಾಟಕದಲ್ಲಿ 1997ರಲ್ಲಿ ಹೊಸಜಿಲ್ಲೆಗಳ ರಚನೆಯ ಸಂದರ್ಭದಲ್ಲಿ ಜಿಲ್ಲೆಗೆ ಸೇರಿದ್ದ ಮತ್ತೊಂದು ತಾಲೂಕು ಹರಪನಹಳ್ಳಿಯನ್ನು ದಾವಣಗೆರೆ ಜಿಲ್ಲೆಗೆ ಸೇರಿಸಲಾಯಿತು. ಹಾಗಾಗಿ ಪ್ರಸ್ತುತ ಬಳ್ಳಾರಿ ಜಿಲ್ಲೆಯು 7 ತಾಲೂಕುಗಳನ್ನು ಹೊಂದಿದೆ. ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ 84ಕಿ.ಮೀ ಇದ್ದು, ರಾಜ್ಯದ ವಿಸ್ತೀರ್ಣದಲ್ಲಿ ರಾಜ್ಯದಲ್ಲಿ 8ನೇ ಸ್ಥಾನದಲ್ಲಿದೆ. ಜಿಲ್ಲೆಯ ಉತ್ತರಕ್ಕೆ ಕೊಪ್ಪಳ, ದಕ್ಷಿಣಕ್ಕೆ ಚಿತ್ರದುರ್ಗ, ಪಶ್ಚಿಮಕ್ಕೆ ಧಾರಾವಾಡ ಜಿಲ್ಲೆ ಮತ್ತು ಪೂರ್ವಕ್ಕೆ ಆಂದ್ರಪ್ರದೇಶ ರಾಜ್ಯವಿದೆ. ಜಿಲ್ಲೆಯ ಪೂರ್ವಭಾಗವು ಸಮತಟ್ಟಾದ ಭೂಮಿಯನ್ನು ಹೊಂದಿದ್ದು, ಕೃಷಿಗೆ ಅನುಕೂಲಕರವಾಗಿದೆ. ಜಿಲ್ಲೆಯ ಹವಾಮಾನ ದೃಷ್ಟಿಯಿಂದ ಅತಿ ಉಷ್ಣವಲಯವಾಗಿದೆ ಮಳೆಯ ಪ್ರಮಾಣವು ತೀರಾ ಕಡಿಮೆ, ಶುಷ್ಕ ವಾತಾವರಣದಿಂದ ಕೂಡಿದೆ ಪೂರ್ವಭಾಗದಲ್ಲಿ ಹೆಚ್ಚು ಅರಣ್ಯಪ್ರದೇಶವಿದೆ. ಈ ಭಾಗದಲ್ಲಿ ತುಂಗಾಭದ್ರ ನದಿ ಇರುವುದರಿಂದ ಪೂರ್ವ ತಾಲೂಕುಗಳಿಗೆ ಪ್ರಮುಖ ನೀರಾವರಿಯ ಮೂಲವಾಗಿದೆ ಈ ನದಿಯು ಜಿಲ್ಲೆಯಲ್ಲಿ 320 ಕಿ.ಮೀ.ನಷ್ಟು ದೂರ ಹರಿಯುತ್ತದೆ. ನೀರಾವರಿ ಕೃಷಿ ಅಭಿವೃದ್ಧಿಗೆ ಈ ನದಿಯು ಬೆನ್ನೆಲುಬು ಆಗಿದೆ ಈ ನದಿಯನ್ನು ಬಿಟ್ಟರೆ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಕೆಲವು ಸಣ್ಣ ಪುಟ್ಟ ಜಲಾಶಯ, ಕೆರೆ ಮತ್ತು ಕಟ್ಟೆಗಳಿವೆ.

2001ರ ಜನಗಣತೆಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ 20,25,242 ಇದ್ದು ರಾಜ್ಯದ ಜನಸಂಖ್ಯೆಯಲ್ಲಿ ಶೇ.3.84ರಷ್ಟು ಪ್ರಮಾಣವನ್ನು ಹೊಂದಿದೆ ಜನಸಂಖ್ಯೆಯಲ್ಲಿ ರಾಜ್ಯದ 7ನೇ ಸ್ಥಾನದಲ್ಲಿದೆ. ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಹೊಸಪೇಟೆ ತಾಲೂಕಿನ ಜನಸಂಖ್ಯೆ 3,74,945 ಇದ್ದು ಹಾಗೂ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಜನಸಂಖ್ಯೆ 1ಲಕ್ಷ 60 ಸಾವಿರ ಇದೆ.

1991 ರ ಜನಗಣತೆಯ ಪ್ರಕಾರ ಶೇ.27.72ರಷ್ಟು ರಾಜ್ಯದ ಒಟ್ಟು ರಾಜ್ಯದ ಒಟ್ಟು ಪರಿಷ್ಟರಲ್ಲಿ ಜಿಲ್ಲೆಯ ಪಾಲು 4.74% ರಷ್ಟಿದೆ ಈ ಪ್ರಮಾಣವನ್ನು ರಾಜ್ಯಕ್ಕೆ ಹೋಲಿಸಿದರೆ ಪರಿಶಿಷ್ಟರ ಜನಸಂಖ್ಯೆಯಲ್ಲಿ ಶೇ.8.3 ರಷ್ಟು ಪರಿಶಿಷ್ಟರನ್ನು ಹೊಂದಿದೆ.

**ಜಿಲ್ಲೆಯ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿವರಗಳು**

ಸಾಮಾಜಿಕವಾಗಿ ಜಿಲ್ಲೆಯನ್ನು ನೋಡುವುದಾದರೆ, ಜಿಲ್ಲೆಯು ವಿವಿಧ ಜಾತಿ ವರ್ಗಗಳನ್ನು ಹೊಂದಿದೆ. ಇವುಗಳಲ್ಲಿ ಮುಖ್ಯವಾಗಿ ಲಿಂಗಾಯತು, ಕುರುಬ, ಮುಸ್ಲಿಂ, ವಾಲ್ಮಿಕಿ ಮತ್ತು ಮಾದಿಗ ಜನಾಂಗಗಳನ್ನು ಹೊಂದಿದೆ. 1991ರ ಜನಗಣತೆಯ ಪ್ರಕಾರ ಜಿಲ್ಲೆಯಲ್ಲಿ 2,88,292 ಕುಟುಂಬಗಳು ಇದ್ದಾವೆ. ರಾಜ್ಯದ ಒಟ್ಟು ಕುಟುಂಬಗಳಲ್ಲಿ, ಜಿಲ್ಲೆಯ ಪಾಲು ಶೇ.3.62 ರಷ್ಟಿದೆ. 2001 ರ ಜನಗಣತಿ ಅನ್ವಯ ಜಿಲ್ಲೆಯ ಸಾಕ್ಷರತೆ ಸಂಖ್ಯೆ 58.4% ರಷ್ಟಿದೆ. ಇದನ್ನು ರಾಜ್ಯದ ಸಾಕ್ಷರತೆಗೆ ಹೋಲಿಸಿದರೆ ಶೇ.9 ರಷ್ಟು ಕಡಿಮೆ ಇದೆ. ಈಗಾಗಿ ಸಾಕ್ಷರತೆಯಲ್ಲಿ ಹಿಂದುಳಿದಿರುವ ಜಿಲ್ಲೆಗಳಲ್ಲಿ ಬಳ್ಳಾರಿಯು ಒಂದಾಗಿದೆ.

ಸಾಕ್ಷರತೆಯನ್ನು ಹೆಚ್ಚಿಸುವ ಸಲುವಾಗಿ ಜಿಲ್ಲೆಯಲ್ಲಿ ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ ಮತ್ತು ನಿರಂತರ ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸಿ ಸಾಕ್ಷರತೆಗಾಗಿ ವಿವಿಧ ಕಾರ್ಯಕ್ರಮಗಳನ್ನು ರೂಪಿಸಿದೆ.

ಯಾವುದೇ ಒಂದು ಪ್ರದೇಶದ ಅಬಿವೃದ್ಧಿಯಲ್ಲಿ ಆರ್ಥಿಕ ಚಟುವಟಿಕೆಗಳು ಬಹಳ ಮುಖ್ಯ ಪಾತ್ರವಹಿಸಿದೆ. ಬಳ್ಳಾರಿ ಜಿಲ್ಲೆಯಲ್ಲಿನ ಖನಿಜ ಸಂಪತ್ತು ಔದ್ಯೋಗಿಕ ಪ್ರಗತಿಗೆ ಬೆನ್ನೆಲುಬಾಗಿದೆ. ಜಿಲ್ಲೆಯು ಉತ್ಕೃಷ್ಟ ಕಬ್ಬಿಣ ಮತ್ತು ಮ್ಯಾಂಗನೀಸ್ ಖನಿಜಗಳಿಗೆ ವಿಶ್ವವಿಖ್ಯಾತಿ ಗಳಿಸಿದೆ ಕಬ್ಬಿಣ ನಿಕ್ಷೇಪದ ಪ್ರಮಾಣ 1032.40 ದಶಲಕ್ಷ ಟನ್ ಲಭ್ಯವಿದ್ದು ಮತ್ತು ಮ್ಯಾಂಗನೀಸ್ ಅದಿರಿನ ನಿಕ್ಷೇಪದ ಪ್ರಮಾಣ 18.81 ದಶಲಕ್ಷ ಟನ್ ಎಂದು ಅಂದಾಜು ಮಾಡಲಾಗಿದೆ. 1991ರ ಮಧ್ಯಭಾಗದಲ್ಲಿ ಜಾರಿಗೆ ಬಂದ ಹೊಸ ಆರ್ಥಿಕ ನೀತಿಯು ಖಾಸಗೀಕರಣ ಪ್ರಕ್ರಿಯೆಯ ಪರಿಣಾಮವಾಗಿ ಜಿಲ್ಲೆಯಲ್ಲಿ ಬೃಹತ್ ಕಂಪನಿಗಳು ಕಬ್ಬಿಣ ಮತ್ತು ಉಕ್ಕು ಉದ್ದಿಮೆ ಮೇಲೆ ಬಂಡವಾಳ ತೊಡಗಿಸಿವೆ ಜಿಲ್ಲೆಯಲ್ಲಿ ಪ್ರಸ್ತುತ ನಾಲ್ಕು ಕಬ್ಬಿಣ ಮತ್ತು ಉಕ್ಕು ಉದ್ದಿಮಿಗಳು ಉತ್ಪಾದನೆಯಲ್ಲಿ ತೊಡಗಿವೆ. ಹಾಗಾಗಿ ರಾಷ್ಟ್ರದ ಉಕ್ಕು ಉತ್ಪಾದನೆಯಲ್ಲಿ ಬಳ್ಳಾರಿ ಜಿಲ್ಲೆಯು ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಜಿಲ್ಲೆಯಲ್ಲಿ ಜರುಗುತ್ತಿರುವ ಈ ಔದ್ಯೋಗಿಕರಣ ಪ್ರಕ್ರಿಯೆಯು ಜಿಲ್ಲೆಯ ಕೆಲವೇ ಭಾಗಗಳಲ್ಲಿ ನೆಲೆಗೊಂಡಿದೆ. ಪ್ರಾದೇಶಿಕವಾಗಿ ಜಿಲ್ಲೆಯನ್ನು ಪೂರ್ವ ಮತ್ತು ಪಶ್ಚಿಮ ತಾಲ್ಲೂಕುಗಳೆಂದು ವಿಂಗಡಿಸಲಾಗಿದೆ. ಪೂರ್ವ ಭಾಗದ ತಾಲ್ಲೂಕುಗಳಾದ ಬಳ್ಳಾರಿ, ಹೊಸಪೇಟೆ, ಶಿರುಗುಪ್ಪ ಮತ್ತು ಸಂಡೂರು ತಾಲ್ಲೂಕುಗಳಾಗಿವೆ. ಔದ್ಯೋಗಿಕ ಪ್ರಕ್ರಿಯೆಯಿಂದ ಪೂರ್ವ ತಾಲ್ಲೂಕುಗಳು ಸಂಮೃದ್ಧಿಯಾಗಿವೆ. ಪಶ್ಚಿಮ ಭಾಗದ ತಾಲ್ಲೂಕುಗಳು ಔದ್ಯೋಗಿಕ ಪ್ರಕ್ರಿಯೆಯಿಂದ ಹೊರಗೆ ಉಳಿದಿವೆ. ಅಬಿವೃದ್ಧಿಯ ಔದ್ಯೋಗಿಕ ಸವಲತ್ತುಗಳನ್ನು ಪೂರ್ತಿಯಾಗಿ ಪೂರ್ವ ಭಾಗದ ತಾಲ್ಲೂಕುಗಳಲ್ಲಿ ನೆಲೆಗೊಂಡಿವೆ. ಹೀಗಾಗಿ ಈ ಎರಡು ಭಾಗಗಳ ನಡುವೆ ಆರ್ಥಿಕ ಅಸಮಾನತೆ ಹೆಚ್ಚು ಕಂಡುಬಂದಿದೆ. ಇದರಿಂದ ಪೂರ್ವ ಭಾಗದ ತಾಲ್ಲೂಕುಗಳನ್ನು ಅಬಿವೃದ್ಧಿ ಪ್ರದೇಶಗಳೆಂದು ಪಶ್ಚಿಮ ಭಾಗದ ತಾಲ್ಲೂಕುಗಳನ್ನು ಹಿಂದುಳಿದ ಪ್ರದೇಶಗಳೆಂದು ಗುರಿತಿಸಲಾಗಿದೆ.

ಜಿಲ್ಲೆಯಲ್ಲಿ ದುಡಿಮೆ ವರ್ಗವನ್ನು ನೋಡಿದಾಗ ಹೆಚ್ಚು ಕೃಷಿಯನ್ನು ಅವಲಂಬಿಸಿದ್ದಾರೆ. ಒಟ್ಟು ಜನಸಂಖ್ಯೆಯಲ್ಲಿ ಶೇ. 73 ರಷ್ಟು ಕೃಷಿಯನ್ನು ಅವಲಂಬಿಸಿದ್ದಾರೆ. ಈ ಪ್ರಮಾಣವನ್ನು ರಾಜ್ಯಕ್ಕೆ ಹೋಲಿಸಿದರೆ ಶೇ.10ರಷ್ಟು ಕೃಷಿ ಅವಲಂಬಿತ ಸಂಖ್ಯೆ ಹೆಚ್ಚಿದೆ. ವಲಯವಾರು ದುಡಿಮೆ ವರ್ಗವನ್ನು ನೋಡಿದಾಗ ಪ್ರಾಥಮಿಕ ವಲಯ ಶೇ.76.81 ರಷ್ಟು, ದ್ವಿತೀಯ ವಲಯ ಶೇ.7.43 ರಷ್ಟು ಮತ್ತು ತೃತೀಯ ವಲಯ ಶೇ. 16.09 ರಷ್ಟಿದೆ. ಈ ಪ್ರಮಾಣವು ರಾಜ್ಯಕ್ಕೆ ಹೋಲಿಸಿದರೆ ಕ್ರಮವಾಗಿ 13.16 ಮತ್ತು 12ನೇ ಸ್ಥಾನದಲ್ಲಿ ಪಡೆದಿದೆ. ರಾಜ್ಯದ ದುಡಿಮೆಗಾರ ವರ್ಗಕ್ಕೆ ಹೋಲಿಸಿದರೆ ಪ್ರಾಥಮಿಕ ವಲಯದಲ್ಲಿ ಶೇ.9ರಷ್ಟು ಹೆಚ್ಚು, ದ್ವಿತೀಯ ವಲಯದಲ್ಲಿ ಶೇ.5.7ರಷ್ಟು ಮತ್ತು ತೃತೀಯ ವಲಯದಲ್ಲಿ

ಶೇ.2.5 ರಷ್ಟು ಕಡಿಮೆ ಇರುವುದನ್ನು ಗಮನಿಸಬಹುದು. ಜಿಲ್ಲೆಯ ಒಟ್ಟು ಶ್ರಮ ಶಕ್ತಿಯ ವಲಯವಾರು ವಿತರಣೆ ಮತ್ತು ಆ ವಿತರಣೆಯಲ್ಲಿ 1981 ರಿಂದ 1991ರಲ್ಲಿ ಉಂಟಾದ ಬದಲಾವಣೆ ಅಭಿವೃದ್ಧಿ ದೃಷ್ಟಿಯಿಂದ ಅನುಕೂಲಕರವಾಗಿಲ್ಲ. ಪ್ರಥಾಮಿಕ ವಲಯ ಎಂದರೆ ಕೃಷಿ, ಗಣಿಗಾರಿಕೆ ಮತ್ತು ಮೀನುಗಾರಿಕೆ ಮುಂತಾದ ಕಸುಬುಗಳನ್ನು ಅವಲಣಬಿಸಿ ಕೊಂಡಿರು ಜನರ ಪ್ರಮಾಣ ಶೇ. 87.01 ರಿಂದ 87.87% ಕ್ಕೆ ಹೇರಿದೆ ಇದನ್ನು ಅಭಿವೃದ್ಧಿಯ ವಿಮುಕ ಚಲನೆ ಎಂದು ಹೇಳಲಾಗಿದೆ. ಇದೇ ಸಮಯದಲ್ಲಿ ಅಂದರೆ ಕೈಗಾರಿಕೆ, ಯಂತ್ರೋದ್ಯಮ ಇತ್ಯಾದಿಯನ್ನು ಅವಲಂಬಿಸಿ ಕೊಂಡಿರುವವರ ಪ್ರಮಾಣವು ಶೇ.7.11 ರಿಂದ ಶೇ.4.86ಕ್ಕೆ ಇಳಿದಿದೆ. ಅತ್ಯಂತ ಆತಂಕಕಾರಿ ಸಂಗತಿಯೆಂದರೆ ಗಣಿಗಾರಿಕೆ. ಬಳ್ಳಾರಿ ಜಿಲ್ಲೆಯ ಮುಖ್ಯಕಸುಬು ಆದರೆ ಈ ವೃತ್ತಿಯನ್ನು ಅವಲಂಬಿಸಿಕೊಂಡಿರುವ ಶ್ರಮಶಕ್ತಿಯ ಪ್ರಮಾಣ ಇದೇ ಅವದಿಯಲ್ಲಿ ಶೇ.2.44 ರಿಂದ ಶೇ. 1.68ಕ್ಕೆ ಇಳಿದಿದೆ. 1981–1991ರ ಅವಧಿಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿಲ ದ್ವಿತೀಯ ವಲಯ ಬೆಳೆದಿದೆ. ಆದರೆ ಹೆಚ್ಚಿನ ಸಂಖ್ಯೆಯಲ್ಲಿ ಶ್ರಮ ಶಕ್ತಿಯನ್ನು ತೊಡಗಿಸಿಕೊಂಡಿಲ್ಲ. ಈ ಎಲ್ಲಾ ಅಂಕಿ-ಅಂಶಗಳ ಜಿಲ್ಲೆಯು ಹಿಂದುಳದಿರುವುದನ್ನು ಸೂಚಿಸುತ್ತದೆ. ಯಾವ ಪ್ರದೇಶ ಪ್ರಾಥಮಿಕ ವಲಯವನ್ನು ಹೆಚ್ಚು ಅವಲಂಬಿಸಿ ಕೊಂಡಿರುತ್ತದೆಯೊ ಆ ಪ್ರದೇಶವನ್ನು ಹಿಂದುಳಿದಿರುವ ಪ್ರದೇಶವೆಂದು ಗ್ರಹಿಸಲಾಗಿದೆ. ಅಭಿವೃದ್ಧಿ ದೃಷ್ಟಿಯಿಂದ ದ್ವಿತೀಯ ಮತ್ತು ತೃತೇಯ ವಲಯದಲ್ಲಿ ಹೆಚ್ಚು ಅವಲಂಬಿತವಾಗಿದ್ದರೆ ಉತ್ತಮ ಬೆಳವಣಿಗೆ ಎಂದು ಹೇಳಬಹುದು. ಹೀಗೆ ಬಳ್ಳಾರಿ ಜಿಲ್ಲೆಯು ರಾಜ್ಯದ ಹಿಂದುಳಿದಿರುವ ಜಿಲ್ಲೆಗಳಲ್ಲಿ ಒಂದಾಗಿದೆ.

ಜಿಲ್ಲೆಯ ಕೃಷಿಗೆ ತುಂಗಭದ್ರ ನದಿಯು ಪ್ರಮುಕಖವಾದ ನೀರಾವರಿ ಮೂಲವಾಗಿದೆ. ಈ ನದಿಯು ಜಿಲ್ಲೆಯ ಪಶ್ಚಿಮ ಮತ್ತು ಉತ್ತರ ದಿಕ್ಕುಗಳ ಮೇರೆಯಾಗಿದೆ. ಈ ನದಿಯಿಂದ ಇಡೀ ಜಿಲ್ಲೆಯ ನೀರಾವರಿ ಸಮಸ್ಯೆಗೆ ಪರಿಹಾರವಾಗಿಲ್ಲ. ಜಿಲ್ಲೆಯ ಕೆಲವು ತಾಲ್ಲೂಕುಗಳಿಗೆ ನೀರಾವರಿ ದೊರಕಿದೆ ಇದು ಜಿಲ್ಲೆಯ ಪೂರ್ವ ತಾಲ್ಲೂಕುಗಳಿಗೆ ಮಾತ್ರ ಸೀಮಿತವಾಗಿದೆ. ಈ ತಾಲ್ಲೂಕುಗಳು ಕೃಷಿಯಿಂದ ಅಭಿವೃದ್ಧಿಯ ಪಥದಲ್ಲಿದೆ. ಪಶ್ಚಿಮ ಭಾಗದ ತಾಲ್ಲೂಕುಗಳು ಪೂರ್ತಿ ಒಣ ಭೂಮಿ ಕೃಷಿಯಿಂದ ಅವಲಂಬಿಸಿದೆ. ಆರ್ಥಿಕವಾಗಿ ಜಿಲ್ಲೆಯ ವರಮಾನವು 1995–96 ರ ಅವಧಿಯಲ್ಲಿ ಶೇ. 8,544 ಮೀ. ಗಳಿದ್ದು ರಾಜ್ಯದ ಸರಾಸರಿಗಿಂತ ಮೀ.840 ಕಡಿಮೆ ಇದೆ. ವರಮಾನದಲ್ಲಿ ಜಿಲ್ಲೆಯು ರಾಜ್ಯದಲ್ಲಿ 8ನೇ ಸ್ಥಾನವನ್ನು ಹೊಂದಿದೆ.

ರಾಜ್ಯ ರಾಜಕೀಯದಲ್ಲಿ ಬಳ್ಳಾರಿ ಜಿಲ್ಲೆಗೆ ವಿಶಿಷ್ಟ ಸ್ಥಾನಮಾನವಿದೆ. ಸ್ವಾತಂತ್ರ್ಯ ನಂತರ ನಡೆದ ಎಲ್ಲಾ ಲೋಕಸಭೆ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷ ಗೆಲ್ಲುತ್ತಾ ಬಂದಿದೆ. ಇದೊಂದು ಐತಿಹಾಸಿಕ ದಾಖಲೆಯಾಗಿದೆ. ಜಿಲ್ಲೆಯ ಶಾಸಕರು ಪ್ರಸಕ್ತ ರಾಜ್ಯಸರ್ಕಾರದಲ್ಲಿ ಪ್ರಮುಖ ಖಾತೆಗಳನ್ನು ಹೊಂದಿದ್ದಾರೆ. ಈ ಜಿಲ್ಲೆಯು ಒಟ್ಟು 8 ವಿಧಾನಸಭಾ ಕ್ಷೇತ್ರಗಳನ್ನು , ಒಂದು ಲೋಕಸಭಾ ಕ್ಷೇತ್ರವನ್ನು ಹೊಂದಿದೆ

ಜಿಲ್ಲೆಯನ್ನು ಆಡಳಿತಾತ್ಮಕವಾಗಿ ಎರಡು ಉಪ ವಿಭಾಗಗಳಾಗಿ ವಿಂಗಡಿಸಲಾಗಿದೆ. ಒಂದು ಬಳ್ಳಾರಿ ಇನ್ನೊಂದು ಹೊಸಪೇಟೆಯಾಗಿದೆ. ಬಳ್ಳಾರಿ ವಿಭಾಗವು 3 ತಾಲ್ಲೂಕುಗಳನ್ನು ಹೊಸಪೇಟೆ ವಿಭಾಗವು ನಾಲ್ಕು ತಾಲ್ಲೂಕುಗಳನ್ನು ಹೊಂದಿದೆ. ಹಾಗೆ ಬಳ್ಳಾರಿ ಜಿಲ್ಲೆಯ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ವಿವರಗಳನ್ನು ನೋಡಿದಾಗ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಜಿಲ್ಲೆಯು ರಾಜ್ಯದ ಹಿಂದುಳಿದಿರುವ ಜಿಲ್ಲೆಗಳಲ್ಲಿ ಒಂದಾಗಿದೆ.

**ಹೊಸಪೇಟೆ ತಾಲೂಕು**

ಬಳ್ಳಾರಿ ಜಿಲ್ಲೆಯಲ್ಲಿ ಹೊಸಪೇಟೆ ಪ್ರಮುಖ ತಾಲ್ಲೂಕು ಹಾಗೂ ಉಪ ವಿಭಾಗವಾಗಿದೆ. ತಾಲ್ಲೂಕಿನಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶಗಳೆಂದರೆ ಜಿಲ್ಲೆಯಲ್ಲಿ ಹೆಚ್ಚು ನೀರಾವರಿ ಪ್ರದೇಶವನ್ನು ಹೊಂದಿದ್ದು ಮಧ್ಯಮ ಗಾತ್ರದ ಕಬ್ಬಿಣ ಮತ್ತು ಹುಕ್ಕು ಉದ್ಯಮಗಳನ್ನು ಮತ್ತು ಗಣಿಗಾರಿಕೆಯನ್ನು ಹೊಂದಿದೆ. ತಾಲ್ಲೂಕಿನ ಪೂರ್ವ ಭಾಗದ ಗ್ರಾಮಗಳು ಹೆಚ್ಚು ನೀರಾವರಿ ಪ್ರದೇಶಗಳಾಗಿವೆ. ಈ ಭಾಗದಲ್ಲಿ ಬೆಳೆಯುವ ವಾಣಿಜ್ಯ ಬೆಳೆಗಳು ಅಧಿಕವಾಗಿದೆ ಇದರಿಂದ ಹೊಸಪೇಟೆ ಮಾರುಕಟ್ಟೆ ವ್ಯವಹಾರವನ್ನು ಹೆಚ್ಚಿಸಿದೆ ಈ ತಾಲ್ಲೂಕು ಹೊಸಪೇಟೆ ನಗರಸಭೆ ಸೇರಿದಂತೆ ಕಮಲಾಪುರ ಪಟ್ಟಣ ಪಂಚಾಯಿತಿ ಮತ್ತು ಕಂಪ್ಲಿ ಪುರಸಭೆಗಳನ್ನು ಹೊಂದಿದೆ ಜಿಲ್ಲೆಯ ಪೂರ್ವ ಭಾಗದ ಪ್ರಮುಖ ತಾಲ್ಲೂಕು ಹಾಗೂ ಅಭಿವೃದ್ಧಿ ಪ್ರದೇಶವಾಗಿದೆ. ಕೃಷಿ ಮತ್ತು ಕೈಗಾರಿಕೆ ವಲಯದಲ್ಲಿ ತಾಲ್ಲೂಕು ಪ್ರಗತಿ ಪಥದಲ್ಲಿದೆ.

**ಜನಸಂಖ್ಯೆ, ಸಾಕ್ಷರತೆ ಇತ್ಯಾದಿ ವಿವರಗಳು**

ಹೊಸಪೇಟೆ ತಾಲ್ಲೂಕು 2001 ರ ಜನಗಣತೆಯ ಪ್ರಕಾರ ಒಟ್ಟು ಜನಸಂಖ್ಯೆ 3,73,665 ರಷ್ಟು ಹೊಂದಿದ್ದು ಇದರಲ್ಲಿ ಪುರಷರು 18,9,200 ಮತ್ತು ಮಹಿಳೆಯರು 18,4,465 ರಷ್ಟಿದ್ದಾರೆ ಜಿಲ್ಲೆಯಲ್ಲಿ ತಾಲ್ಲೂಕಿನ ಪಾಲು ಶೇ.18.45 ರಷ್ಟಿದೆ ಅತಿ ಹೆಚ್ಚು ಜನಸಂಖ್ಯೆಯನ್ನು ಹೊಂದಿದ್ದು ಜಿಲ್ಲೆಯ ಎರಡನೇ ತಾಲ್ಲೂಕಾಗಿದೆ ಜಾತಿವಾರು ಜನಸಂಖ್ಯೆಯಲ್ಲಿ ಪರಿಶಿಷ್ಟರ ಪ್ರಮಾಣ ಶೇ.32.91 ರಷ್ಟು ಹೊಂದಿದ್ದು ಜಿಲ್ಲೆಯಲ್ಲಿ ಮೂರನೇ ಸ್ಥಾನದಲ್ಲಿದೆ ಜಿಲ್ಲೆಯ ಸರಾಸರಿ ಶೇ.5.19 ರಷ್ಟು ಹೆಚ್ಚಿದೆ. ತಾಲ್ಲೂಕಿನ ಸಾಕ್ಷರರ ವಿವರವನ್ನು ನೋಡಿದಾಗ ಜಿಲ್ಲೆಯಲ್ಲಿ ಅತಿ ಹೆಚ್ಚು ಎಂದರೆ ಶೇ.61.29 ಸಾಕ್ಷರತೆಯನ್ನು ಹೊಂದಿದೆ. ಜಿಲ್ಲೆಯ ಸರಾಸರಿಗಿಂತ ಶೇ.3 ರಷ್ಟು ಹೆಚ್ಚು ಸಾಕ್ಷರರನ್ನು ಹೊಂದಿದೆ ಸಾಕ್ಷರತೆಯ ದೃಷ್ಟಿಯಿಂದ ತಾಲ್ಲೂಕು ಜಿಲ್ಲೆಯ ಸರಾಸರಿಗಿಂತ ಉತ್ತಮ ಸ್ಥಿತಿಯಲ್ಲಿದೆ. ತಾಲ್ಲೂಕು ವಿಸ್ತೀರ್ಣ 934.19 ಚ.ಕಿ.ಮೀ. ಗಳಷ್ಟಿದ್ದು ವಿಸ್ತೀರ್ಣದಲ್ಲಿ ಒಟ್ಟು ಜಿಲ್ಲೆಯ ತಾಲ್ಲೂಕಿನ ಪಾಲು ಶೇ.11.05 ರಷ್ಟು ಪ್ರಮಾಣವನ್ನು ಹೊಂದಿದೆ ತಾಲ್ಲೂಕು ಒಟ್ಟು 56,256 ಕುಟುಂಬಗಳನ್ನು ಹೊಂದಿದೆ. ತಾಲ್ಲೂಕಿನಲ್ಲಿ ಪ್ರಮುಖ ಜಾತಿಗಳೆಂದರೆ ಲಿಂಗಾಯತರು, ನಾಯಕರು, ಮಾದಿಗರು, ಮುಸ್ಲಿಂರು, ಮತ್ತು ಕುರುಬರು ಇದ್ದಾರೆ

ರಾಜಕೀಯವಾಗಿ ಹೊಸಪೇಟೆ ತಾಲ್ಲೂಕನ್ನು ನೋಡುವುದಾದರೆ ತಾಲ್ಲೂಕು ತನ್ನುದೇ ಆದ ವಿಧಾನಸಭಾ ಕ್ಷೇತ್ರವನ್ನು ಹೊಂದಿದೆ. ಈ ತಾಲ್ಲೂಕು ಬಳ್ಳಾರಿ ಜಿಲ್ಲೆಗೆ ಸೇರಿದ್ದರೂ ಕೊಪ್ಪಳ ಲೋಕಸಭಾ ಕ್ಷೇತ್ರಕ್ಕೆ ಸೇರಿತ್ತು. ಆದರೆ ಇತ್ತೀಚಿಗೆ ನೆಡೆದ ಕ್ಷೇತ್ರ ಪುನರ್‌ವಿಂಗಡನೆಯಲ್ಲಿ ಬಳ್ಳಾರಿ ಲೋಕಸಭಾ ಕ್ಷೇತ್ರಕ್ಕೆ ಸೇರಿದೆ. ಹೊಸಪೇಟೆಯ ನಗರಾಭಿವೃದ್ಧಿ ಪ್ರಾಧಿಕಾರ ಮತ್ತು ಸಿಟಿ ಮುನ್ಸಿಪಲ್ ಕೌನ್ಸಿಲ್‌ನ್ನು ಹೊಂದಿದೆ. ತಾಲ್ಲೂಕಿನಲ್ಲಿ ಒಟ್ಟು ಗ್ರಾಮ ಪಂಚಾಯಿತಿಗಳಿ 24, ಪಟ್ಟಣ ಪಂಚಾಯಿತಿ 2, ನಗರಸಭೆ 1, ಹೊಂದಿದ್ದು ಈ ನಗರಸಭೆಯು 35 ಸದಸ್ಯರನ್ನು ಹೊಂದಿದೆ.

**ಹಗರಿಬೊಮ್ಮನಹಳ್ಳಿ ತಾಲ್ಲೂಕು**

ಬಳ್ಳಾರಿ ಜಿಲ್ಲೆಯ ಪಶ್ಚಿಮ ಭಾಗದ ಇನ್ನೊಂದು ಪ್ರಮುಖ ತಾಲ್ಲೂಕು ಹಗರಿಬೊಮ್ಮನಹಳ್ಳಿ ತಾಲ್ಲೂಕು ಎಂದು ಹೇಳಬಹುದು. ತಾಲ್ಲೂಕಿನಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶಗಳೆಂದರೆ ಜಿಲ್ಲೆಯಲ್ಲಿ ಒಣ ನೀರಾವರಿ ಪ್ರದೇಶವನ್ನು ಹೊಂದಿದ್ದು ಹೆಚ್ಚಾಗಿ ಕೃಷಿಯನ್ನು ಅವಲಂಬಿಸಿದ ತಾಲ್ಲೂಕಾಗಿದೆ. ತಾಲ್ಲೂಕಿನ ಗ್ರಾಮಗಳು ಹೆಚ್ಚು ಮಳೆಯಾಶ್ರಿತ ಕೃಷಿ ಭೂಮಿಯನ್ನು ಹೊಂದಿದೆ. ಈ ಭಾಗದಲ್ಲಿ ಬೆಳೆಯುವ ವಾಣಿಜ್ಯ ಬೆಳೆಗಳು ಅಧಿಕವಾಗಿದೆ ಇದರಿಂದ ಹಗರಿಬೊಮ್ಮನಹಳ್ಳಿ ಮಾರುಕಟ್ಟೆ ವ್ಯವಹಾರವನ್ನು ಹೆಚ್ಚಿಸಿದೆ ಈ ತಾಲ್ಲೂಕು ಇನ್ನೂ ಗ್ರಾಮ ಪಂಚಾಯತಿಯನ್ನು ಹೊಂದಿರುವುದು ಸಹ ಈ ತಾಲ್ಲೂಕು ಹಿಂದುಳಿಯಲು ಪ್ರಮುಖ ಕಾರಣವಾಗಿದೆ. ಹಗರಿಬೊಮ್ಮನಹಳ್ಳಿ ತಾಲ್ಲೂಕು ಇತ್ತೀಚಿನ ಕೆಲವು ಅಭಿವೃದ್ಧಿ ಕಾರ್ಯದಲ್ಲಿ ಪ್ರಗತಿಯತ್ತ ಸಾಗುತ್ತಿರುವುದನ್ನು ಕಾಣಬಹುದು.

**ಜನಸಂಖ್ಯೆ, ಸಾಕ್ಷರತೆ ಇತ್ಯಾದಿ ವಿವರಗಳು**

ಹಗರಿಬೊಮ್ಮನಹಳ್ಳಿ ತಾಲ್ಲೂಕು 2001 ರ ಜನಗಣತೆಯ ಪ್ರಕಾರ ಒಟ್ಟು ಜನಸಂಖ್ಯೆ 1ಲಕ್ಷ 60 ಸಾವಿರದಷ್ಟು ಹೊಂದಿದ್ದು ಇದರಲ್ಲಿ ಪುರಷರು 81 ಸಾವಿರ ಮತ್ತು ಮಹಿಳೆಯರು 79 ಸಾವಿರದಷ್ಟಿದ್ದಾರೆ ಜಿಲ್ಲೆಯಲ್ಲಿ ತಾಲ್ಲೂಕಿನ ಪಾಲು ಶೇ.12.5 ರಷ್ಟಿದೆ. ಜಾತಿವಾರು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿಯ ಪ್ರಮಾಣ 29,941 (18.72%) ಪರಿಶಿಷ್ಟ ಪಂಗಡದ ಪ್ರಮಾಣ 21,716 (13.58%)ರಷ್ಟು ಹೊಂದಿದ್ದು. ತಾಲ್ಲೂಕಿನ ಸಾಕ್ಷರರ ವಿವರವನ್ನು ನೋಡಿದಾಗ ಶೇ.58.58 ರಷ್ಟು ಸಾಕ್ಷರತೆಯನ್ನು ಹೊಂದಿದೆ. ಜಿಲ್ಲೆಯ ಸರಾಸರಿಗಿಂತ ಹೆಚ್ಚು ಸಾಕ್ಷರರನ್ನು ಹೊಂದಿದೆ ಸಾಕ್ಷರತೆಯ ದೃಷ್ಟಿಯಿಂದ ತಾಲ್ಲೂಕು ಜಿಲ್ಲೆಯ ಸರಾಸರಿಗಿಂತ ಉತ್ತಮ ಸ್ಥಿತಿಯಲ್ಲಿದೆ. ಪುರುಷ ಸಾಕ್ಷರತೆ ಪ್ರಮಾಣ 71.25% ರಷ್ಟಿದ್ದು ಮಹಿಳಾ ಸಾಕ್ಷರತಾ ಪ್ರಮಾಣ 45.73%ರಷ್ಟಿದೆ. ತಾಲ್ಲೂಕು ಒಟ್ಟು ವಿಸ್ತೀರ್ಣ 924 ಚ.ಕಿ.ಮೀ. ಗಳಷ್ಟಿದ್ದು ವಿಸ್ತೀರ್ಣದಲ್ಲಿ ಒಟ್ಟು ಜಿಲ್ಲೆಯ ತಾಲ್ಲೂಕಿನ ಪಾಲು ಶೇ.11.00 ರಷ್ಟು ಪ್ರಮಾಣವನ್ನು ಹೊಂದಿದೆ. ತಾಲ್ಲೂಕಿನಲ್ಲಿ ಪ್ರಮುಖ ಜಾತಿಗಳೆಂದರೆ ಲಿಂಗಾಯತರು, ನಾಯಕರು, ಮಾದಿಗರು, ಮುಸ್ಲಿಂರು, ಮತ್ತು ಕುರುಬರು ಇದ್ದಾರೆ ರಾಜಕೀಯವಾಗಿ ಹಗರಿಬೊಮ್ಮನಹಳ್ಳಿ ತಾಲ್ಲೂಕನ್ನು ನೋಡುವುದಾದರೆ ತಾಲ್ಲೂಕು

ತನ್ನದೇ ಆದ ವಿಧಾನಸಭಾ ಕ್ಷೇತ್ರವನ್ನು ಹೊಂದಿದೆ. ಈ ಮೊದಲು ಕೂಡ್ಲಿಗಿ ವಿಧಾನಸಭಾ ಕ್ಷೇತ್ರಕ್ಕೆ ಸೇರಿತ್ತು. ಈ ತಾಲ್ಲೂಕು ಬಳ್ಳಾರಿ ಲೋಕಸಭಾ ಕ್ಷೇತ್ರಕ್ಕೆ ಸೇರಿದೆ. ಹಗರಿಬೊಮ್ಮನಹಳ್ಳಿ ನಗರ ಒಟ್ಟು 3 ಗ್ರಾಮಪಂಚಾಯತಿಗಳನ್ನು ಒಳಗೊಂಡ ನಗರವಾಗಿದೆ. ತಾಲ್ಲೂಕಿನಲ್ಲಿ ಒಟ್ಟು 22 ಗ್ರಾಮ ಪಂಚಾಯಿತಿಗಳನ್ನು ಹೊಂದಿದೆ.

**ಕೊಪ್ಪಳ ಜಿಲ್ಲೆ**

ಒಂದು ಜಿಲ್ಲೆಯ ಭೌಗೋಳಿಕ ವಿವರಗಳಿಗೂ, ಅಲ್ಲಿನ ಸಂಸ್ಕೃತಿಗೂ ಅವಿನಾಭಾವ ಸಂಬಂಧವಿರುತ್ತದೆ. ಹಾಗಾಗಿ ಒಂದು ಜಿಲ್ಲೆಯ ಸಾಂಸ್ಕೃತಿಕ ಆಕೃತಿಯನ್ನು ಅರ್ಥಮಾಡಿಕೊಳ್ಳಲು ಅಲ್ಲಿನ ಭೌಗೋಳಿಕ ವಿವರಗಳಲ್ಲಿ ಮೂಲ ಸೆಲೆಗಳನ್ನು ಅರ್ಥಮಾಡಿಕೊಳ್ಳುವ ಅಗತ್ಯವಿದೆ. ಎಷ್ಟೋಬಾರಿ ಒಂದು ದೇಶದ, ರಾಜ್ಯದ, ಜಿಲ್ಲೆಯ ಭೌಗೋಳಿಕ ವಿವರಗಳು ಅಲ್ಲಿನ ಸಾಂಸ್ಕೃತಿಕ ಲೋಕವನ್ನು ನಿರ್ಧರಿಸುತ್ತಿರುತ್ತವೆ, ನಿಯಂತ್ರಿಸುತ್ತಿರುತ್ತವೆ. ಹಾಗಾಗಿ ಭೌಗೋಳಿಕ ವಿವರಗಳನ್ನು ಸೂಕ್ಷ್ಮವಾಗಿ ಗ್ರಹಿಸದೆ, ವಿವರಿಸಿಕೊಳ್ಳದೆ ಅಲ್ಲಿನ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವುದು ಸ್ವಲ್ಪ ಕಷ್ಟ ಸಾಧ್ಯ. ಅದೇ ರೀತಿಯಾಗಿ ಕೊಪ್ಪಳ ಜಿಲ್ಲೆಯ ಸಂಕ್ಷೇಪ್ತ ಪರಿಚಯವನ್ನು ಈ ಕೆಳಗಿನಂತೆ ಮಾಡಲಾಗಿದೆ.

ತಿರುಳ್ಗನ್ನಡ ನಾಡಿನ ವಿದಿತ ಮಹಾಕೊಪಣನಗರದ ಸಂಸ್ಕೃತಿ ಕ್ರಿ.ಪೂ.2000 ವರ್ಷಗಳಿಂದ ವಿವಿಧ ಹಂತಗಳಲ್ಲಿ ವೈವಿಧ್ಯಮಯವಾಗಿ ಹರಿದುಬಂದಿದೆ. ಶಿಲಾಯುಗದ ಸಂಸ್ಕೃತಿ ಕ್ರಿ.ಪೂ. 2000 ವರ್ಷಗಳಿಂದ ಇತಿಹಾಸದ ಕಾಲದವರೆಗೂ ಹರಿದುಬಂದಿರುವ ವಿಕಾಸ ಕ್ರಮವು ಅದ್ಭುತವಾಗಿದೆ. ಪ್ರಸ್ತುತ ಗವಿಮಠಬೆಟ್ಟದ ಗುಡ್ಡದಲ್ಲಿ ಕಂಡುಬರುವ ಬಂಡೆ ಆಸರೆಯಲ್ಲಿ ಅರಳಿದ ಪಕ್ಷಿಗಳ ರೇಖಾಚಿತ್ರ, ಕೆಮ್ಮಣ್ಣು ಬಣ್ಣದ ರೇಖೆಯಲ್ಲಿ ತಾನು ಕಂಡ ವಿವಿಧ ಪ್ರಾಣಿಗಳ ಚಿತ್ರ, ಕೆಮ್ಮಣ್ಣು ಬಣ್ಣದಲ್ಲಿ ಕಾಣುವ ಸಾಮಾಜಿಕ ಜೀವನವನ್ನು ನೆನಪಿಸುವ ಚಿತ್ರ. ವಿವಿಧ ಬಣ್ಣಗಳಿಂದ ಕೂಡಿದ ಹುಲಿ ಮತ್ತು ಗೂಳಿಗಳೆರಡರ ಚಿತ್ರ, ಬೇಸಾಯಕ್ಕೆ ಅಣಿಗೊಳಿಸಿದ ಹರವುಗಳು, ನಿತ್ಯ ಜೀವನಕ್ಕೆ ಬಳಸಿದ ಕಲ್ಲಿನ ಉಪಕರಣ, ಕೊಡಲಿ, ಬಾಚಿ, ತಾಮ್ರದ ಉಪಕರಣಗಳು, ನಿದರ್ಶನಗಳಾಗಿ ಕಂಡುಬರುತ್ತವೆ.

ಕೊಪಣಾಚಲವು ಇಂದಿನ ಶ್ರಮವಣಬೆಳಗೊಳಕ್ಕಿಂತ ಪೂರ್ವದಲ್ಲಿ ಜೈನರ ಅತ್ಯಂತ ಪವಿತ್ರವಾದ ಯಾತ್ರಾ ಸ್ಥಳವಾಗಿತ್ತು. ಆದರೆ ದೊಡ್ಡ ಬೆಟ್ಟದಲ್ಲಿ ಗೊಮ್ಮಟನ ವಿಗ್ರಹ ಪ್ರತಿಷ್ಠಾಪನೆ ಆದ ನಂತರದಲ್ಲಿ ಕೊಪಣ ತನ್ನ ಪ್ರಸಿದ್ಧಿಯನ್ನು ಕಳೆದುಕೊಂಡಿತು. ಕೋಪಣನಗರವು ಜೈನರ ಪವಿತ್ರ ತೀರ್ಥಕ್ಷೇತ್ರ ಎಂಬ ಖ್ಯಾತಿಯೊಂದಿಗೆ ಕುಕನೂರು, ಇಟಗಿ, ಮಾದಿನೂರು, ಅಳವಂಡಿ, ಮುಧೋಳ, ತಳಕಲ್ಲು ಎಂಬ ಅಗ್ರಹಾರಗಳನ್ನು ಹೊಂದಿತ್ತು. ಧಾರ್ಮಿಕ ಕ್ಷೇತ್ರವಾಗಿ ಮತ್ತು ವಿದ್ಯಾದಾನ ಮಾಡುವ ವಿದ್ಯಾಕೇಂದ್ರವಾಗಿ ಈ ಸ್ಥಳವು ಮಹತ್ವ ಪಡೆದುಕೊಂಡಿತು. ಬಾದಾಮಿ ಚಾಲುಕ್ಯರ" ಪ್ರಖ್ಯಾತ ದೊರೆ ಎರಡನೆಯ

ಪುಲಕೇಶಿಯ ಕಾಲದಲ್ಲಿ ಚೀನಾ ಪ್ರವಾಸಿಗ ಹುಯನ್‌ತ್ಸಾಂಗನು ಈ ಪ್ರದೇಶಕ್ಕೆ ಭೇಟಿ ನೀಡಿ, ಇಲ್ಲಿಯ ಜನರನ್ನು ಕಂಡು "ಇಲ್ಲಿಯ ಕನ್ನಡಿಗರು ವಿನಯಶೀಲರೂ ಪ್ರಾಮಾಣಿಕರೂ" ಎಂಬ ಉಲ್ಲೇಖವನ್ನು ತನ್ನ ಪ್ರವಾಸ ಪುಸ್ತಕದಲ್ಲಿ ಬರೆಯುತ್ತಾನೆ. ಆಗಿನ ಕಾಲದಲ್ಲಿಯೆ ಪವಿತ್ರ ತೀರ್ಥಕ್ಷೇತ್ರವಾಗಿ ವ್ಯಾಪಾರದ ಪ್ರಮುಖ ಕೇಂದ್ರಸ್ಥಾನವಾಗಿ ಪ್ರಖ್ಯಾತಿಯನ್ನು ಪಡೆದುಕೊಂಡ ಹೆಗ್ಗಳಿಕೆ ಈ ಜಿಲ್ಲೆಗಿದೆ. ಬೌದ್ಧ, ಜೈನ, ವೈದಿಕ, ವೀರಶೈವ ಹಾಗೂ ಮುಸ್ಲಿಂ ಹೀಗೆ ಅನೇಕ ಧರ್ಮಗಳ ಸಮನ್ವಯ ಕೇಂದ್ರವಾಗಿ ವೈಚಾರಿಕ ಆಂದೋಲನ ಮಾಡುತ್ತಾ ಸಾಹಿತ್ಯ ಸೃಷ್ಟಿ ಮತ್ತು ಕನ್ನಡ ನಾಡಿನ ಸಂಸ್ಕೃತಿಯ ಕುರುಹಾಗಿ ಬಹಳಷ್ಟು ರೀತಿಯಲ್ಲಿ ಕಾಣಿಕೆ ಸಲ್ಲಿಸುತ್ತಾ ಇಂದಿಗೂ ತನ್ನದೆ ಆದ ಮಹತ್ವವನ್ನು ಉಳಿಸಿಕೊಂಡು ಬಂದಿದೆ. ಕೊಪಣ, ಕುಪಣ, ಕಪಣ, ಕೊಪಣನಗರ, ಕೊಪಣಪುರ, ಕೊಪಣತೀರ್ಥ, ವಿದಿತ ಮಹಾಕೊಪಣನಗರ, ಕುಪ್ಪಂ, ತಿರುಳ್ಗನ್ನಡ ನಾಡು ಹೀಗೆ ಅನೇಕ ಉಲ್ಲೇಖಗಲಿಂದ ಹೆಸರುವಾಸಿಯಾಗಿರುವ ಕೊಪ್ಪಳ ಪ್ರದೇಶವು ಬಹುಪ್ರಾಚೀನತೆಯನ್ನು ಹೊಂದಿದೆ.

ಪ್ರಸ್ತುತ ನಗರದ ಪಶ್ಚಿಮ ದಿಕ್ಕಿನಲ್ಲಿ ಎತ್ತರವಾದ ಗುಡ್ಡಗಳ ಶ್ರೇಣಿಯಿದೆ. ಇದರಲ್ಲಿನ ಪಾಲ್ಕಿಗುಂಡು ಅಶೋಕನ ಕಾಲದಿಂದಲೂ ವಿಶಿಷ್ಟತೆಯನ್ನು ಉಳಿಸಕೊಂಡು ಬಂದಿದೆ. ಇದರ ನಡೆದ, ಈ ಪ್ರದೆಶದ ಜನರ ಹೋರಾಟದ ಫಲವಾಗಿ, ಮತ್ತೆ ಸೆಪ್ಟಂಬರ್ 24, 1997ರಂದು ಹೊಸ ಜಿಲ್ಲೆಯಾಗಿ ಉದಯವಾಯಿತು. ದೇಶಕ್ಕೆ 1947ರ ಆಗಷ್ಟ 15ರಂದು ಸ್ವಾತಂತ್ರ್ಯ ಸಿಕ್ಕರೂ ಈ ಪ್ರದೇಶದ ಜನಕ್ಕೆ ಹೈದ್ರಾಬಾದ್ ನಿಜಾಮರ ರಾಜ್ಯ ಶಾಹಿಯಿಂದ ಮುಕ್ತಿ ದೊರೆತಿರಲಿಲ್ಲ. ಈ ಭಾಗದ ಜನರು ತಮ್ಮ ಸ್ವಾತಂತ್ರ್ಯಕ್ಕಾಗಿ ನಿರಂತರ ಹೋರಾಟ ಮಾಡಿದ ಫಲವಾಗಿ 1948 ಸೆಪ್ಟೆಂಬರ್ 18ರಂದು ಈ ಪ್ರದೇಶಕ್ಕೆ ನಿಜಾಮರಿಂದ ಸ್ವಾತಂತ್ರ್ಯ ಸಿಕ್ಕಿತು. ಹೀಗಾಗಿ ಈ ಭಾಗದ ಜನರಿಗೆ ಎರಡು ಸ್ವಾತಂತ್ರ್ಯ ಹೋರಾಟಗಳಿರುವುದನ್ನು ಮರೆಯುವಂತಿಲ್ಲ.

**ಭೌಗೋಳಿಕ ಸಂಗತಿಗಳು:** ಆದಿಮಾನವನ ಕಾಲದಿಂದ ಹಿಡಿದು ಇಲ್ಲಿಯವರೆಗೆ ಕೊಪ್ಪಳದ ಸಾಂಸ್ಕೃತಿಕ ಪರಂಪರೆಯನ್ನು ಗುರುತಿಸಬಹುದು. ಜಾಗತೀಕರಣದ ಹಿನ್ನೆಲೆಯಲ್ಲಿ ಒಂದು ಪ್ರದೇಶದ ಸಾಸಂಕೃತಿಕ ವಿವರಗಳು ಮತ್ತು ಭೌಗೋಳಿಕ ಸಂಗತಿಗಳು ಅಗತ್ಯವೆನಿಸಿದರೂ ಅವುಗಳ ದಾಖಲೀಕರಣ ಈ ಸಂದರ್ಭದಲ್ಲಿ ಬಹಳ ಮಹತ್ವದ್ದಾಗಿ ಕಂಡುಬರುತ್ತದೆ. ಏಕೆಂದರೆ ಒಂದು ಪ್ರದೇಶದ ಜನರ ಬಗೆಗಿನ ಸಾಂಸ್ಕೃತಿಕ ಅಂಶಗಳನ್ನು ಮತ್ತು ಬಹುಮುಖಿ ಆಯಾಮಗಳನ್ನು ಕುರಿತು ಸರಿಯಾದ ದಿಸೆಯಲ್ಲಿ ಅರ್ಥಮಾಡಿಕೊಂಡಾಗ ಮಾತ್ರ, ಆ ಪ್ರದೇಶದ ಜನರ ಜೀವನ ವಿಧಾನ ಮತ್ತು ಆ ಕುರಿತ ಪ್ರಕ್ರಿಯೆಗಳನ್ನು ಸರಿಯಾಗಿ ರೂಪಿಸಬಹುದು. ಈ ನಿಟ್ಟಿನಲ್ಲಿ ಕೊಪ್ಪಳ ಜಿಲ್ಲೆಯ ಬಾಲಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಕುರಿತು ಮಾಡಿರುವ ಪ್ರಸ್ತುತ ಅಧ್ಯಯನದಲ್ಲಿ ಜಿಲ್ಲೆಯ

ಭೌಗೋಳಿಕ ಸಂಗತಿಗಳನ್ನು ಮತ್ತು ನೈಸರ್ಗಿಕ ಸಂಪನ್ಮೂಲಗಳನ್ನು ಅರಿತುಕೊಳ್ಳುವುದು ಉಚಿತವೆನಿಸುತ್ತದೆ.

ಒಂದು ಪ್ರದೇಶದ ಸಂಸ್ಕೃತಿ, ಆಚರಣೆ, ಸಂಪ್ರದಾಯ, ನಂಬಿಕೆ ಮತ್ತು ರೀತಿನೀತಿಗಳನ್ನು ತಿಳಿಯಬೇಕಾದರೆ ಮೊದಲು ಆ ಪ್ರದೇಶದ ಭೌಗೋಳಿಕ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಸಾಮಾನ್ಯವಾಗಿ ಒಂದು ಪ್ರದೇಶದ ವಿಶಿಷ್ಟತೆಯು ಅಲ್ಲಿನ ಸಂಸ್ಕೃತಿ. ಭೂಪ್ರದೇಶ, ಜನರ ಆರ್ಥಿಕ ಚಟುವಟಿಕೆಗಳು, ನದಿ, ಹಳ್ಳ, ಗುಡ್ಡ ಬೆಟ್ಟ, ಪರಿಸರ ಮತ್ತು ಜನರ ಭಾಷೆ ಹಾಗೂ ಸಾಮಾಜಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ ಅಂಶಗಳನ್ನು ಅವಲಂಬಿಸಿರುತ್ತದೆ. ಈ ನೆಲೆಯಲ್ಲಿ ಆ ಪ್ರದೇಶದ ಭೌಗೋಳಿಕ ಅಂಶಗಳು ಪ್ರಮುಖವಾಗಿ ನಿಲ್ಲುತ್ತವೆ. ಹಾಗಾಗಿ ಈ ಜಾಡಿನಲ್ಲಿ ಸರಿಯಾದ ಲಕ್ಷ್ಯವನ್ನು ವಹಿಸಿದಲ್ಲಿ ನಮ್ಮ ಅಧ್ಯಯನದ ಸಫಲತೆಯನ್ನು ಕಂಡುಕೊಳ್ಳಬಹುದು.

ಕೊಪ್ಪಳ ಜಿಲ್ಲೆಯು ನಾಲ್ಕು ತಾಲ್ಲೂಕುಗಳನ್ನು ಒಳಗೊಂಡಿದ್ದು ಪ್ರಾಗೈತಿಹಾಸಿಕ ಕಾಲಘಟ್ಟದಿಂದ ತನ್ನದೆ ಆದ ಸಂಸ್ಕೃತಿಕ ಮಹತ್ವವನ್ನು ಹೊಂದಿರುವ ಈ ಪ್ರದೇಶದ ಚರಿತ್ರೆಯು ಕುತೂಹಲಕಾರಿಯಾದ ಅಂಶವನ್ನು ಬಿಂಬಿಸುವುದಾಗಿದೆ. ಈ ಪ್ರದೇಶವು ರಾಯಚೂರು ಜಿಲ್ಲೆಯ ವ್ಯಾಪ್ತಿಗೆ ಒಳಪಟ್ಟಿದ್ದಾಗ ಇಲ್ಲಿಯ ಜನಸಾಮಾನ್ಯರಿಗೆ ತುಂಬಾ ತೊಂದರೆಯಾಗಿತ್ತು. ಯಾವುದೆ ಸಣ್ಣಪುಟ್ಟ ಕೆಲಸಗಳಿಗಾಗಿ ದೂರದ ಪ್ರಯಾಣ ಮಾಡಬೇಕಾಗಿದ್ದಿತು. ಕೊಪ್ಪಳ ಪ್ರದೇಶವು ಜಿಲ್ಲೆಯಾದಾಗಿನಿಂದ ಇಲ್ಲಿಯ ಜನರಿಗೆ ಅನುಕೂಲವಾಗಿದೆ. ಪ್ರಸ್ತುತ ಕನ್ನಡನಾಡಿನ ಬಳ್ಳಾರಿ, ಗದಗ, ರಾಯಚೂರು ಮತ್ತು ಬಾಗಲಕೋಟೆ ಜಿಲ್ಲೆಗಳ ಮಧ್ಯೆ ಜಿಲ್ಲಾ ಕೇಂದ್ರ ಸ್ಥಳವಾದ ಇದು ಪ್ರಾಚೀನ ಪರಂಪೆಯನ್ನು ಹೊಂದಿದ್ದು, ಕವಿರಾಜಮಾರ್ಗಕಾರ ಈ ಪ್ರದೇಶವನ್ನು 'ತಿರುಳ್ಗನ್ನಡ ನಾಡು' ಎಂದು ಬಣ್ಣಿಸಿದ್ದಾನೆ.

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲ್ಲೂಕಿನ ಇಟಗಿಯ ಮಹದೇವ ದೇವಾಲಯವು 'ದೇವಾಲಯಗಳ ಚಕ್ರವರ್ತಿ' ಎಂದೆ ಪ್ರಸಿದ್ಧವಾಗಿದೆ. ಇದೇ ತಾಲ್ಲೂಕಿನ ಕುಕನೂರು 'ಕುಂತಲಪುರ'ವೆಂದು ಖ್ಯಾತಿ ಹೊಂದಿದೆ. ಕುಷ್ಟಗಿ ತಾಲ್ಲೂಕಿನ 'ಪುರ'ದಲ್ಲಿ 'ಕೋಟಿಲಿಂಗ'ಗಳಿದ್ದು, ನೋಡುಗರ ಕಣ್ಮನ ಸೆಳೆಯುತ್ತವೆ. ಹನುಮಸಾರದ 'ಚಂದಾಲಿಂಗ ದೇವಸ್ಥಾನ'ವು ಹಲವಾರು ಪರಿವಾರ ದೈವಗಳನ್ನು ತನ್ನ ಪ್ರದೇಶದಲ್ಲಿ ಹೊಂದಿದ್ದು, ಒಂದು ಕಾಲಕ್ಕೆ ತೀರ್ಥ ಕ್ಷೇತ್ರವಾಗಿತ್ತೆಂದು ತಿಳಿದುಬರುತ್ತದೆ. ಕುಕನೂರಿನ ಮಹಾಮಾಯೆ ಧಾರ್ಮಿಕ ಶಕ್ತಿ ಪೀಠದ ಕೇಂದ್ರಸ್ಥಾನವಾಗಿದೆ. ಇಲ್ಲಿ ಮಹಾಮಾಯೆ ಮತ್ತು ಕಾಳಿಕಾ ಎಂಬ ಶಕ್ತಿಗಳಿರುವುದು ಹಾಗೂ ಶಿವ ಕ್ಷೇತ್ರ ಪಾಲಕನಾಗಿರುವುದು ಜಿಲ್ಲೆಯ ವಿಶಿಷ್ಟತೆಗೆ ಮೆರುಗು ನಿಡುತ್ತದೆ.

ಸ್ಥಳೀಯವಾಗಿ ಇಲ್ಲಿಯ ಜನರು ಹೆಚ್ಚಾಗಿ ಎಣ್ಣೆಗೆಂಪು ಮತ್ತು ಕಪ್ಪು ಕಂದು ಬಣ್ಣದವರಾಗಿದ್ದಾರೆ. ಸಾಮಾನ್ಯವಾಗಿ ಗಂಡಸರು ಐದೂವರೆ ಅಡಿಗಳಿಂದ ಆರು ಅಡಿಗಳವರೆಗೆ ಎತ್ತರವನ್ನು ಉಳ್ಳವರಾಗಿದ್ದಾರೆ. ಮಹಿಳೆಯರು ಐದರಿಂದ ಆರು, ಆರೂವರೆ ಅಡಿಗಳವರೆಗೆ ಎತ್ತರವನ್ನು ಹೊಂದಿದ್ದಾರೆ. ಹೆಚ್ಚು ಜನರು ಕೋಲು ಮುಖವನ್ನು ಹೊಂದಿದ್ದು ಬಹುಸುಂದರವಾಗಿ ಕಾಣುತ್ತಾರೆ. ಇತ್ತೀಚೆಗೆ ಆಧುನಿಕತೆಯ ಎಲ್ಲ ಮಗ್ಗಲುಗಳು ಈ ಪ್ರದೇಶದ ಜನರಲ್ಲಿಯೂ ಅನೇಕ ಬದಲಾವಣೆಗಳನ್ನುಂಟು ಮಾಡಿದೆ.

ಜಿಲ್ಲೆಯ ಮಳೆಯಾಶ್ರಿತ ಬಯಲು ಪ್ರದೇಶವಾದ್ದರಿಂದ ಇಲ್ಲಿಯ ಜನರು ಹೆಚ್ಚಾಗಿ ಊಟಕ್ಕೆ ಬಳಸುವ ಆಹಾರ ಧಾನ್ಯಗಳಲ್ಲಿ ಜೋಳವು ಪ್ರಮುಖವಾಗಿ ಕಂಡುಬರುತ್ತದೆ. ತೊಗರಿ, ಹೆಸರು, ಅಲಸಂದಿ ಇತರೆ ಪೂರಕ ಆಹಾರಗಳಾಗಿವೆ. ಗೋಧಿಯ ಬಳಕೆ ಕಡಿಮೆಯಾಗಿದೆ. ಭತ್ತವನ್ನು ಯಥೇಚ್ಚವಾಗಿ ಬೆಳೆಯುವುದರಿಂದ ಅನ್ನದ ಬಳಕೆಯನ್ನು ಹೆಚ್ಚಾಗಿ ಕಾಣುತ್ತೇವೆ. ಯಲಬುರ್ಗಾ ಮತ್ತು ಕುಷ್ಟಗಿ ಪ್ರದೇಶದಲ್ಲಿ ಜೋಳದ ಬಳಕೆ ಹೆಚ್ಚು. ಎಣ್ಣೆ ಕಾಳುಗಳಾದ ಶೇಂಗಾ, ಅಗಸಿ, ಗುರೆಳ್ಳು, ಎಳ್ಳುಗಳಂತಹ ಪದಾರ್ಥಗಳನ್ನು ಆಹಾರದಲ್ಲಿ ಬಳಸುತ್ತಾರೆ. ತುಸು ಖಾರದ ಊಟ ಅವಶ್ಯವಾಗಿದೆ. ಅಲ್ಲಲ್ಲಿ ತರಕಾರಿ ಮತ್ತು ಸೊಪ್ಪುಗಳನ್ನು ಬೆಳೆದು ಆಹಾರಕ್ಕೆ ಉಪಯೋಗಿಸುತ್ತಾರೆ. ಮಾಂಸಾಹಾರ ಭಾಗಶಃ ಇದ್ದು ಕೋಳಿ, ಕುರಿ, ಮೀನು, ಹಂದಿ ಮತ್ತು ದನದ ಮಾಂಸವನ್ನು ಬಳಸುತ್ತಾರೆ.

ಈ ಭಾಗದಲ್ಲಿ ಕಲ್ಲು ಗಣಿಗಳು ಹೆಚ್ಚಾಗಿರುವುದರಿಂದ, ಕಲ್ಲುಗಳು ಯಥೇಚ್ಛವಾಗಿ ದೊರೆಯುವುದರಿಂದ ಬಹುಪಾಲು ಮನೆ, ಗುಡಿಗುಂಡಾರ, ಕಟ್ಟೆಗಳು ಕಲ್ಲಿನಿಂದ ನಿರ್ಮಾಣಗೊಂಡಿವೆ. ಮನೆಗಳ ವಿನ್ಯಾಸವು ಅವರವರ ಆರ್ಥಿಕತೆಗೆ ತಕ್ಕಂತೆ ನಿರ್ಮಾಣಗೊಳ್ಳುತ್ತಿದೆ. ಈ ಭಾಗದಲ್ಲಿ ಸಿಗುವ ಹಾಳು ಮಣ್ಣು ಮತ್ತು ಕೋಟೆಯ ಮುಂಭಾಗದಲ್ಲಿ ಸಿಗುವ ಮಣ್ಣು ಹೆಚ್ಚು ಗಟ್ಟಿಯಾಗಿದ್ದರಿಂದ ಇದನ್ನೆ ಮನೆಯ ನಿರ್ಮಾಣಕ್ಕೆ ಬಳಕೆ ಮಾಡುತ್ತಾರೆ. ಜೊತೆಗೆ ಸ್ವಂತ ಭೂಮಿಯಲ್ಲಿ ದೊರೆಯುವ ಗಿಡ, ಮರಗಳನ್ನು ಕಡಿದು ಕೊರೆಯಿಸಿ ಇವುಗಳನ್ನೆ ಮನೆಯ ತೊಲೆ ಮತ್ತು ಜಂತಿಯನ್ನಾಗಿ ಬಳಸುವುದನ್ನು ಕಾಣುತ್ತೇವೆ.

**ನೈಸರ್ಗಿಕ ಸಂಪನ್ಮೂಲಗಳು:** ಮಾನವ ಇತಿಹಾಸದಲ್ಲಿ ನೈಸರ್ಗಿಕ ಸಂಪನ್ಮೂಲಗಳ ಪಾತ್ರ ಮಹತ್ವವಾಗಿದೆ. ಆದಿಮಾನವನಿಂದ ಹಿಡಿದು ಇಂದಿನ ಆಧುನಿಕ ಕಾಲದ ಮಾನವನವರೆಗೆ ನೈಸರ್ಗಿಕ ಸಂಪತ್ತುಗಳು ಅತ್ಯಂತ ನಿರ್ಣಾಯಕ ಪಾತ್ರವನ್ನು ವಹಿಸುತ್ತವೆ. ಅವನ ಹುಟ್ಟು ಬೆಳವಣಿಗೆ ಹಾಗೂ ಸಾವುಗಳೆಲ್ಲವೂ ಅವನು ಬಳಸುವ ಅಥವಾ ಬಳಸಲ್ಪಡಲು ಸಾಧ್ಯವಾಗಬಹುದಾದ ನೈಸರ್ಗಿಕ ಸಂಪತ್ತುಗಳಿಂದ ಪ್ರಭಾವಿತವಾಗುತ್ತವೆ. ಆದಿಮಾನವನು ತನ್ನ ಆಶ್ರಯಕ್ಕೆ ಕಾಡನ್ನು ಆಶ್ರಯಿಸಿದ್ದು, ಅನ್ನ

ಬೇಯಿಸುವುದಕ್ಕಾಗಿ ಬೆಂಕಿಯನ್ನು ಅನ್ವೇಷಿಸಿದ್ದು, ಮತ್ತು ತನ್ನ ರಕ್ಷಣೆಗಾಗಿ ಕಲ್ಲಿನಂಥಹ ಆಯುಧಗಳನ್ನು ಬಳಸಿದ್ದು ಈ ಎಲ್ಲ ವಿಷಯಗಳು ಮಾನವನ ನಾಗರೀಕತೆ ಮತ್ತು ಸಂಸ್ಕೃತಿಗಳು ಹೇಗೆ ನೈಸರ್ಗಿಕ ಸಂಪನ್ಮೂಲಗಳಿಂದ ಪ್ರಭಾವಿತವಾಗಿವೆ ಎಂಬುದಕ್ಕೆ ಸಾಕ್ಷಿಯಾಗಿ ನಿಲ್ಲುತ್ತವೆ.

ಜಿಲ್ಲೆಯ ಪೂರ್ವಕ್ಕೆ ಮೈದಳೆದ ತುಂಗಭದ್ರಾ ನದಿ ನೈಸರ್ಗಿಕ ಸಂಪನ್ಮೂಲಗಳ ದೃಷ್ಟಿಯಿಂದ ಜಿಲ್ಲೆಗೊಂದು ವರದಾನವಾಗಿದೆ. ಜೊತೆಗೆ ಲಭ್ಯತೆಯ ದೃಷ್ಟಿಯಿಂದ ರಾಜ್ಯದ ಪ್ರಮುಖ ಜಿಲ್ಲೆಗಳಿಗಿಂತ ಒಂದಾಗಿ ನಿಲ್ಲುತ್ತದೆ. ಸುಮಾರು ವರ್ಷಗಳ ಅತೀ ಪುರಾತನವಾದ ಇತಿಹಾಸವನ್ನು ಹೊಂದಿರುವ ಜಿಲ್ಲೆಯ ಹಿರೇಬೆಣಕಲ್, ಆನೆಗೊಂದಿ, ಮಲ್ಲಾಪುರ, ನಾರಾಯಣ ಪೇಟೆ, ಕೊಪ್ಪಳದ ಪಾಲ್ಕಿಗುಂಡು, ಗವಿಮಠ, ಮಳೆಮಲ್ಲಪ್ಪನ ಗುಡ್ಡ, ಆದಿಮಾನವನ ನಾಗರೀಕತೆಯ ಪೂರ್ವ ದೆಸೆಯಲ್ಲಿ ಗವಿಮಠ ಗುಡ್ಡವಿದ್ದು, ದಕ್ಷಿಣಕ್ಕೆ ಬಹದ್ದೂರಬಂಡೆ ಕೋಟೆ ಇದೆ. ಗವಿಮಠದ ಗುಡ್ಡದಲ್ಲಿ ನಾಲ್ಕು ಗವಿಗಳಿದ್ದು, ಉತ್ತರಾಭಿಮುಖವಾಗಿರುವ ಗವಿಯ ಮುಂದುಗಡೆಯಲ್ಲಿ ಮಠವನ್ನು ಮಾಡಲಾಗಿದೆ. ಇಲ್ಲಿ ಈವರೆಗೆ ಹದಿನೆಂಟು ಜನ ಮಹಾಸ್ವಾಮಿಗಲು ಪಟ್ಟಾಧಿಕಾರವನ್ನು ವಹಿಸಿಕೊಂಡಿದ್ದಾರೆ. ಇದು ಸುಮಾರು 800 ವರ್ಷಗಳ ಹಿಂದಿನದೆಂದು ಚರಿತ್ರೆಯಿಂದ ತಿಳಿದುಬರುತ್ತದೆ. ಹಾಗಾಗಿಯೆ ಈ ಮಠ ದೈವವು ಜಿಲ್ಲೆಯಲ್ಲಿಯೆ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಈ ಗವಿಯ ಉತ್ತರ ದಿಕ್ಕಿನ ಬಂಡಿಗಲ್ಲಿನ ಮೇಲೆ ಜೈನ ತೀರ್ಥಂಕರರ ಚಿತ್ರಗಳನ್ನು ಕೆತ್ತಲಾಗಿದೆ. ಪ್ರಮುಖವಾಗಿ ಇಲ್ಲಿ ನಾಲ್ಕು ಗವಿಗಳು ಮತ್ತು 3ನೇ ಶತಮಾನದ ನಂತರದಲ್ಲಿ ಅಶೋಕನ ಶಾಸನಗಳು ಕಂಡುಬರುವುದರಿಂದ ಇದು ಒಂದಾನೊಂದು ಕಾಲಕ್ಕೆ ಬೌದ್ಧ ಮತದ ಕೇಂದ್ರವಾಗಿತ್ತೆಂದು ತಿಳಿಯುತ್ತದೆ. ಈ ಪ್ರದೇಶದಲ್ಲಿ 772 ಜೈನ ಬಸದಿಗಳು ಕಂಡುಬರುತ್ತವೆಯಾದ್ದರಿಂದ ಇದು ಜೈನರ ಪವಿತ್ರ ವಾಸಸ್ಥಾನ ಹಾಗೂ ತೀರ್ಥಕ್ಷೇತ್ರವಾಗಿಯು ಪ್ರಖ್ಯಾತಿ ಹೊಂದಿತ್ತು. ಪ್ರಮುಖವಾಗಿ ಈ ಪ್ರದೇಶವು ಮೊದಲು ಬೌದ್ಧ, ಎರಡನೆಯದಾಗಿ ಜೈನ, ಮೂರನೆಯದಾಗಿ ವೀರಶೈವ, ನಂತರ ಮುಸ್ಲಿಂ ಧರ್ಮಗಳ ಸಮನ್ವಯ ಕೇಂದ್ರವಾಗಿ ಬಿಂಬಿತವಾಗಿದೆ. ಹಾಗಾಗಿ ಇಂದಿಗೂ ಈ ಪ್ರದೇಶದಲ್ಲಿ ಗವಿಮಠದಂತೆ ಹಲವಾರು ವೀರಶೈವ ಮಠಗಳು ಸುಸ್ಥಿತಿಯಲ್ಲಿದ್ದು ತಮ್ಮದೇ ಆದ ಮಹತ್ವವನ್ನು ಉಳಿಸಿಕೊಂಡು ಬಂದಿವೆ. ಈ ಹಿನ್ನೆಲೆಯಲ್ಲಿ ಕೊಪ್ಪಳ ಪ್ರದೇಶವು ಹಲವು ಧರ್ಮಗಳ ಪ್ರಮುಖ ನೆಲೆಯಾಗಿದ್ದು, ಇಲ್ಲಿರುವ ದೈವಗಳ ಮೇಲೆ ಆದ ಪರಿಣಾಮವನ್ನು ಸಾಂಸ್ಕೃತಿಕ ನೆಲೆಯಲ್ಲಿ ಅಧ್ಯಯನ ಮಾಡುವುದು ಅವಶ್ಯವೆಂದುಕೊಂಡಿದ್ದೇನೆ.

ಈ ಮುಂಚೆ ಕೊಪ್ಪಳ ಜಿಲ್ಲೆಯು ಕರ್ನಾಟಕದ ರಾಯಚೂರು ಜಿಲ್ಲೆಯಲ್ಲಿ ಸೇರ್ಪಡೆಯಾಗಿತ್ತು. 'ಹುಂಡೆಕಾರ್ ಮತ್ತು ಗದ್ದಿಗೌಡರ್ ಸಮಿತಿಗಳ ಒಮ್ಮತದ ಶಿಫಾರಿಸ್ಸಿನೊಂದಿಗೆ ರಾಜ್ಯದಲ್ಲಿ ಏಳು ಹೊಸ ಜಿಲ್ಲೆಗಳನ್ನಾಗಿ ಮಾಡಲು 1997 ಅಗಷ್ಟ 15ರಂದು ಈ ಸಂಬಂಧವಾಗಿ ಕರ್ನಾಟಕ ಸರಕಾರ ಆದೇಶ

ಹೊರಡಿಸಿತು." ಕೊಪ್ಪಳ, ಯಲಬರ್ಗಾ, ಕುಷ್ಟಗಿ, ಗಂಗಾವತಿ ಎನ್ನುವ ನಾಲ್ಕು ತಾಲ್ಲೂಕುಗಳನ್ನು ಒಳಗೊಂಡಂತೆ 1.8.1998 ರಿಂದ ಕೊಪ್ಪಳ ಜಿಲ್ಲೆ ಸಂಪೂರ್ಣವಾಗಿ ಅಸ್ತಿತ್ವಕ್ಕೆ ಬಂದಿತು. ಹೈದ್ರಾಬಾದ ಸಂಸ್ಥಾನದ ಪ್ರಧಾನಿ ಹಾಗೂ ಕೊಪ್ಪಳ ಜಿಲ್ಲೆಯ ಜಹಗೀರ್‌ದಾರ ಸಾಲಾರ ಜಂಗನವಾಬ್ ಮೀರ್ ತುರಾಬಲಿಖಾನ್‌ನು ಕ್ರಿ.ಶ. 1891ರಲ್ಲಿ ಕೊಪ್ಪಳ ಮತ್ತು ಯಲಬುರ್ಗಾ ತಾಲ್ಲೂಕುಗಳನ್ನು ಸೇರಿಸಿ ಕೊಪ್ಪಳವನ್ನು ಜಿಲ್ಲಾ ಕೇಂದ್ರವನ್ನಾಗಿ ಮಾಡಿದ್ದನು. ಆಗಿನಿಂದ ಸ್ವಾತಂತ್ರ್ಯ ನಂತರದ 1950ರ ವರೆಗೆ ಕೊಪ್ಪಳ ಜಿಲ್ಲೆಯು ಅಸ್ಥಿತ್ವದಲ್ಲಿತ್ತು. ಸ್ವಾತಂತ್ರ್ಯ ನಂತರ ರಾಯಚೂರು ಜಿಲ್ಲೆಗೆ ಸೇರ್ಪಡೆಯಾದವು.

**ಕೊಪ್ಪಳ ತಾಲ್ಲೂಕು**

ಎಡದೊರೆಯ ನಾಡು, ತರುಳ್ಗನ್ನಡ ನಾಡು ಎಂದೆ ಪ್ರಸಿದ್ಧವಾಗಿರುವ ಈ ತಾಲ್ಲೂಕು 1364.25 ಚ.ಕಿ.ಮೀ. ವಿಸ್ತೀರ್ಣ ಹೊಂದಿದೆ. 2001ರ ಜನಗಣತಿಯ ಪ್ರಕಾರ ಕೊಪ್ಪಳ ತಾಲ್ಲೂಕು 3,14,051 ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ಪರಿಶಿಷ್ಟರ ಸಂಖ್ಯೆ 77,918 ರಷ್ಟಿದೆ. ಈ ಭಾಗದ ಜನರು ಹೆಚ್ಚು ಕೃಷಿಯನ್ನು ಅವಲಂಬಿಸಿದ್ದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಕೃಷಿ ಕೆಲಸಗಾರರು ಇದ್ದಾರೆ. ಬಹುಮುಖ್ಯವಾಗಿ ಈ ಪ್ರದೇಶವು ಬಯಲು ಸೀಮೆಯಾಗಿದ್ದು, ದಟ್ಟವಾದ ಬೆಟ್ಟ ಗುಡ್ಡಗಳನ್ನು ಹೊಂದಿದೆ. ತಾಲ್ಲೂಕಿನ ಸಾಕ್ಷರರ ವಿವರವನ್ನು ನೋಡಿದಾಗ 57.8% ರಷ್ಟು ಸಾಕ್ಷರತೆಯನ್ನು ಹೊಂದಿದೆ. ಈ ಪ್ರಮಾಣ ಜಿಲ್ಲೆಯಲ್ಲಿಯೇ ಅತಿ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು.

ಈ ಪ್ರದೇಶದ ರೇಖಾಂಶವು 75–76 ಆಗಿದೆ. ಅಕ್ಷಾಂಶವು 15–15 ಆಗಿದೆ. ಸಮುದ್ರ ಮಟ್ಟದಿಂದ ಸುಮಾರು 573.04 ಮೀಟರ್ ಎತ್ತರದಲ್ಲಿದ್ದು, ಸುತ್ತುವರೆದ ಕಲ್ಲುಗುಡ್ಡಗಳಿಂದಾಗಿ ಪ್ರದೇಶದಲ್ಲಿ ಬಿಸಿಲು ಪ್ರಖರವಾಗಿರುತ್ತದೆ. ಬೇಸಿಗೆಯಲ್ಲಿ ಗರಿಷ್ಠ ಸರಾಸರಿ ಉಷ್ಣತೆ 39 ಡಿಗ್ರಿ ಸೆಲ್ಸಿಯಷ್ಟು ಇರುತ್ತದೆ. ಗರಿಷ್ಠ 43 ಡಿಗ್ರಿ ಸೆಂಟಿಗ್ರೇಡ್‌ವರೆಗೆ, ಮೇ ತಿಂಗಳಲ್ಲಿ 9 ಡಿಗ್ರಿ ಸೆಂಟಿಗ್ರೇಡ್‌ಗೆ ಇಳಿದ ದಾಖಲೆಗಳಿವೆ. ಕನಿಷ್ಠ ಸರಾಸರಿ ತಾಪಮಾನವು 17.50 ಆಗಿರುತ್ತದೆ. ಈ ಉಷ್ಣತಾ ಪ್ರದೇಶವು ಜನ ವಾಸಯೋಗ್ಯವಾದ ತಾಪಮಾನವನ್ನು ಹೊಂದಿದೆ ಎಂದು ಹವಾಮಾನ ತಜ್ಞರು ಅಭಿಪ್ರಾಯ ಪಡುತ್ತಾರೆ.



ಮಳೆಯ ಪ್ರಮಾಣವು ಇಲ್ಲಿ ಕಡಿಮೆಯೆಂದೆ ಹೇಳಬಹುದು. ಯಾಕೆಂದರೆ ಇದು ಬಯಲು ಪ್ರದೇಶವಾಗಿದೆ. ಇಲ್ಲಿ ನೈರುತ್ಯ ಮಾರುತಗಳು ಮಳೆ ಸುರಿಸುತ್ತವೆ. ತುಂಗಾಭದ್ರಾ ನದಿ ಸ್ವಲ್ಪ ದೂರದಲ್ಲಿದ್ದು ಜಿಲ್ಲೆಗೆ ಇದು ನೀರಿನ ಬಹುಮುಖ್ಯ ಸಂಪನ್ಮೂಲವಾಗಿದೆ. ಮುಂಗಾರು ಹಂಗಾಮು ಸಾಧಾರಣದಿಂದ ಕೂಡಿದ್ದು, ಹಿಂಗಾರು ಸಾಧಾರಣವಾಗಿರುತ್ತದೆ. ಮಳೆಯಾಶ್ರಿತವಾದ ಈ ಪ್ರದೇಶದಲ್ಲಿ ಅಲ್ಪಮಳೆ ಬಯಸುವ ಬೆಳೆಗಳನ್ನು ಬೆಳೆಯಲಾಗುತ್ತದೆ. ಇದರ ಜೊತೆಗೆ ಅಚ್ಚು ಕಟ್ಟು ಭೂಮಿ.

ಎಡದಂಡೆ ನಾಲೆ ನೀರು ಹರಿಯುವ ಭೂಮಿ ಅಲ್ಪ ಪ್ರಮಾಣದಲ್ಲಿದ್ದು, ಅಲ್ಲಿ ಕಬ್ಬು ಮತ್ತು ಭತ್ತದ ಬೆಳೆಗಳನ್ನು ಬೆಳೆಯುವ ವಾತಾವರಣ ಕಂಡುಬರುತ್ತದೆ. ತುಂಗಭದ್ರಾ ನದಿಯ ದಡದಲ್ಲಿರುವ ಹಿರೇಬಗನಾಳ, ಕರ್ಕಿಹ,ಳ್ಳಿ ಹ್ಯಾಟಿ, ಮುದ್ದಾಬಳ್ಳಿ, ಬಚನಳ್ಳಿ ಹೀಗೆ ವಿವಿಧ ಗ್ರಾಮಗಳ ರೈತರು ಹೆಚ್ಚಾಗಿ ಕಡಲೆ, ಸೂರ್ಯಕಾಂತಿ, ಅಲಸಂದಿ, ಬೆಳೆಗಳನ್ನು ಬೆಳೆಯುತ್ತಾರೆ. ತುಂಗಭದ್ರಾ ಎಡದಂಡೆ ಕಾಲುವೆ ಮತ್ತು ಹೆಚ್.ಎಲ್.ಸಿ. ಕಾಲುವೆಗಳಿಂದ ಕೊಪ್ಪಳ ಮತ್ತು ಗಂಗಾವತಿ ತಾಲ್ಲೂಕಿನ ಕೆಲವು ರೈತರಿಗೆ ಹೆಚ್ಚು ಪ್ರಯೋಜನಕಾರಿಯಾಗಿದೆ. ಹಿರೇಹಳ್ಳ ಯೋಜನೆಯಿಂದ ಕಿನ್ನಾಳ ಗ್ರಾಮದ ಸುತ್ತ ಮುತ್ತಲ ಗ್ರಾಮದವರಿಗೆ ಅನುಕೂಲವಾಗಿದೆ.

**ಗಂಗಾವತಿ ತಾಲ್ಲೂಕು**

ಭತ್ತದ ನಾಡು ಎಂದು ಪ್ರಸಿದ್ಧ ಪಡೆದ ಕೊಪ್ಪಳ ಜಿಲ್ಲೆಯ ಗಂಗಾವತಿ ಪ್ರಮುಖ ತಾಲ್ಲೂಕು ಹಾಗೂ ಉಪ ವಿಭಾಗವಾಗಿದೆ. ತಾಲ್ಲೂಕಿನಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶಗಳೆಂದರೆ ಜಿಲ್ಲೆಯಲ್ಲಿ ಹೆಚ್ಚು ನೀರಾವರಿ ಪ್ರದೇಶವನ್ನು ಹೊಂದಿದೆ. ತಾಲ್ಲೂಕಿನ ಪೂರ್ವ ಭಾಗದ ಗ್ರಾಮಗಳು ಹೆಚ್ಚು ನೀರಾವರಿ ಪ್ರದೇಶಗಳಾಗಿವೆ. ಈ ಭಾಗದಲ್ಲಿ ಬೆಳೆಯುವ ವಾಣಿಜ್ಯ ಬೆಳೆಗಳು ಅಧಿಕವಾಗಿದೆ ಇದರಿಂದ ಗಂಗಾವತಿ ಮಾರುಕಟ್ಟೆ ವ್ಯವಹಾರವನ್ನು ಹೆಚ್ಚಿಸಿದೆ ಈ ತಾಲ್ಲೂಕು ಗಂಗಾವತಿ ನಗರಸಭೆ ಸೇರಿದಂತೆ ಕನಕಗಿರಿ ಪಟ್ಟಣ ಮತ್ತು ಕಾರಟಗಿ ಪಟ್ಟಣಗಳನ್ನು ಹೊಂದಿದೆ ಜಿಲ್ಲೆಯ ಪೂರ್ವ ಭಾಗದ ಪ್ರಮುಖ ತಾಲ್ಲೂಕು ಹಾಗೂ ಅಭಿವೃದ್ಧಿ ಪ್ರದೇಶವಾಗಿದೆ. ಕೃಷಿ ವಲಯದಲ್ಲಿ ತಾಲ್ಲೂಕು ಪ್ರಗತಿ ಪಥದಲ್ಲಿದೆ.

**ಜನಸಂಖ್ಯೆ, ಸಾಕ್ಷರತೆ ಇತ್ಯಾದಿ ವಿವರಗಳು.**

ಗಂಗಾವತಿ ತಾಲ್ಲೂಕು 2001 ರ ಜನಗಣತೆಯ ಪ್ರಕಾರ ಒಟ್ಟು ಜನಸಂಖ್ಯೆ 4,06,334 ರಷ್ಟು ಹೊಂದಿದ್ದು ಇದರಲ್ಲಿ ಪುರಷರು 2,04,356 ಮತ್ತು ಮಹಿಳೆಯರು 2,01,978 ರಷ್ಟಿದ್ದಾರೆ ಜಿಲ್ಲೆಯಲ್ಲಿ ತಾಲ್ಲೂಕು ಅತಿ ಹೆಚ್ಚು ಜನಸಂಖ್ಯೆಯನ್ನು ಹೊಂದಿದೆ. ಜಾತಿವಾರು ಜನಸಂಖ್ಯೆಯಲ್ಲಿ ಪರಿಶಿಷ್ಟರ ಪ್ರಮಾಣ 1,22,707 ರಷ್ಟು ಹೊಂದಿದ್ದು ಜಿಲ್ಲೆಯಲ್ಲಿ ಮೊದಲ ಸ್ಥಾನದಲ್ಲಿದೆ. ತಾಲ್ಲೂಕಿನ ಸಾಕ್ಷರರ ವಿವರವನ್ನು ನೋಡಿದಾಗ 53.1% ರಷ್ಟು ಸಾಕ್ಷರತೆಯನ್ನು ಹೊಂದಿದೆ. ಜಿಲ್ಲೆಯ ಸರಾಸರಿಗಿಂತ ಶೇ.1 ರಷ್ಟು ಕಡಿಮೆ ಸಾಕ್ಷರರನ್ನು ಹೊಂದಿದೆ. ತಾಲ್ಲೂಕು ವಿಸ್ತೀರ್ಣ 1311.21 ಚ.ಕಿ.ಮೀ. ನಷ್ಟಿದೆ. ತಾಲ್ಲೂಕು ಒಟ್ಟು 73,588 ಕುಟುಂಬಗಳನ್ನು ಹೊಂದಿದೆ. ತಾಲ್ಲೂಕಿನಲ್ಲಿ ಪ್ರಮುಖ ಜಾತಿಗಳೆಂದರೆ ಲಿಂಗಾಯತರು, ನಾಯಕರು, ಮಾದಿಗರು, ಮುಸ್ಲಿಂರು, ಮತ್ತು ಕುರುಬರು ಇದ್ದಾರೆ ರಾಜಕೀಯವಾಗಿ ಗಂಗಾವತಿ ತಾಲ್ಲೂಕನ್ನು ನೋಡುವುದಾದರೆ ತಾಲ್ಲೂಕು ತನ್ನುದೇ ಆದ ವಿಧಾನಸಭಾ ಕ್ಷೇತ್ರವನ್ನು ಹೊಂದಿದೆ.

ಹಾಗೂ ಕನಕಗಿರಿ ವಿಧಾನಸಭಾ ಕ್ಷೇತ್ರವನ್ನು ಹೊಂದಿದೆ. ಈ ತಾಲ್ಲೂಕು ಕೊಪ್ಪಳ ಲೋಕಸಭಾ ಕ್ಷೇತ್ರಕ್ಕೆ ಸೇರಿದೆ. ಗಂಗಾವತಿ ನಗರಾಭಿವೃದ್ಧಿ ಪ್ರಾಧಿಕಾರ ಮತ್ತು ಸಿಟಿ ಮುನ್ಸಿಪಲ್ ಕೌನ್ಸಿಲ್‌ನ್ನು ಹೊಂದಿದೆ.

ಪ್ರಸ್ತುತ ಸಂಶೋಧನಾ ಅಧ್ಯಯನ ಕ್ಷೇತ್ರವನ್ನು ಅವಲೋಕಿಸಿದಾಗ, ಕರ್ನಾಟಕ ರಾಜ್ಯದಲ್ಲಿ ಹೈದ್ರಾಬಾದ್-ಕರ್ನಾಟಕ ಪ್ರದೇಶವು ಅತ್ಯಂತ ಹಿಂದುಳಿದ ಪ್ರದೇಶವಾಗಿದೆ. ಅಧ್ಯಯನ ವ್ಯಾಪ್ತಿಯಲ್ಲಿ ಇರುವ ಬಳ್ಳಾರಿ ಜಿಲ್ಲೆ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಹೆಚ್ಚಿನ ಪ್ರಮಾಣದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಪ್ರಸ್ತುತ ಅಧ್ಯಯನ ವ್ಯಾಪ್ತಿಯಲ್ಲಿ ಬಳ್ಳಾರಿ ಜಿಲ್ಲೆಯ ಅಭಿವೃದ್ಧಿ ಹೊಂದಿದ ಹೊಸಪೇಟೆ ತಾಲ್ಲೂಕು ಹಾಗೂ ಅಭಿವೃದ್ಧಿ ಹೊಂದುತ್ತಿರುವ ಹಗರಿಬೊಮ್ಮನಹಳ್ಳಿ ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅದೇ ರೀತಿಯಾಗಿ ಕೊಪ್ಪಳ ಜಿಲ್ಲೆಯ ಅಭಿವೃದ್ಧಿ ಹೊಂದಿದ ಗಂಗಾವತಿ ತಾಲ್ಲೂಕು ಮತ್ತು ಅಭಿವೃದ್ಧಿ ಹೊಂದುತ್ತಿರುವ ಕೊಪ್ಪಳ ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಆಯ್ಕೆ ಮಾಡಿ ಕೊಂಡ ಈ ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು ಇರುವುದರಿಂದ ಈ ಪ್ರದೇಶಗಳನ್ನು ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲು ಪ್ರಮುಖ ಕಾರಣವಾಗಿದೆ ಎಂದು ಹೇಳಬಹುದು.

**ಪರಾಮರ್ಶನ ಗ್ರಂಥಗಳು :**


- ಕರ್ನಾಟಕ ಕೈಪಿಡಿ–2011, ಪ್ರಕಾಶನ: ಕರ್ನಾಟಕ ಗ್ಯಾಸೆಟಿಯರ್ ಇಲಾಖೆ. ಕಾವೇರಿ ಭವನ, ಬೆಂಗಳೂರು–560 009.–2011.
- ಕೊಟ್ರೇಶ್ ಎಂ.–ಕಲ್ಯಾಣ ಕರ್ನಾಟಕದ ಅರಸು ಮನೆತನಗಳು –ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ –2010.
- ಕೃಷ್ಣ ಜೆ. –ಮಾನವ ಅಭಿವೃದ್ಧಿಯ ಪ್ರಾದೇಶಿಕ ಆಯಾಮಗಳ ಅಧ್ಯಯನ –ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಗಂಗಾನಾಯಕ್ ಕೆ.ಎನ್. –ಕರ್ನಾಟಕದ ಇತಿಹಾಸ – ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು –2011.
- ಗವರ್ನ್‌ಮೆಂಟ್ ಆಫ್ ಕರ್ನಾಟಕ, ಹೈ ಪವರ್ ಕಮಿಟಿ ಫಾರ್ ರಿ ಆಡ್ರೆಸೆಲ್ ಆಫ್ ರೀಜನಲ್ ಇಂಬ್ಯಾಲೆನ್ಸ್ ಫೈನಲ್ ರಿಪೋರ್ಟ್, ಪಾರ್ಟ್ 3. ಜೂನ್–2002, ಬೆಂಗಳೂರು: ಪುಟ.130
- ಚಂದ್ರಶೇಖರ್ ಟಿ.ಆರ್., ಬಳ್ಳಾರಿ ಜಿಲ್ಲೆಯ 'ನಿಸರ್ಗ ಸಂಪತ್ತು, ಗದಗ: ಪ್ರಭು ಪ್ರಿಟಿಂಗ್ ಪ್ರೆಸ್, 1994 ಪುಟ. 9
- ಚಂದ್ರಶೇಖರ್ ಟಿ.ಆರ್(ಸಂ)., ಜಿಲ್ಲಾ ಅಭಿವೃದ್ಧಿ ಮಾಹಿತಿಕೋಶ, ಹಂಪಿ: ಕನ್ನಡ ವಿಶ್ವವಿದ್ಯಾಲಯ, 1999, ಪುಟ. 6
- ಡೈರೆಕ್ಟರ್ ಆಫ್ ಸೆನ್ಸಸ್, ಆಪರೇಷನ್, ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್‌ಬುಕ್ ಬಳ್ಳಾರಿ ಡಿಸ್ಟ್ರಿಕ್ಟ್ ಬೆಂಗಳೂರು: ಗವರ್ನಮೆಂಟ್ ಆಫ್ ಕರ್ನಾಟಕ–1991
- ತಾರಿಹಳ್ಳಿ ಹನುಮಂತಪ್ಪ. – ಹೊಸಪೇಟೆ ನಾಯಕರ ಏಳುಕೇರಿಗಳ ಸಾಂಸ್ಕೃತಿಕ ಅಧ್ಯಯನ – ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, –2001.
- ನಂಜುಂಡಪ್ಪ ಉನ್ನತಾಧಿಕಾರ ಸಮಿತಿ ಅಂತಿಮ ವರದಿ.
- ಮಹದೇವ.ಸಿ. – ಹೊಸಪೇಟೆ ತಾಲ್ಲೂಕು ದರ್ಶನ –ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ. –2002.
- ಮುಖ್ಯ ಯೋಜನಾಧಿಕಾರಿಗಳು, ಜಿಲ್ಲಾ ಪಂಚಾಯತ್ ಸದಸ್ಯರ ಪಟ್ಟಿ, ಬಳ್ಳಾರಿ: ಜಿಲ್ಲಾ ಪಂಚಾಯತ್ ಕಛೇರಿ, 2001

- ಮುಖ್ಯ ಯೋಜನಾಧಿಕಾರಿಗಳು, ತಾಲೂಕು ಪಂಚಾಯತ್ ಸದಸ್ಯರ ಪಟ್ಟಿ, ಬಳ್ಳಾರಿ: ಜಿಲ್ಲಾ ಪಂಚಾಯತ್ ಕಛೇರಿ, 2001
- ಮೈಸೂರು ಸ್ಟೇಟ್ ಗ್ಯಾಜೆಟಿಯರ್, ಬಳ್ಳಾರಿ ಡಿಸ್ಟ್ರಿಕ್ಟ್ ಗ್ಯಾಜೆಟೆಯರ್, ಬೆಂಗಳೂರು: ಮೈಸೂರು ಸರಕಾರ, 1972, ಪುಟ. 495
- ಯರಿಸ್ವಾಮಿ.ಎಂ. – ಗ್ರಾಮಪಂಚಾಯತಿ ಮತ್ತು ಸಬಲೀಕರಣ (ಬಳ್ಳಾರಿ ಜಿಲ್ಲೆಯ ಅಧ್ಯಯನ) – ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, –2002.
- ರಝಾಕ ಉಸ್ತಾದ –ಹೈದರಾಬಾದ ಕರ್ನಾಟಕ ಕಥೆ–ವ್ಯಥೆ.–ಪ್ರಕಾಶನ: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು–560018 –2011.
- ವಿರುಪಾಕ್ಷಿ ಪೂಜಾರಹಳ್ಳಿ –ವಸಹತುಕಾಲೀನ ಬಳ್ಳಾರಿ ಜಿಲ್ಲೆ –ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ –2009.
- ವಿವಿಧ ಇಲಾಖೆಯಗಳಿಂದ ಮಾಹಿತಿ ಹಕ್ಕು ಕಾಯ್ದೆ ಅಡಿ ಪಡೆದ ಮಾಹಿತಿ.
- ಶೇಷಾದ್ರಿ ಬಿ., ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರಿಕರಣ ಮತ್ತು ಜನಾಂದೋಲನ, ಹಂಪಿ: ಕನ್ನಡ ವಿಶ್ವವಿದ್ಯಾಲಯ 1998 ಪುಟ. 1

# ಅಧ್ಯಾಯ-ಮೂರು :

# ಭಾರತದಲ್ಲಿ ಬಾಲಕಾರ್ಮಿಕರ ಐತಿಹಾಸಿಕ ಹಿನ್ನೆಲೆ

# ಅಧ್ಯಾಯ – ಮೂರು

## ಭಾರತದಲ್ಲಿ ಬಾಲಕಾರ್ಮಿಕರ ಹಿನ್ನೆಲೆ

ಜಗತ್ತಿನ ಅನೇಕ ಹಿಂದುಳಿದ ದೇಶಗಳಲ್ಲಿ ಹಾಗೂ ಭಾರತವನ್ನೊಳಗೊಂಡಂತೆ ಬೆಳವಣಿಗೆಯ ಪಥದಲ್ಲಿರುವ ಹಲವಾರು ದೇಶಗಳಲ್ಲಿ ಮಕ್ಕಳ ದುರ್ಬಳಕೆ ಹಾಗೂ ಮಕ್ಕಳ ದುಡಿತ ಒಂದು ಸಾಮಾಜಿಕ ದುರಂತವೆಂಬಂತೆ ವರ್ಷದಿಂದ ವರ್ಷಕ್ಕೆ ಇನ್ನಷ್ಟು ಗಂಭೀರ ರೂಪ ತಳೆಯುತ್ತಿದೆ. 12 ಅಥವಾ 14 ವಯಸ್ಸನ್ನು ಮೀರದ ಅಪ್ರಾಪ್ತ ವಯಸ್ಕರಾದ ಅದೆಷ್ಟೋ ಮಕ್ಕಳನ್ನು ಕೃಷಿ ಹಾಗೂ ಕೈಗಾರಿಕಾ ರಂಗಗಳಲ್ಲಿ ದುಡಿಸಿಕೊಳ್ಳಲಾಗುತ್ತಿದೆ. ಪೌಷ್ಠಿಕ ಆಹಾರದ ಕೊರತೆ, ಕ್ಷೀಣವಾದ ಆರೋಗ್ಯ, ವೈದ್ಯಕೀಯ ಸೌಲಭ್ಯಗಳ ಕೊರತೆ, ಶೈಕ್ಷಣಿಕ ಅವಕಾಶಗಳ ಅಲಭ್ಯತೆ, ಒತ್ತಾಯದ ದುಡಿತ, ಶಾರೀರಿಕವಾಗಿ ಹಾಗೂ ನೈತಿಕವಾಗಿ ಅನಾರೋಗ್ಯಕರವಾದ ವಾತಾವರಣದಲ್ಲಿ ಜೀವಿಸಬೇಕಾದ ದುಡಿಯಬೇಕಾದ ಪರಿಸ್ಥಿತಿ, ಆರ್ಥಿಕ ಶೋಷಣೆ, ಸಾಮಾಜಿಕ ಕ್ರೌರ್ಯ ಮುಂತಾದ ಪೀಡನೆಯಿಂದ ಜಗತ್ತಿನ ಮಿಲಿಯಾಂತರ ಮಕ್ಕಳು ಇಂದಿಗೂ ಬವಣೆ ಪಡುತ್ತಿದ್ದಾರೆ.

ಭಾರತದ ಜನಸಂಖ್ಯೆಯ ಸುಮಾರು 40%ರಷ್ಟು ಮಂದಿ ಅಂದರೆ ಸುಮಾರು 310 ದಶಲಕ್ಷ ಮಂದಿ [1991ರ ಜನಗಣತಿಯಂತೆ] 14 ವರ್ಷಗಳಿಗಿಂತಲೂ ಚಿಕ್ಕ ವಯಸ್ಸಿನವರು. ಇವರುಗಳಲ್ಲಿ ಮಿಲಿಯಾಂತರ ಮಂದಿ [ಒಂದು ಅಂದಾಜಿನಂತೆ ಸುಮಾರು 44.5 ದಶಲಕ್ಷಮಂದಿ] ಮಕ್ಕಳು ಈ ಮೇಲೆ ಉಲ್ಲೇಖಿಸಿದ ಸಮಸ್ಯೆಯ ಬಲಿಪಶುಗಳಾಗಿದ್ದಾರೆ. ಇನ್ನೂ ಅನೇಕ ದಶಲಕ್ಷ ಮಕ್ಕಳು ಭಗ್ನ ಕುಟುಂಬ ಹಾಗೂ ಬಡತನದ ಕಾರಣದಿಂದಾಗಿ ತಮ್ಮ ಬಾಲ್ಯಾವಸ್ಥೆಯನ್ನು ಆರೋಗ್ಯಕವಾಗಿ

ಕಳೆಯಲಾರದಂತಹ ದುಃಸ್ಥಿಯಲ್ಲಿದ್ದಾರೆ. ಆದ್ದರಿಂದ ಅವರು ತಮ್ಮ ಆಂತರಿಕ ಪ್ರತಿಭೆ ಸಾಮರ್ಥ್ಯಗಳನ್ನು ಬೆಳಸಿ-ರೂಢಿಸಿಕೊಳ್ಳಲಾರದ ದುರವಸ್ಥೆಯಲ್ಲಿದ್ದಾರೆ. ಸರ್ಕಾರವು ಇಲ್ಲಿಯವರೆಗೆ ನಡೆಸಿಕೊಂಡು ಬಂದ ಯೋಜನೆಗಳು, ಕಲ್ಯಾಣ ಕಾರ್ಯಕ್ರಮಗಳು, ಶಾಸನಾತ್ಮಕ ಕ್ರಮಗಳು, ಆಡಳಿತಾತ್ಮಕ ಕಾರ್ಯಗಳು ನಿರೀಕ್ಷಿಸಿದಷ್ಟು ಫಲಕಾರಿಯಾಗದೆ ಮಿಲಿಯಾಂತರ ಮಕ್ಕಳನ್ನು ಕಾಡುವ ಈ ಸಮಸ್ಯೆಗೆ ವಿದಾಯ ಹೇಳುವಲ್ಲಿ ಅಸಮರ್ಥವಾಗಿವೆ. ದೇಶವನ್ನು ಕಾಡುತ್ತಾ ಬಂದಿರುವ ಇನ್ನೂ ಇತರ ಗಂಭೀರ ಸಾಮಾಜಿಕ-ಆರ್ಥಿಕ ಸಮಸ್ಯೆಗಳನ್ನು ಎದುರಿಸುವಲ್ಲಿಯೇ ತ್ರಸ್ತವಾಗಿರುವ ಸರ್ಕಾರವು ಈ ಸಮಸ್ಯೆಯ ಬಗ್ಗೆ ಸೂಕ್ತವಾದ ಗಮನಹರಿಸದಿರುವುದು ಸ್ಪಷ್ಟವಾಗಿದೆ. ಮಾತ್ರವಲ್ಲ, ದುರಾದೃಷ್ಟವಶಾತ್, ಈ ಸಮಸ್ಯೆಯ ಗಂಭೀರತೆಯ ಬಗ್ಗೆ ಸಮಾಜಶಾಸ್ತ್ರಜ್ಞರು, ಮನೋವಿಜ್ಞಾನಿಗಳು ಹಾಗೂ ಸಮಾಜ ಹಿತಚಿಂತಕರು ಸರ್ಕಾರದ ಗಮನ ಸೆಳೆಯುವಲ್ಲಿ ಹಾಗೂ ಕಣ್ಣು ತೆರೆಯಿಸುವಲ್ಲಿ ವಿಫಲರಾಗಿದ್ದಾರೆ. ಭಾರತೀಯ ಸಮಾಜವು ಇಂದಿಗೂ ಕೂಡ ಈ ಸಮಸ್ಯೆಯ ಗಂಭೀರತೆ ಹಾಗೂ ಭೀಕರತೆಯ ಬಗ್ಗೆ ಪೂರ್ಣ ಅರಿವನ್ನು ಹೊಂದಿದೆ ಎನ್ನುವಂತಿಲ್ಲ.

**ದುಡಿಯುವ ಮಕ್ಕಳ ಸಂಖ್ಯಾ ಪ್ರಮಾಣ**

ಆರ್ಥಿಕ ದುರವಸ್ಥೆ ಹಾಗೂ ಅನಿವಾರ್ಯತೆಯ ಕಾರಣಗಳಿಂದಾಗಿ ಜಗತ್ತಿನ ಹಲವಾರು ದೇಶಗಳಲ್ಲಿ ಚಿಕ್ಕಮಕ್ಕಳು ಆರ್ಥಿಕ ಉತ್ಪಾದನಾ ಕಾರ್ಯದಲ್ಲಿ ಸಹಭಾಗಿಗಳಾಗಿ ದುಡಿಯಬೇಕಾದ ಪರಿಸ್ಥಿತಿಯಿದೆ. ಇಡೀ ಜಗತ್ತಿನಲ್ಲಿಯೇ ಅತ್ಯಂತ ದೊಡ್ಡ ಸಂಖ್ಯೆಯಲ್ಲಿ ಮಕ್ಕಳು ದುಡಿಯುವ ಚಿತ್ರಣವನ್ನು ಭಾರತದಲ್ಲಿ ಕಾಣಬಹುದಾಗಿರುವುದು ದುರದೃಷ್ಟಕರವಾದುದು. ಜಗತ್ತಿನ ದುಡಿಯುವ ಮಕ್ಕಳ ಸುಮಾರು 1/4 ಭಾಗದಷ್ಟು ಮಂದಿ ಭಾರತದಲ್ಲಿದ್ದಾರೆ.

"**ದಿ ನ್ಯಾಷನಲ್ ಸ್ಯಾಂಪಲ್ ಸರ್ವೆ**"ಯ [The National Sample Suryey] ಪ್ರಕಾರ 1972-73ರಲ್ಲಿ ದೇಶಾದ್ಯಂತ ಸುಮಾರು 16.33 ದಶಲಕ್ಷ ದುಡಿಯುವ ಮಕ್ಕಳಿದ್ದು ಈ ಸಂಖ್ಯೆಯು 1985 ವೇಳೆಗೆ ಸುಮಾರು 17.58 ದಶಲಕ್ಷದಷ್ಟಾಗಿತ್ತು.

"**ಯೋಜನಾ ಆಯೋಗ**"ದ [The Planning Commission] ಇತ್ತೀಚಿನ ಒಂದು ಅಂದಾಜಿನ ಪ್ರಕಾರ 1981 ರಿಂದ 1990 ನಡುವಿನ 10 ವರ್ಷಗಳ ಅವಧಿಯಲ್ಲಿ ದುಡಿಯುವ ಮಕ್ಕಳ ಸಂಖ್ಯೆಯು ಗಣನೀಯವಾಗಿ ಹೆಚ್ಚಿದ್ದು ಅಂದರೆ ಸುಮಾರು 800%ರಷ್ಟು ಹೆಚ್ಚಿದ್ದು 13.5 ದಶಲಕ್ಷದಿಂದ 116 ದಶಲಕ್ಷಕ್ಕೆ ಹೆಚ್ಚಳವಾಗಿದೆ.

ಭಾರತ ಸರ್ಕಾರದ ಕಾರ್ಮಿಕ ಇಲಾಖೆಯು [Ministry of Labour, Government of India] ಇತ್ತೀಚೆಗೆ ನಡೆಸಿದ ಒಂದು ಸಮೀಕ್ಷೆಯ ಪ್ರಕಾರ 1986ರ ಹೊತ್ತಿಗೆ ದೇಶಾದ್ಯಂತ ಇದ್ದಿರಬಹುದಾದ ಸುಮಾರು 102.3 ದಶಲಕ್ಷ ಕುಟುಂಬಗಳಲ್ಲಿ ಸುಮಾರು 34.7%ರಷ್ಟು ಕುಟುಂಬಗಳು ದುಡಿಯುವ ಮಕ್ಕಳನ್ನು ಹೊಂದಿದ್ದು ವರದಿಯಾಗಿದೆ. ಈ ಮಕ್ಕಳಲ್ಲಿ ಸುಮಾರು 79%ರಷ್ಟು ಮಂದಿ ಗ್ರಾಮೀಣ ಪ್ರದೇಶಗಳಲ್ಲಿದ್ದುದು ಇನ್ನೊಂದು ವಿಶೇಷವಾಗಿತ್ತು. ದುಡಿಯುವ ಮಕ್ಕಳಲ್ಲಿ ಸುಮಾರು 2/3ರಷ್ಟು ಮಂದಿ 12 ರಿಂದ 15ವರ್ಷ ವಯಸ್ಸಿನವರಾಗಿದ್ದರೆ ಮಿಕ್ಕುಳಿದವರು 12 ವರ್ಷಗಳಿಗಿಂತಲೂ ಚಿಕ್ಕವರಾಗಿದ್ದರು.

### 3.1. ಬಾಲಕಾರ್ಮಿಕ ಪದ್ಧತಿ ನಡೆದು ಬಂದ ದಾರಿ

ಮಕ್ಕಳ ದುಡಿಮೆಯ ಪರಿಸ್ಥಿತಿಯು ಭಾರತದಲ್ಲಿ ಇತ್ತೀಚಿನ ಸಂಗತಿಯೇನೂ ಅಲ್ಲ. ಇತಿಹಾಸದ ಎಲ್ಲ ಅವಧಿಗಳಲ್ಲಿಯೂ ಇದು ಒಂದಲ್ಲ ಒಂದು ವಿಧದಲ್ಲಿ ಅಸ್ತಿತ್ವದಲ್ಲಿ ಇತ್ತು. ಗುಲಾಮಗಿರಿಯ ರೂಪದಲ್ಲಿ ಭಾರತದಲ್ಲಿ ಮಕ್ಕಳನ್ನು ಕೆಲಸಕ್ಕೆ ನೇಮಿಸಿಕೊಳ್ಳುತ್ತಿದ್ದರ ಬಗ್ಗೆ ಕ್ರಿ.ಪೂ. ಮೂರನೇಯ ಶತಮಾನದ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಉಲ್ಲೇಖವಿದೆ. ಅನೇಕ ಶ್ರೀಮಂತ ಮನೆತನಗಳಲ್ಲಿ ಗೃಹಕೃತ್ಯಗಳಲ್ಲಿ ಗುಲಮಗಿರಿಯ ಅಸ್ತಿತ್ವದ ಬಗ್ಗೆ ವಿವರಣೆ ಇದೆ.

ಹಾಗೆಯೇ ಈ ಪ್ರದೇಶದಲ್ಲಿ ಅಂದರೆ ಬಳ್ಳಾರಿ ಜಿಲ್ಲೆ ಹಾಗೂ ಕೊಪ್ಪಳ ಜಿಲ್ಲೆಗಳ ಅನೇಕ ಪ್ರದೇಶಗಳಲ್ಲಿ ಸುಮಾರು 12 – 13ನೇ ಶತಮಾನದ ಕಾಲದಲ್ಲಿಯೇ ಮಕ್ಕಳ ದುಡಿಮೆ ಇತ್ತೆಂದು ನಾವು ಇತಿಹಾಸಕಾರರ ಅನೇಕ ಗ್ರಂಥಗಳಿಂದ ತಿಳಿದುಕೊಳ್ಳಬಹುದು. ಎಂಟು ವರ್ಷಕ್ಕೂ ಕಡಿಮೆ ವಯಸ್ಸಿನ ಗುಲಾಮ ಮಕ್ಕಳು ಶ್ರೀಮಂತರ ಮನೆಗಳಲ್ಲಿ ಕೆಲಸದಲ್ಲಿ ಇದ್ದುದರ ಬಗ್ಗೆಯೂ ವಿವರಣೆ ಕಂಡು ಬರುತ್ತದೆ. ಕರಕುಶಲ ಕಸುಬುದಾರರ ಬಳಿ ಮಕ್ಕಳನ್ನು ತರಬೇತಿಗಾಗಿ ಇಟ್ಟುಕೊಳ್ಳುತ್ತಿದ್ದ ಪದ್ಧತಿ ಮಧ್ಯಕಾಲದಲ್ಲಿ ಸಾಮಾನ್ಯವೆನಿಸಿತ್ತು.

ಹಿಂದಿನ ಕಾಲದಲ್ಲಿ ಮಕ್ಕಳ ದುಡಿಮೆಯು ಗೃಹಚಟುವಟಿಕೆಯ ಒಂದು ಮುಂದುವರೆದ ಭಾಗವಾಗಿ ಅಸ್ತಿತ್ವದಲ್ಲಿತ್ತು. ಮಗುವು ಆಗ ಗೃಹ ಘಟಕದ ಒಂದು ಭಾಗವಾಗಿ ಕೆಲಸದಲ್ಲಿ ತೊಡಗಿರುತ್ತಿತ್ತು. ಕೆಲಸದ ಸ್ವರೂಪವು ಸಾಮಾನ್ಯವಾಗಿ ಹಾನಿಕರಕವಾಗಿರಲಿಲ್ಲ ಹಾಗೂ ಶೋಷಣೆಯ ಲಕ್ಷಣವನ್ನು ಹೊಂದಿರಲಿಲ್ಲ. ಕಲೆ ಮತ್ತು ಕರಕುಶಲ ಕಸುಬುಗಳನ್ನು ಮುಂದಿನ ಪೀಳಿಗೆಗೆ ಮುಂದುವರೆಸುವುದು ಆಗಿನ ಮುಖ್ಯ ಉದ್ದೇಶವಾಗಿತ್ತು. ಆದರೆ ಕೈಗಾರಿಕಾಕರಣದ ಪ್ರಾರಂಭದೊಂದಿಗೆ ದುಡಿಮೆಗೆ ಹೊಸ ಆಯಾಮ ಮೂಡತೊಡಗಿತು.

ಗ್ರಾಮಗಳಿಂದ ನಗರ ಅಭಿಮುಖವಾದ ಬೃಹತ್ ಪ್ರಮಾಣದ ವಲಸೆಯ ಕುಟುಂಬಗಳು ಶಿಥಿಲಗೊಳ್ಳಲು ಮತ್ತು ವ್ಯಕ್ತಿಗಳು ಮಾನವ ಸೂಕ್ಷ್ಮಗಳನ್ನು ಕಳೆದುಕೊಳ್ಳಲು ಕಾರಣವೆನಿಸಿತು. ಗೃಹ ಆಧಾರಿತ ದುಡಿಮೆಯು ಆರ್ಥಿಕ ವಲಯದಲ್ಲಿ ತನ್ನ ಸ್ಥಾನವನ್ನು ಕಳೆದುಕೊಳ್ಳತೊಡಗಿತು. ಮಕ್ಕಳನ್ನು ಆರ್ಥಿಕ ಉತ್ಪಾದನೆಯ ಸಾಧನವನ್ನಾಗಿ ಪರಿಗಣಿಸಲು ಪ್ರಾರಂಭಿಸಿತು. ಈ ಹೊಸ ಪರಿಸರದಲ್ಲಿ ಮಕ್ಕಳು ದುಡಿಯಲು ತೊಡಗಿದಂತೆ, ಮಕ್ಕಳು ದುಡಿಮೆಯಲ್ಲಿ ಅಪಾಯಗಳನ್ನು ದೀರ್ಘ ಅವಧಿಯ ದುಡಿಮೆಯನ್ನು ಮತ್ತು ಕೆಟ್ಟ ವಾತಾವರಣವನ್ನು ಹಾಗೂ ಕಳಪೆ ಜೀವನ ಮಟ್ಟವನ್ನು ಎದುರಿಸ ಬೇಕಾಯಿತು.

ಕೈಗಾರಿಕೀಕರಣದ ಪ್ರಭಾವದಿಂದ ಅಂದರೆ ಇತ್ತೀಚಿನ ದಿನಗಳಲ್ಲಿ ಬಾಲಕಾರ್ಮಿಕ ಸಮಸ್ಯೆ ಅತಿರೇಕಕ್ಕೆ ಹೋಗಿರುವುದನ್ನು ನಾವು ಕಾಣತ್ತಿದ್ದೇವೆ. ಬಂಡವಾಳ ಶಾಹಿಗಳು ತಮ್ಮ ಅತೀ ಲಾಭದ ಆಸೆಯಿಂದ ಮಕ್ಕಳ ದುರ್ಬಳಕೆ ಅಥವಾ ಮಕ್ಕಳನ್ನು ದುಡಿಸಿಕೊಳ್ಳುತ್ತಿರುವುದು ಪ್ರಸ್ತುತ ಸಮಾಜದ ದುರಂತ ಎನ್ನಬಹುದು. ಈ ಸಮಸ್ಯೆಯ ತೀವ್ರತೆ ಪ್ರಮಾಣ ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಾ ನಡೆದಿದೆ. ಹನ್ನೆರಡು ಅಥವಾ ಹದಿನಾಲ್ಕು ವಯಸ್ಸನ್ನು ಮೀರದ ಅಪ್ರಾಪ್ತ ವಯಸ್ಕರಾದ ಎಷ್ಟೋ ಮಕ್ಕಳನ್ನು ಕೃಷಿ ಹಾಗೂ ಕೈಗಾರಿಕಾ ವಲಯಗಳಲ್ಲಿ ದುಡಿಸಿಕೊಳ್ಳಲಾಗುತ್ತಿದೆ.

ಇಂತಹ ಮಕ್ಕಳು ಇಂದು ಹಲವಾರು ರೀತಿಯ ಆರೋಗ್ಯ ಸಮಸ್ಯೆಗಳಾದ ಪೌಷ್ಟಿಕ ಆಹಾರದ ಕೊರತೆ, ಕ್ಷೀಣವಾದ ಆರೋಗ್ಯ, ವೈದ್ಯಕೀಯ ಸೌಲಭ್ಯಗಳ ಕೊರತೆ, ಶೈಕ್ಷಣಿಕ ಸೌಲಭ್ಯಗಳಿಂದ ವಂಚನೆ, ಶಾರೀರಿಕವಾಗಿ ಮತ್ತು ಮಾನಸಿಕವಾಗಿ ಶೋಷಣೆ ಮುಂತಾದ ಅನಿಷ್ಠಗಳಿಂದ ಕೋಟ್ಯಂತರ ಮಕ್ಕಳು ಇಂದಿಗೂ ಬವಣೆ ಪಡುತ್ತಿದ್ದಾರೆ. ಮಕ್ಕಳು ದೇಶದ ಆಸ್ತಿ. ಆದರೆ ಆ ಮೊಗ್ಗುಗಳು ಅರಳುವ ಮೊದಲೇ ದುಡಿತದ ಬಂಧನಕ್ಕೆ ಒಳಪಡಿಸುವ ದಾರುಣ ಸ್ಥಿತಿಯನ್ನು ಎಲ್ಲಡೆ ಕಾಣುತ್ತಿದ್ದೇವೆ. ದಿನದಿನಕ್ಕೂ ಈ ಅಮಾನುಷ ಬಾಲಕಾರ್ಮಿಕ ಸಮಸ್ಯೆ ಉಲ್ಬಣಗೊಳ್ಳುತ್ತಲೇ ನಡೆದಿದೆ. ಪ್ರೌಢ ಕಾರ್ಮಿಕರಂತೆ ದಿನಗಟ್ಟಲೇ ದುಡಿಯ ಬೇಕಾದ ಅನಿವಾರ್ಯತೆಗೆ ಸಿಲುಕಿರುವ ಇವರು ಯಾವುದೇ ಕಾನೂನಿನ ಸೌಲಭ್ಯಗಳನ್ನು ಪಡೆದು ಕೊಳ್ಳಲಾಗದ ತಮ್ಮ ಹಿತಸಕ್ತಿಗಳನ್ನು ಕಟ್ಟಿಕೊಳ್ಳಲಾಗದೆ ಅಸಹಾಯಕ ಪರಿಸ್ಥಿತಿಯಲ್ಲಿ ಇರುವುದು ತುಂಬಾ ಶೋಚನೀಯವಾಗಿದೆ.

ಅಂತೆಯೇ ಮಕ್ಕಳ ದುಡಿಮೆಯು ಬಹಳ ಮುಖ್ಯವಾಗಿ ಅಭಿವೃದ್ಧಿ ಪ್ರಕ್ರಿಯೆಯ ಪರಿಣಾಮವಾಗಿ ಸೃಷ್ಠಿಯಾಗಿರುವ ಒಂದು ಸಮಸ್ಯೆ. ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಗಳಲ್ಲಿ ತನ್ನ ಮೂಲವನ್ನು ಹೊಂದಿರುವ ಒಂದು ಸಮಸ್ಯೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಕೈಗಾರಿಕೀಕರಣವು ಈ ಸಮಸ್ಯೆಯನ್ನು ಮಿತಗೊಳಿಸುವ ಬದಲು ಸಮಸ್ಯೆಯನ್ನ ಮತ್ತಷ್ಟು ಉಲ್ಬಣಗೊಳಿಸಿದೆ.

ಒಂದು ಅಂದಾಜಿನ ಪ್ರಕಾರ ಭಾರತದಲ್ಲಿ ಹತ್ತು ಕೋಟಿಗಿಂತ ಹೆಚ್ಚು ಬಾಲಕಾರ್ಮಿಕರು ದುಡಿಯುತ್ತಿದ್ದಾರೆ. ಈ ಪ್ರಮಾಣ ಒಟ್ಟು ಕಾರ್ಮಿಕರ ಶೇ.20 ರಷ್ಟಿದೆ. ನಮ್ಮ ರಾಜ್ಯದಲ್ಲಿಯೇ ಸುಮಾರು ಹನ್ನೆರಡು ಸಾವಿರದಿಂದ ಹದಿನೈದು ಸಾವಿರ ಬಾಲಕಾರ್ಮಿಕರು ಅಪಾಯಕಾರಿ ಉದ್ದಿಮೆಗಳಲ್ಲಿಯೂ ಹಾಗೂ ಮುವತ್ತರಿಂದ ನಲವತ್ತು ಸಾವಿರ ಬಾಲಕಾರ್ಮಿಕರು ಅಪಾಯಕಾರಿ ಅಲ್ಲದ ಉದ್ದಿಮೆಗಳಲ್ಲಿ ದುಡಿಯುತ್ತಿದ್ದಾರೆ. ಒಂದು ಅಂದಾಜಿನಂತೆ ಬಳ್ಳಾರಿ ಜಿಲ್ಲೆ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಸುಮಾರು ಎಂಟರಿಂದ ಹತ್ತು ಸಾವಿರ ಮಕ್ಕಳು ಬಾಲಕಾರ್ಮಿಕರಾಗಿದ್ದಾರೆ.

ಪ್ರಪಂಚದಲ್ಲಿ ಅತಿ ಹೆಚ್ಚು ಬಾಲಕಾರ್ಮಿಕರನ್ನು ಹೊಂದಿದ ದೇಶ ಭಾರತವಾಗಿದೆ. ಅನೇಕ ಕುಟುಂಬಗಳಲ್ಲಿ ಸ್ವತಃ ತಂದೆ ತಾಯಿಯರೇ ತಮ್ಮ ಮಕ್ಕಳನ್ನು ಒತ್ತಾಯ ಮಾಡಿ ಕೆಲಸಕ್ಕೆ ಕಳುಹಿಸುವುದುಂಟು. ಹಣಕ್ಕಾಗಿ ಮಕ್ಕಳನ್ನೇ ಮಾರಾಟ ಮಾಡುವವರು ಈ ದೇಶದಲ್ಲಿರುವಾಗ, ಮಕ್ಕಳನ್ನು ಶಾಲೆಗಳಿಗೆ ಕಳುಹಿಸದೆ ಉದ್ಯೋಗಕ್ಕೆ ಕಳುಹಿಸುವ ತಂದೆ ತಾಯಿಗಳಿಗೇನು ಕೊರತೆಯೆ? ದೊಡ್ಡವರು ದುಡಿದು ಎಳೆಯ ಮಕ್ಕಳ ಹೊಟ್ಟೆ ತುಂಬಿಸ ಬೇಕಾದುದು ಅವರ ಕರ್ತವ್ಯ. ಅದು ಅವರ ಜವಾಬ್ದಾರಿ. ಆದರೆ ಮಕ್ಕಳೇ ಕಷ್ಟಪಟ್ಟು ದುಡಿದು ದೊಡ್ಡವರ ಹೊಟ್ಟೆ ತುಂಬಿಸಬೇಕಾದುದು ಅಂತಹ ಮಕ್ಕಳ ಭವಿಷ್ಯವನ್ನು ದುರಂತಕ್ಕೀಡು ಮಾಡಿದೆ.

ಪ್ರೀತಿ, ಬಾಲ್ಯ, ಶಿಕ್ಷಣ, ಇವೆಲ್ಲವೂ ಮಕ್ಕಳ ಜನ್ಮಸಿದ್ಧ ಹಕ್ಕು. ಭಾರತ ದೇಶದಲ್ಲಿ ಹುಟ್ಟಿದ ಎಲ್ಲ ಮಕ್ಕಳಿಗೂ ಬದುಕುವ ಹಕ್ಕು ನೀಡಲಾಗಿದೆ. ಹಕ್ಕುಗಳನ್ನು ಕಾಪಾಡಲು ಕಾನೂನುಗಳಿವೆ, ಕಟ್ಟಳೆಗಳಿವೆ. ಆದರೆ ಇವೆಲ್ಲವನ್ನು ಮರೆಯಾಗಿಸಿ ದೇಶದಾದ್ಯಂತ ವ್ಯಾಪಕವಾಗಿ ಬಾಲಕಾರ್ಮಿಕ ಪದ್ಧತಿ ಕದ್ದು ಮುಚ್ಚಿ ನಡೆಯುತ್ತಿದೆ. ತಂದೆ ತಾಯಿರ ಆಸರೆ, ಮಮತೆಯಿಂದ ವಂಚಿತರಾದ ಅನೇಕ ಮಕ್ಕಳು ಗ್ಯಾರೇಜ್, ಹೊಟೇಲ್, ಗಿರಣಿಗಳಲ್ಲಿ ಎಳೆಯ ದೇಹವನ್ನು ದಂಡಿಸಿ ದುಡಿಯುತ್ತಿದ್ದಾರೆ. ಈ ಬಾಲಕಾರ್ಮಿಕರಿಗೆ ಸಿಗುವುದು ಕೇವಲ ಹೊಡೆತ, ಬಡಿತ, ಬೈಗುಳ, ಹಿಂಸೆ, ಕಿರುಕುಳ ಮಾತ್ರ. ಸಿಗುವ ಅತ್ಯಲ್ಪ ವೇತನ ಪಡೆದು ಗಾಣದೆತ್ತಿನ ಹಾಗೆ ಸದಾ ದುಡಿಯಬೇಕಾದುದು ನಮ್ಮ ದೇಶದಲ್ಲಿ ಅನಿವಾರ್ಯವಾಗಿದೆ.

### 3.2. ಬಾಲಕಾರ್ಮಿಕ ಪದ್ದತಿಯ ಅರ್ಥ ಮತ್ತು ವಿವರಣೆ

ರಾಷ್ಟ್ರ ಮಟ್ಟದಲ್ಲಾಗಲಿ ಅಥವಾ ಅಂತರರಾಷ್ಟ್ರಿಯ ಮಟ್ಟದ ಹಿನ್ನಲೆಯಲ್ಲಾಗಲಿ, ಮಕ್ಕಳ ದುಡಿಮೆಯನ್ನು ಕುರಿತು, ಸಾಮಾನ್ಯವಾಗಿ ಸರ್ವ ಸಮ್ಮತವಾದ ವ್ಯಾಖ್ಯೆ ಈಗ ಲಭ್ಯವಿಲ್ಲ. ಮಕ್ಕಳ ದುಡಿಮೆಯ ವ್ಯಾಖ್ಯೆ ವಿಶ್ವದಾದ್ಯಂತ ಏಕರೂಪದಲ್ಲಿಯೂ ಇಲ್ಲ. ಮಕ್ಕಳ ಉದ್ಯೋಗಕ್ಕೆ ಸಂಬಂಧಿಸಿದ ಕಾಯಿದೆಗಳಲ್ಲಿಯೂ ಇದು ಸಮಾನ ರೀತಿಯಲ್ಲಿ ಇಲ್ಲ.

**ಮಕ್ಕಳ ದುಡಿತ ಎಂದರೇನು?**

ಮಕ್ಕಳ ದುಡಿತ ಅಥವಾ ಬಾಲಕಾರ್ಮಿಕ ['Child Labour'] ಎಂಬ ಕಲ್ಪನೆಯನ್ನು ಸಾಮಾನ್ಯವಾಗಿ "ದುಡಿಯುವ ಮಗು" ಅಥವಾ "ಉದ್ಯೋಗಿಯಾಗಿರುವ ಮಗು" ["Working child" or "employed child"] ಎಂಬುದಕ್ಕೆ ತತ್ಸಮಾನವಾಗಿ ಬಳಸಲಾಗುತ್ತಿದೆ.

**ಭಾರತದ ಸಂವಿಧಾನದ ಪ್ರಕಾರ**–14 ವಷಕ್ಕಿಂತ ಕಡಿಮೆ ವಯಸ್ಸಿನ ಮಗುವೊಂದು ಸಂಪಾದನೆಯ ದೃಷ್ಟಿಯಿಂದ ದುಡಿಮೆ ಮಾಡುತ್ತಿದ್ದಲ್ಲಿ ಅಂತಹ ಮಗುವನ್ನು ದುಡಿಯುವ ಮಗು ಎಂದೆನ್ನಬಹುದು.

ಬೆಂಗಳೂರಿನ **"ದಿ ಕನ್‌ಸೆರ್ನ್ಡ್ ಫಾರ್ ವರ್ಕಿಂಗ್ ಚಿಲ್ಡ್ರನ್"** ಎಂಬ ಸಂಸ್ಥೆಯ ಪ್ರಕಾರ–15 ವರ್ಷಕ್ಕಿಂತಲೂ ಕಡಿಮೆ ವಯಸ್ಸಿನ ವ್ಯಕ್ತಿಯೋರ್ವನು ಆಂಶುಪಾಲಿಕ ಅಥವಾ ಪೂರ್ಣಾವಧಿಯ ನೆಲೆಯಲ್ಲಿ ಆದಾಯ ಅಥವಾ ವೇತನಕ್ಕಾಗಿ ಇಲ್ಲವೇ ವೇತನವಿಲ್ಲದೆ ದುಡಿಯುತ್ತಿದ್ದಲ್ಲಿ ಅಂತಹ ವ್ಯಕ್ತಿಯನ್ನು ದುಡಿಯುವ ಮಗು" ಎಂದೆನ್ನಬಹುದು.

ಬ್ರಿಟಾನಿಕ ವಿಶ್ವಕೋಶವು ಮಕ್ಕಳ ದುಡಿಮೆಯನ್ನು "ಕಾಯಿದೆಯು ನಿಗದಿಪಡಿಸಿದ ನಿರ್ದಿಷ್ಟ ವಯಸ್ಸಿನ ಒಳಗಿರುವ ಮಕ್ಕಳ ಉದ್ಯೋಗ" ಎಂದು ವ್ಯಾಖ್ಯಾನಿಸುತ್ತದೆ.

ಯು.ಎಸ್.ಎ. ರಾಷ್ಟ್ರೀಯ ಮಕ್ಕಳ ದುಡಿಮೆಯ ಸಮಿತಿಯ ಅಧ್ಯಕ್ಷರಾದ ಹೋಮರ್ ಫ್ಲೇಕ್ಸ ಅವರ ಪ್ರಕಾರ 'ಮಕ್ಕಳ ಪೂರ್ಣ ಶಾರೀರಿಕ ಬೆಳವಣಿಗೆ, ನಿರೀಕ್ಷಿತ ಕನಿಷ್ಠ ಮಟ್ಟದ ಶಿಕ್ಷಣದ ಅವಕಾಶಗಳು ಮತ್ತು ಅವರಿಗೆ ಅವಶ್ಯವಾದ ಮನರಂಜನೆ, ಇವುಗಳಿಗೆ ಅಡ್ಡಿ ತರಬಲ್ಲಂತಹ ಮಕ್ಕಳು ಮಾಡುವಂತಹ ಯಾವುದೇ ಕೆಲಸವೂ ಮಕ್ಕಳ ದುಡಿಮೆ' ಎನಿಸಿಕೊಳ್ಳುತ್ತದೆ.

1986 ರ ಮಕ್ಕಳ ದುಡಿಮೆಯ (ನಿಷೇಧ ಮತ್ತು ನಿಯಂತ್ರಣ) ಅಧಿನಿಯಮದ ಪ್ರಕಾರ 14 ವರ್ಷ ವಯಸ್ಸಿನವರೆಗಿನ ಮಕ್ಕಳನ್ನು ಉದ್ಯೋಗಕ್ಕೆ ನೇಮಿಸಿ ಕೊಳ್ಳುವುದನ್ನು ಮಕ್ಕಳ ದುಡಿಮೆ ಎಂದು ಕರೆಯಲಾಗಿದ್ದು, ಅಪಾಯಕರ ಉದ್ಯೋಗಗಳಲ್ಲಿ ಮಕ್ಕಳ ದುಡಿಮೆಯನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ.

ಡಾ.ವಿ.ವಿ.ಗಿರಿಯವರು ಬಾಲಕಾರ್ಮಿಕ ಎನ್ನುವ ಕಲ್ಪನೆಯನ್ನು ಎರಡು ಅರ್ಥದಲ್ಲಿ ವಿವರಿಸಲು ಪ್ರಯತ್ನಿಸಿದ್ದಾರೆ.

ಮೊದಲನೆಯದಾಗಿ **'ಆರ್ಥಿಕ ಆಚರಣೆಗಾಗಿ'** ಮಕ್ಕಳ ದುಡಿಮೆ ಕುಟುಂಬದ ಆದಾಯವನ್ನು ಹೆಚ್ಚಿಸುವ ಸಲುವಾಗಿ ಮಗುವನ್ನು ಹಣ ತರುವ ಕೆಲಸಕ್ಕೆ ಸೇರಿಸುವುದನ್ನು ಸೂಚಿಸುತ್ತದೆ ಎಂದಿದ್ದಾರೆ.

ಎರಡನೇಯದಾಗಿ 'ಸಾಮಾಜಿಕ ಕೆಡುಕಿಗಾಗಿ' ಮಕ್ಕಳನ್ನು ಅಪಾಯಗಳಿಗೆ ದೂಡಿ ಅವರಿಗೆ ಅಭಿವೃದ್ಧಿಯ ಅವಕಾಶಗಳನ್ನು ತಪ್ಪಿಸುವುದನ್ನು ಸೂಚಿಸುತ್ತದೆ ಎಂದಿದ್ದಾರೆ.

ಮಕ್ಕಳ ಮೇಲೆ ದುಡಿಮೆಯ ದುಷ್ಪರಿಣಾಮವನ್ನು ಗಮನದಲ್ಲಿರಿಸಿಕೊಂಡು ಹೆಚ್ಚು ವಿಸ್ತೃತವಾದ ವ್ಯಾಖ್ಯೆಯನ್ನು ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆಯು ಒದಗಿಸುತ್ತದೆ. ಇದರ ಪ್ರಕಾರ ಅವರ ಶಾರೀರಿಕ ಮತ್ತು ಬೌದ್ಧಿಕ ಬೆಳವಣಿಗೆ ಮತ್ತು ಆರೋಗ್ಯಕ್ಕೆ ಹಾನಿಯನ್ನುಂಟು ಮಾಡುವ ಪರಿಸ್ಥಿತಿಯಲ್ಲಿ ಕಡಿಮೆ ಸಂಬಳಕ್ಕೆ ದೀರ್ಘ ಅವಧಿಯವರೆಗೆ ದುಡಿಯುವ, ಅನೇಕ ಸಂದರ್ಭಗಳಲ್ಲಿ ಅವರ ಕುಟುಂಬಗಳಿಂದ ದೂರವಿರುವ ಮತ್ತು ಅವರ ಉತ್ತಮ ಭವಿಷ್ಯಕ್ಕೆ ಸಹಾಯಕವಾಗಬಲ್ಲಂತಹ ಅರ್ಥಪೂರ್ಣ ಶಿಕ್ಷಣ ಮತ್ತು ತರಬೇತಿಯ ಅವಕಾಶಗಳಿಂದ ವಂಚಿತವಾದಂತಹ, ವಯಸ್ಕರ ಜೀವನವನ್ನು ಮಕ್ಕಳು ಅಪಕ್ವ ವಯಸ್ಸಿನಲ್ಲಿಯೇ ನಡೆಸುವುದನ್ನು ಮಕ್ಕಳ ದುಡಿಮೆಯು ಒಳಗೊಂಡಿರುತ್ತದೆ.

ಸಾಮಾನ್ಯವಾಗಿ ಹೇಳಬೇಕೆಂದರೆ ಹದಿನಾಲ್ಕು ವರ್ಷದೊಳಗಿನ ಯಾವ ಮಗು ಶಾಲೆಯಲ್ಲಿ ಇಲ್ಲವೋ ಅವರೆಲ್ಲರೂ ಬಾಲಕಾರ್ಮಿಕರು ಹದಿನಾಲ್ಕು ವರ್ಷದೊಳಗಿನ ಮಕ್ಕಳು ಶಾಲೆಯಿಂದ ಹೊರಗಿದ್ದು ತನ್ನ ಬೌದ್ಧಿಕ, ಮಾನಸಿಕ, ಶಾರೀರಿಕ, ಸಾಮಾಜಿಕ ಮತ್ತು ಭಾಷಾ ಬೆಳವಣಿಗೆಗಳಿಗೆ ತೊಡಕಾಗುವ ಯಾವುದೇ ಚಟುವಟಿಕೆಯಲ್ಲಿದ್ದು ತನ್ನ ಮೂಲಭೂತ ಹಕ್ಕುಗಳಿಂದ ವಂಚಿತರಾಗಿದ್ದರೆ ಅವರೆಲ್ಲರೂ ಬಾಲಕಾರ್ಮಿಕರು ಎಂದೆನಿಸಿಕೊಳ್ಳುತ್ತಾರೆ.

ಈ ಹಂತದಲ್ಲಿ, ಮಕ್ಕಳ ದುಡಿಮೆಗೆ ಸಂಬಂಧಿಸಿದ ಬರವಣಿಗೆಯಲ್ಲಿ ಸಾಮಾನ್ಯವಾಗಿ ಬಳಸಲಾಗುವ ದುಡಿಯುವ ಮಕ್ಕಳು ಮತ್ತು ಮಕ್ಕಳ ದುಡಿಮೆ, ಈ ಎರಡು ಪದಗಳನ್ನು ಗಮನಿಸುವುದು ಹಾಗೂ ಅವುಗಳ ನಡುವಿನ ವ್ಯತ್ಯಾಸವನ್ನು ಗುರುತಿಸುವುದು ಅವಶ್ಯಕ. ಇವೆರಡನ್ನೂ ಅನೇಕ ವೇಳೆ ಒಂದೇ ಅರ್ಥದಲ್ಲಿ ಬಳಸಲಾಗುತ್ತಿದ್ದು, ಮಕ್ಕಳ ದುಡಿಮೆ ಸಮಸ್ಯೆಯ ವಿಶ್ಲೇಷಣೆ ಮತ್ತು ಸುಧಾರಣಾ ಕ್ರಮಗಳ ಅನುಷ್ಠಾನದಲ್ಲಿ ತೊಡಕನ್ನು ಉಂಟುಮಾಡಬಲ್ಲದು. ದುಡಿಯುವ ಮಕ್ಕಳು ಪದವು ಹೆಚ್ಚು ವಿವರಣಾತ್ಮಕವಾಗಿದ್ದು, ಮಕ್ಕಳ ದುಡಿಮೆ ಪದದಷ್ಟು ನಿಖರವೆನಿಸುವುದಿಲ್ಲ. ಎಲ್ಲ ಕಾರ್ಯಗಳೂ ಮಕ್ಕಳಿಗೆ ಹೊರೆಯೆನಿಸುವುದಿಲ್ಲ. ಹಗುರವಾದ ಮತ್ತು ಸೂಕ್ತವಾಗಿ ವ್ಯವಸ್ಥೆಗೊಳಿಸಿದ ಕಾರ್ಯವು ಮಕ್ಕಳ ದುಡಿಮೆ ಎನಿಸಿಕೊಳ್ಳುವುದಿಲ್ಲ. ಇದರ ಅರ್ಥ, ಮಕ್ಕಳಿಗೆ ಅತ್ಯವಶ್ಯವಾದ ವಿರಾಮ, ಆಟ ಮತ್ತು ಶಿಕ್ಷಣ, ಇವುಗಳನ್ನು ನಿರಾಕರಿಸದೆ ಇರುವ ಕಾರ್ಯವು ಮಕ್ಕಳ ದುಡಿಮೆ ಎನಿಸುವುದಿಲ್ಲ. ಆದ್ದರಿಂದ ಮಕ್ಕಳ ದುಡಿಮೆ ಎನ್ನುವುದು ಸ್ವಲ್ಪ ಮಟ್ಟಿನ ಶೋಷಣೆನ್ನು ಒಳಗೊಂಡಿರುವಂತಹುದು. ಅಂತೆಯೇ ಈ ಶೋಷಣೆಯು ಶಾರೀರಿಕ, ಬೌದ್ಧಿಕ, ಆರ್ಥಿಕ ಮತ್ತು ಸಾಮಾಜಿಕ ಸ್ವರೂಪದ್ದಾಗಿದ್ದು ಮಕ್ಕಳ ಆರೋಗ್ಯ ಮತ್ತು ಬೆಳವಣಿಗೆಯನ್ನು ಕುಂಠಿತಗೊಳಿಸುವಂತಹುದು.

**ಮಕ್ಕಳ ದುಡಿತದ ನಾಲ್ಕು ಮುಖ್ಯ ರೂಪಗಳು ಅಥವಾ ಪ್ರಕಾರಗಳು**

ವಿಶ್ವರಾಷ್ಟ್ರ ಸಂಸ್ಥೆಯ ಅಂಗಸಂಸ್ಥೆಯಾದ "ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆ"ಯ [ILO: International Labour Orgnisation] ಪ್ರಕಾರ ಜನಗತ್ತಿನಾದ್ಯಂತ ಹಲವಾರು ದೇಶಗಳಲ್ಲಿ ದುಡಿತಕ್ಕೆ ಒಳಪಟ್ಟಿರುವ ಮಕ್ಕಳ ಉದ್ಯೋಗ ಅಥವಾ ಕೆಲಸಗಳನ್ನು ನಾಲ್ಕು ಮುಖ್ಯ ಪ್ರಕಾರಗಳಾಗಿ ವಿಂಗಡಿಸಬಹುದಾಗಿದ್ದು ಆ ವಿಂಗಡನಾ ವಿನ್ಯಾಸವು ಈ ಮುಂದಿನಂತಿದೆ: (i) ಗೃಹಕೃತ್ಯಗಳಿಗೆ ಸಂಬಂಧಿಸಿದ ಧನೇತರ ದುಡಿಮೆ; (ii) ಗೃಹಕೃತ್ಯೇತರ ಹಾಗೂ ಧನೇತರ ದುಡಿಮೆ; (iii) ದಿನಗೂಲಿಯ ಅಥವಾ ಸಂಬಳದ ದುಡಿಮೆ ಹಾಗೂ (iv) ಜೀತದ ದುಡಿಮೆ.

**(i) ಗೃಹಕೃತ್ಯಗಳಿಗೆ ಸಂಬಂಧಿಸಿದ ಧನೇತರ ದುಡಿಮೆ [Domestic Non-Monetary Work]**

ಗ್ರಾಮೀಣ ಹಾಗೂ ನಗರ ಪರಿಸರದ ಗಣನೀಯ ಸಂಖ್ಯೆಯ ಚಿಕ್ಕ ಮಕ್ಕಳು ತಮ್ಮ ಕುಟುಂಬದ ಆದಾಯವನ್ನು ಹೆಚ್ಚಿಸಲು ಹಾಗೂ ಕುಟುಂಬದ ಖರ್ಚು-ವೆಚ್ಚಗಳನ್ನು ಒಂದಿಷ್ಟಾದರೂ ತಗ್ಗಿಸಲು ಧನಾಪೇಕ್ಷೆಯಿಲ್ಲದೆ ತಮ್ಮದೇ ಕುಟುಂಬದೊಳಗೆ ದುಡಿಯುವರು. ಈ ಬಗೆಯ ದುಡಿತವು ಸಾಮಾನ್ಯವಾಗಿ ದಿನದ ಬಹಳಷ್ಟು ಸಮಯವನ್ನು ತೆಗೆದುಕೊಳ್ಳುವುದಾಗಿದ್ದು [time-intensive], ದುಡಿಮೆಗಾರ ಮಕ್ಕಳೂ ಕೂಡ ಸ್ವ-ಇಚ್ಛೆಯಿಂದಲೇ ಇಂತಹ ದುಡಿತಕ್ಕೆ ತಮ್ಮನ್ನು ತಾವು ಒಪ್ಪಿಸಿಕೊಳ್ಳುತ್ತಾರೆ. **ಉದಾ:** ತಮ್ಮ ಕಿರಿಯ ಸೋದರ-ಸೋದರಿಯರ ಯೋಗಕ್ಷೇಮ ನೋಡಿಕೊಳ್ಳುತ್ತಾ ಮನೆಯಲ್ಲಿಯೇ ದುಡಿಯುವುದು; ಅಡಿಗೆ ಮಾಡುವುದು, ಮನೆಯನ್ನು ಮತ್ತು ಮನೆಯ ಪರಿಸರವನ್ನು ಶುದ್ಧವಾಗಿಟ್ಟುಕೊಳ್ಳುವುದು, ತೊಳೆಯುವುದು ಇತ್ಯಾದಿ, ಭಾರತದಲ್ಲಿ ಸಾಮಾನ್ಯವಾಗಿ ಗಂಡು ಮಕ್ಕಳಿಗಿಂತಲೂ ಹೆಣ್ಣು ಮಕ್ಕಳು ಇಂತಹ ದುಡಿತದಲ್ಲಿ ತೊಡಗಿರುವುದೇ ಹೆಚ್ಚು.

**(ii) ಗೃಹಕೃತ್ಯೇತರ ಹಾಗೂ ಧನೇತರ ದುಡಿಮೆ [Non-Domestic and Non-Monetary Work]**

ಇಂತಹ ದುಡಿಮೆಯಲ್ಲಿ ತೊಡಗಿರುವ ಹೆಚ್ಚಿನ ಸಂಖ್ಯೆಯ ಮಕ್ಕಳನ್ನು ಗ್ರಾಮೀಣ ಪ್ರದೇಶಗಳಲ್ಲಿ ಕಾಣಬಹುದು. **ಉದಾ:** ದನಕರುಗಳನ್ನು ನೋಡಿಕೊಳ್ಳುವ, ಬೆಳೆದು ನಿಂತ ಪೈರನ್ನು ಇಲ್ಲವೇ ಹೊಲ-ಗದ್ದೆಗಳನ್ನು ಹಾಗೂ ತೋಟವನ್ನು ಪ್ರಾಣಿಗಳಿಂದ ಹಾಗೂ ಹಕ್ಕಿ-ಪಕ್ಷಿಗಳಿಂದ ಸಂರಕ್ಷಿಸುವ, ಬೇಟೆಯಾಡುವ, ಮೀನು ಹಿಡಿಯುವ, ಕಳೆಗಳನ್ನು ತೆಗೆಯುವ ಮತ್ತಿತರ ಬಗೆಯ ಕೆಲಸಕಾರ್ಯಗಳಲ್ಲಿ ತೊಡಗಿರುವ ಎಳೆಯ ಮಕ್ಕಳನ್ನು ಗ್ರಾಮೀಣ ಪ್ರದೇಶಗಳಲ್ಲಿಯೇ ಹೆಚ್ಚಾಗಿ ಕಾಣಬಹುದಾಗಿದೆ.

**(iii) ದಿನಗೂಲಿಯ ಅಥವಾ ಸಂಬಳದ ದುಡಿಮೆ [Wage Labour]**

ದಿನಗೂಲಿಯ ಅಥವಾ ಸಂಬಳದ ನೆಲೆಯಲ್ಲಿ ದುಡಿಯುವ ಮಕ್ಕಳನ್ನು ನಗರ ಹಾಗೂ ಗ್ರಾಮೀಣ ಪ್ರದೇಶಗಳೆರಡರಲ್ಲೂ ಕಾಣಬಹುದಾಗಿದೆ. ಎಳೆಯ ಮಕ್ಕಳು ಕುಶಲ ಕಲೆಗಳಲ್ಲಿ [ಉದಾ: ಲೋಹದ ಕೆಲಸ, ಚರ್ಮದ ಕೆಲಸ, ಬಟ್ಟೆಯ ಮೇಲೆ ಕಸೂತಿ ಬಿಡಿಸುವ ಕೆಲಸ, ಊದುಬತ್ತಿ ಹಾಗೂ ಬೀಡಿ ಕಟ್ಟುವ ಕಾರ್ಯಗಳಲ್ಲಿ ಇತ್ಯಾದಿ], ಚಿಕ್ಕ ಪ್ರಮಾಣದ ಕೈಗಾರಿಕೆಗಳಲ್ಲಿ, ವ್ಯಾಪಾರೋದ್ಯಮಗಳಲ್ಲಿ ಮತ್ತು ಹಾಲು–ಪತ್ರಿಕೆ ಮುಂತಾದುವುಗಳನ್ನು ಮನೆ ಮನೆಗೆ ಪೂರೈಕೆ ಮಾಡುವಂತಹ, ಗೃಹಕೈಗಾರಿಕೆಗಳಲ್ಲಿ ಮತ್ತು ಸೇವಾಧಾರಿತ ವೃತ್ತಿಗಳಲ್ಲಿ ತೊಡಗಿರುವುದನ್ನು ನಗರ ಗ್ರಾಮಗಳೆರಡರಲ್ಲೂ ಕಾಣಬಹುದು. ಉಪಾಹಾರ ಮಂದಿರಗಳಲ್ಲಿ ತಿಂಡಿತಿನಿಸು ಪೂರೈಕೆ ಮಾಡುವ 'ಮಾಣಿ'ಗಳಂತೆ ಇಲ್ಲವೇ ಪಾತ್ರೆ ತೊಳೆಸುವವರಾಗಿ, ರಸ್ತೆಯಲ್ಲಿ ಬಿದ್ದ ಪ್ಲಾಸ್ಟಿಕ್, ಹಳೆಯ ಕಬ್ಬಿಣದ ಸಾಮಾನುಗಳನ್ನು ಸಂಗ್ರಹಿಸುವ, ವಾಹನಗಳನ್ನು ತೊಳೆಯುವ, ತಲೆಯ ಮೇಲೆ ಕೂಡಿದಷ್ಟು ಸಾಮಾನುಗಳನ್ನು ಹೊತ್ತುಕೊಂಡು ಮನೆಮನೆಗೆ ಮಾರಾಟಮಾಡುವ, ದರ್ಜಿಯವನಿಗೆ ಸಹಾಯಕನಾಗಿ ದುಡಿಯುವ, ಬೂಟು ಪಾಲೀಶು ಮಾಡುವ, ಹಾಗೂ ಇನ್ನಿತರ ಬಗೆಯ ಕಾರ್ಯಗಳಲ್ಲಿ ತೊಡಗಿರುವ ಮಕ್ಕಳೂ ಕೂಡ ಇದೇ ವರ್ಗಕ್ಕೆ ಸೇರಿಕೊಳ್ಳುವರು.

**(iv) ಜೀತದ ದುಡಿಮೆ [Bonded Labour]**

ಪ್ರೌಢ ವ್ಯಕ್ತಿಗಳಂತೆ ಚಿಕ್ಕಮಕ್ಕಳೂ ಕೂಡ ಜೀತದಾಳುಗಳಂತೆ ದುಡಿಯುವರು. ಒಂದು ನಿಗದಿತ ಅವಧಿಯವರೆಗೆ ಅಥವಾ ಸಾಲ ತೀರುವವರೆಗೆ ಅಥವಾ ಜೀವಮಾನ ಪರ್ಯಂತ ತಮ್ಮ ಮಕ್ಕಳು ಸಾಲಗಾರನ ಮನೆಯಲ್ಲಿ ದುಡಿಯುತ್ತಾರೆಂಬ ಕರಾರಿನೊಂದಿಗೆ ತಮ್ಮ ಎಳೆಯ ಮಕ್ಕಳನ್ನು ದುಡಿಮೆಗೆ ಹಚ್ಚುವ ಹೆತ್ತವರು ನಗರ ಹಾಗೂ ಗ್ರಾಮೀಣ ಪರಿಸರದಲ್ಲಿದ್ದಾರೆ. ಉದಾ: ಕರ್ನಾಟಕದಲ್ಲಿ 16 ವರ್ಷಕ್ಕೂ ಕಡಿಮೆ ವಯಸ್ಸಿನ 10.3% ಮಕ್ಕಳು, ಆಂಧ್ರ ಪ್ರದೇಶದ 21.0%ರಷ್ಟು ಹಾಗೂ ತಮಿಳುನಾಡಿನ 8.7%ರಷ್ಟು ಮಕ್ಕಳು ಜೀತದಾಳುಗಳಾಗಿ ಕೆಲಸ ಮಾಡುವ ಚಿತ್ರಣವನ್ನು ಇಂದಿಗೂ ಕಾಣಬಹುದು. ಕೇವಲ 5 ವರ್ಷದ ಮಕ್ಕಳನ್ನು ಜೀತದ ದುಡಿಮೆಗೆ ಹಚ್ಚುವ ತಾಯ್ತಂದೆಯರೂ ಇದ್ದಾರೆ. ಒರಿಸ್ಸಾ ಹಾಗೂ ಕರ್ನಾಟಕದಲ್ಲಿ ಕೆಲವೆಡೆಗಳಲ್ಲಿ ತಾಯ್ತಂದೆಯರ ಸಾಲವನ್ನು ತೀರಿಸಲು ಚಿಕ್ಕ ಹೆಣ್ಣುಮಕ್ಕಳನ್ನು ಸಾಲಗಾರರ ಮನೆಯಲ್ಲಿ ಗೃಹಕೃತ್ಯ ನಿರ್ವಹಿಸಲು ಕೆಲವು ವರ್ಷಗಳವರೆಗೆ ಜೀತದಾಳುಗಳಂತೆ ಬಿಡುವುದುಂಟು. ಇನ್ನು ಕೆಲವು ಪ್ರದೇಶಗಳಲ್ಲಿ 40 ವರ್ಷಗಳಿಗಿಂತಲೂ ಹಿರಿಯನಾದ ತಂದೆಯು ತನ್ನನ್ನು ಜೀತದ ಕಟ್ಟುಪಾಡಿನಿಂದ ಬಿಡಿಸಿಕೊಳ್ಳಲು ತನ್ನ ಎಳೆಯ ಮಕ್ಕಳನ್ನು ಜೀತಕ್ಕೆ

ಒಳಪಡಿಸುವುದುಂಟು. ಜೀತದ ದುಡಿಮೆಯನ್ನು ಕಾನೂನಿನ ಮೂಲಕ ತೊಡೆದು ಹಾಕಲಾಗಿದ್ದರೂ ಅದು ಇಂದಿಗೂ ಹಲವೆಡೆಗಳಲ್ಲಿ ಆಚರಣೆಯಲ್ಲಿದೆ.

### 3.3. ಬಾಲಕಾರ್ಮಿಕ ಪದ್ಧತಿಗೆ ಕಾರಣವಾದ ಅಂಶಗಳು

ಬಾಲಕಾರ್ಮಿಕ ಸಮಸ್ಯೆಯು ಉದ್ಭವವಾಗಲು ಹಲವಾರು ಕಾರಣಗಳಿದ್ದು ಅವು ಈ ಕೆಳಗಿನಂತಿವೆ. ಭಾರತದಲ್ಲಿ ಬಾಲಕರ ದುಡಿತಕ್ಕೆ ಆರ್ಥಿಕ ಅವಶ್ಯಕತೆಯೇ ಪ್ರಧಾನ ಕಾರಣವಾಗಿದೆ. ಬಡತನದ ಬೇಗೆಯಲ್ಲಿ ಸಿಲುಕಿರುವ ಎಷ್ಟೋ ಮಕ್ಕಳು ತಮ್ಮಿಂದ ಕುಟುಂಬದ ಆದಾಯವನ್ನು ಸ್ವಲ್ಪವಾದರೂ ಹೆಚ್ಚಿಸುವ ಉದ್ದೇಶದಿಂದ ಇಂದು ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳು ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ.

- ಭಾರತದಲ್ಲಿ ಬಾಲಕರ ದುಡಿತಕ್ಕೆ ಆರ್ಥಿಕ ಅವಶ್ಯಕತೆಯೇ ಪ್ರಧಾನ ಕಾರಣವಾಗಿದೆ. ಬಡತನದ ಬೇಗೆಯಲ್ಲಿ ಸಿಲುಕಿರುವ ಎಷ್ಟೋ ಮಕ್ಕಳು ತಮ್ಮಿಂದ ಕುಟುಂಬದ ಆದಾಯವನ್ನು ಸ್ವಲ್ಪವಾದರೂ ಹೆಚ್ಚಿಸುವ ಉದ್ದೇಶದಿಂದ ಇಂದು ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳು ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ.
- ಕೈಗಾರಿಕೋದ್ಯಮಿಗಳು (ಮಾಲೀಕರು) ಇಂದು ಮಕ್ಕಳನ್ನು ಹೆಚ್ಚು ದುಡಿಸಿಕೊಳ್ಳಲು ಕಾರಣವೆಂದರೆ ಕಡಿಮೆ ವೇತನವನ್ನು ನೀಡಿ ಅಧಿಕ ಲಾಭವನ್ನು ಗಳಿಸುವುದೇ ಮುಖ್ಯ ಉದ್ದೇಶವಾಗಿದೆ. ಮಕ್ಕಳಿಗೆ ಅವರದೇ ಆದ ಕಾರ್ಮಿಕ ಸಂಘಟನೆಗಳು ಇರಲಾರದ ಕಾರಣ ಅವರು ಹೆಚ್ಚಿನ ವೇತನಕ್ಕಾಗಿ ಹೋರಾಟಕ್ಕಿಳಿಯುವ ಸಾಧ್ಯತೆಗಳು ತೀರಾ ಕಡಿಮೆ ಪರಿಣಾಮವಾಗಿ ಇಂದು ಗಣಿ ಕೆಲಸಗಳಲ್ಲಿ, ಬೀಡಿ ಕಟ್ಟುವ ಕಾರ್ಖಾನೆಗಳಲ್ಲಿ, ಗಾಜಿನ ಕಾರ್ಖಾನೆಗಳಲ್ಲಿ, ನೇಯ್ಗೆಯ ಕೆಲಸಗಳಲ್ಲಿ ಈ ಉದ್ದೇಶಗಳಿಂದಲೇ ಮಕ್ಕಳನ್ನು ಹೆಚ್ಚೆಚ್ಚು ದುಡಿಸಿಕೊಳ್ಳಲಾಗುತ್ತಿದೆ.
- ಮಕ್ಕಳ ಹಿತಾಸಕ್ತಿಗಳನ್ನು ತಂದೆ-ತಾಯಿಗಳು ಗಮನಿಸಿದಿದ್ದಾಗ ಮಕ್ಕಳು ತಾವೇ ದುಡಿಯಲು ಮುಂದಾಗುವ ಸಾಧ್ಯತೆಗಳು ಹೆಚ್ಚಿವೆ.
- ಕೌಟುಂಬಿಕ ವಿಘಟನೆಗಳು ಸಂಭವಿಸಿದಾಗ ಮಕ್ಕಳು ಮನೆಬಿಟ್ಟು ಪಟ್ಟಣ ಸೇರಿ ಕೆಲಕಾಲ ಅಲೆದು ನಂತರ ಯಾವುದಾದರೂ ಉದ್ಯೋಗ ಸೇರಿಕೊಳ್ಳುವ ದೃಶ್ಯ ಇಂದಿನ ನಗರಗಳಲ್ಲಿ ಸರ್ವಸಾಮಾನ್ಯವಾಗಿದೆ. ಉದಾಃ ಒಂದು ಸಮೀಕ್ಷೆಯಂತೆ ದೆಹಲಿನಗರದಲ್ಲಿ ನಾನಾ ಬಗೆಯ ದುಡಿತದಲ್ಲಿ ತೊಡಗಿಸಿಕೊಂಡಿರುವ ಸುಮಾರು 4 ಲಕ್ಷ ಮಕ್ಕಳಲ್ಲಿ 1.5ಲಕ್ಷ ಮಕ್ಕಳು ಬೀದಿ ಬದಿಯ ಮಕ್ಕಳಾಗಿದ್ದಾರೆ.

- ದುಷ್ಟ ಪ್ರವೃತ್ತಿ (ಚಟ) ಗಳಿಗೆ ಒಳಗಾದ ಮಕ್ಕಳು ತಮ್ಮ ಮನೆಯಲ್ಲಿ ಹಣ ಸಿಗದೇ ಇದ್ದಾಗ ಅನೇಕ ತೆರನಾದ ದುಡಿಮೆಗೆ ಒಳಗಾಗಿ ಹಣ ಸಂಪಾದಿಸುವ ಕಾರ್ಯದಲಲಿ ತೊಡಗಬಹುದು.
- ಕೆಲವು ಮಾಲೀಕರು ಹೇಳುವಂತೆ ಬಡತನದ ಬೇಗೆಯಿಂದ ಮಕ್ಕಳನ್ನು ಮುಕ್ತವಾಗಿಸಲು ಮಾನವೀಯತೆಯ ದೃಷ್ಟಿಯಿಂದ ತಾವು ಮಕ್ಕಳನ್ನು ಉದ್ಯೋಗಕ್ಕೆ ಸೇರಿಸಿಕೊಂಡಿದ್ದೇವೆ ಎಂಬ ಹೇಳಿಕೆಯು ಬಾಲದುಡಿಮೆಗೆ ಪ್ರೇರಕ ಶಕ್ತಿಯಾಗಿದೆ.
- ದೊಡ್ಡ ನಗರಗಳಲ್ಲಿರುವ ಕೆಲವು ಭೂಗತದೊರೆಗಳು ಅನೇಕ ಮಕ್ಕಳನ್ನು ಅಪಹರಿಸಿ ಅವರಿಗೆ ಉದ್ಯೋಗವನ್ನು ಕೊಡಿಸುವ ಆಮಿಷ ತೋರಿಸಿ, ಮೋಸಗೊಳಿಸಿ, ಅನೇಕ ಸಮಾಜ ಘಾತಕ ಕೃತ್ಯಗಳಲ್ಲಿ ಅಥವಾ ಅಪರಾಧಿ ಚಟುವಟಿಕೆಗಳಲ್ಲಿ ತೊಡಗಿಸುವುದುಂಟು. ಅಪರಾಧಿ ಚಟುವಟಿಕೆಗಳನ್ನು ಮಾಡುವಾಗ್ಗೆ ಅಕಸ್ಮಿಕವಾಗಿ ಪೋಲಿಸರು ಬಂಧಿಸಿದರೆ, ಕಾನೂನಿಂದ ಅವರು ಪಾರಾಗಬಹುದೆಂದೂ, ಇಲ್ಲವೇ ಸಣ್ಣ ಮಕ್ಕಳೆಂದೂ ತಿಳಿದು ಬೆದರಿಸಿ ಬಿಡುವ ಸಾಧ್ಯತೆಗಳು ಹೆಚ್ಚಿರುವುದರಿಂದ ಭೂಗತದೊರೆಗಳು ಮಕ್ಕಳ ದುರ್ಲಾಭ ಪಡೆಯುತ್ತಿರುವುದು ಮತ್ತೊಂದು ಕಾರಣವಾಗಿದೆ.
- ಬಾಲಕಾರ್ಮಿಕರ ಸಮಸ್ಯೆಗೆ ಸಂಬಂಧಿಸಿದಂತೆ ಕಟ್ಟುನಿಟ್ಟಿನ ಸಾರ್ವತ್ರಿಕ ಕಾಯ್ದೆ-ಕಾನೂನುಗಳ ವೈಫಲ್ಯವು ಕೂಡಾ ಇಂದು ಈ ಸಮಸ್ಯೆಯು ಬೆಳವಣಿಗೆಯಾಗಲು ಕಾರಣವಾಗಿದೆ.
- ಸಾಮಾಜಿಕ ರಂಗದಲ್ಲಿ ಇದುವರೆಗೂ ಈ ಸಮಸ್ಯೆಯನ್ನು ಕುರಿತು ಸಂಘಟಿತ ಹೋರಾಟವಾಗಲಿ, ಸಾಮಾಜಿಕ ಜಾಗೃತಿಯಾಗಲಿ ನಡೆದಿಲ್ಲ. ಹೀಗಾಗಿ ಈ ಸಮಸ್ಯೆಯ ಬಗೆಗೆ ಸಾಮಾಜಿಕ ಸ್ತರಗಳಲ್ಲಿ ಕಂಡುಬರುವ ಮೌನಸಮ್ಮತಿಯು ಕೂಡಾ ಇನ್ನೊಂದು ಕಾರಣವಾಗಿದೆ.

**ಮಕ್ಕಳ ದುಡಿತದ ಕಾರಣಗಳು** [Causes of Child Labour]

ಮಕ್ಕಳ ದುಡಿತಕ್ಕೆ ಹಲವಾರು ಕಾರಣಗಳಿದ್ದು ಅವುಗಳಲ್ಲಿ ಈ ಮುಂದಿನವುಗಳು ಬಹಳ ಪ್ರಮುಖವಾದವುಗಳು.

- **ಆರ್ಥಿಕ ಕಾರಣಗಳು [Econmic Causes]**

**(i) ಬಡತನ:** ಭಾರತದಲ್ಲಿ ಸುಮಾರು 40%ರಷ್ಟು ಮಂದಿ ಆರ್ಥಿಕ ದುರವಸ್ಥೆಯಲ್ಲಿ ಅರ್ಥಾತ್ ಬಡತನದಲ್ಲಿ ಸಿಲುಕಿರುವ ಹಿನ್ನೆಲೆಯಲ್ಲಿ ಮಕ್ಕಳ ದುಡಿತಕ್ಕೆ ಆರ್ಥಿಕ ಒತ್ತಡವು ಅತ್ಯಂತ ಪ್ರಧಾನ ಕಾರಣವೆಂದು ಹೇಳಬಹುದಾಗಿದೆ. ಚಿಕ್ಕ ಮಕ್ಕಳು ಕುಟುಂಬದ ಆದಾಯವನ್ನು ಕಿಂಚಿತ್ತಾದರೂ ಹೆಚ್ಚಿಸಲು

ಅನಿವಾರ್ಯವಾಗಿ ದುಡಿಯಬೇಕಾದ ಪರಿಸ್ಥಿತಿ ಕೆಲವು ಕುಟುಂಬಗಳಲ್ಲಿದೆ. ತಾಯಿ–ತಂದೆಯರು ನಿರ್ಗತಿಕರಾಗಿರುವಾಗ, ಅತ್ಯಂತ ಕಡಿಮೆ ಕೂಲಿ ಸಂಪಾದಿಸುವವರಾಗಿರುವಾಗ ಅಥವಾ ಯಾವುದಾದರೂ ರೋಗ–ರುಜಿನಗಳಿಗೆ ಈಡಾಗಿ ಹೆಚ್ಚು ದುಡಿಯಲಾರದವರಾಗಿರುವಾಗ, ಸಾಲದ ಸುಳಿಯಲ್ಲಿ ಸಿಲುಕಿರುವಾಗ ಹಾಗೂ ಇಂತಹ ಇನ್ನಿತರ ಒತ್ತಡಗಳಿಗೆ ಒಳಗಾದಾಗ ಮಕ್ಕಳು ದುಡಿದು ಅಲ್ಪ–ಸ್ವಲ್ಪ ಸಂಪಾದನೆ ಮಾಡುವುದು ಅನಿವಾರ್ಯವಾಗುವುದು. ಹಾಗೆ ದುಡಿಯಲು ಅವರು ಸಿದ್ಧರಿಲ್ಲದೇ ಇದ್ದಲ್ಲಿ ಭಿಕ್ಷೆ ಬೇಡುವ ಇಲ್ಲವೇ ಅಪರಾಧಗಳನ್ನು ನಡೆಸಿ, ಕಾನೂನು ಬಾಹಿರವಾಗಿ ಸಂಪಾದನೆ ಮಾಡಿ ಹೊಟ್ಟೆ ತುಂಬಿಸಿಕೊಳ್ಳಬೇಕಾದ ಪರಿಸ್ಥಿತಿಗೆ ಒಳಗಾಗಬೇಕಾಗುವುದು.

**(ii) ಕಡಿಮೆ ಕೂಲಿ ನೀಡಿ ಹೆಚ್ಚು ದುಡಿಸಿಕೊಳ್ಳುವ ಸಾಧ್ಯತೆ:** ಎಷ್ಟೋ ಮಂದಿ ಉದ್ಯಮಿಗಳು ತಮ್ಮ ಉದ್ಯಮದಲ್ಲಿ ದುಡಿಯಲು ಚಿಕ್ಕ ಮಕ್ಕಳನ್ನೇ ಹೆಚ್ಚಾಗಿ ನೇಮಕ ಮಾಡಿಕೊಳ್ಳಲು ಒಂದು ಮುಖ್ಯ ಕಾರಣವೇನೆಂದರೆ ಮಕ್ಕಳಿಗೆ ಕಡಿಮೆ ಕೂಲಿ ನೀಡಿ ಹೆಚ್ಚು ದುಡಿಸಿಕೊಳ್ಳುವ ಸಾಧ್ಯತೆಯಿರುವುದು. ಮಕ್ಕಳು ಚಿಕ್ಕವರಾಗಿದ್ದರಿಂದ ಅವರಿಗೆ ಅವರದ್ದೇ ಆದ 'ಕಾರ್ಮಿಕ ಸಂಘ'ವಿಲ್ಲದೇ ಇರುವುದರಿಂದ, ಅಥವಾ ಪ್ರೌಢ ಕಾರ್ಮಿಕರ ಸಂಘಗಳು ಈ ಮಕ್ಕಳ ಹಿತಾಸಕ್ತಿಗಳಿಗಾಗಿ ಹೋರಾಡುವ ಕಾರ್ಯಕ್ರಮಗಳನ್ನು ಇರಿಸಿಕೊಂಡಿಲ್ಲದೇ ಇರುವುದರಿಂದ ಕಡಿಮೆ ಕೂಲಿ ಪಡೆದು ಹೆಚ್ಚು ದುಡಿಯಬೇಕಾದ ಅನಿವಾರ್ಯತೆಗೆ ಮಕ್ಕಳು ದೂಡಲ್ಪಡುತ್ತಾರೆ. **ಉದಾ:** ಗಣಿ ಕೈಗಾರಿಕೆಗಳಲ್ಲಿ, ಚರ್ಮದ ಸಾಮಾನುಗಳ ತಯಾರಿಕಾ ಘಟಕಗಳಲ್ಲಿ, ಗಾಜಿನ ಕಾರ್ಖಾನೆಗಳಲ್ಲಿ ಚಿಕ್ಕಮಕ್ಕಳನ್ನು ಈ ಉದ್ದೇಶದಿಂದಲೇ ಹೆಚ್ಚಿನ ಸಂಖ್ಯೆಯಲ್ಲಿ ಬಳಸಿಕೊಳ್ಳಲಾಗುತ್ತಿದೆ.

**(iii) ಕಾರ್ಖಾನೆಗಳ ಲಾಭ ಹೆಚ್ಚಿಸುವ ಉದ್ದೇಶ:** ಕೆಲವು ಕಾರ್ಖಾನೆಗಳಲ್ಲಿ ಉದ್ಯಮಿಗಳು [ಉದಾ: ಪಟಾಕಿ ತಯಾರಕರು, ಜಮಖಾನೆಗಳ ಉತ್ಪಾದಕರು, ಬೆಂಕಿ ಕಡ್ಡಿಗಳನ್ನು ಉತ್ಪಾದಿಸುವ ಕೈಗಾರಿಕೋದ್ಯಮಿಗಳು] ಮಕ್ಕಳನ್ನು ಉದ್ಯೋಗಿಗಳನ್ನಾಗಿ ನೇಮಕ ಮಾಡಿಕೊಳ್ಳುವುದರಿಂದಾಗಿಯೇ ತಮಗೆ ಹೆಚ್ಚು ಲಾಭಗಳಿಸಲು ಸಾಧ್ಯವೆಂಬ ಕಾರಣದಿಂದ ಮಕ್ಕಳ ದುಡಿಮೆಗೆ ಪ್ರೋತ್ಸಾಹ ನೀಡುವವರಾಗಿದ್ದಾರೆ. ಉದಾ: ಉತ್ತರ ಪ್ರದೇಶದ ಜಮಖಾನೆ ತಯಾರಿಸುವ ಕೈಗಾರಿಕಾ ಘಟಕಗಳಲ್ಲಿ 75,000ಕ್ಕೂ ಹೆಚ್ಚಿನ ಸಂಖ್ಯೆಯ ಚಿಕ್ಕಮಕ್ಕಳು ದುಡಿಯುತ್ತಿದ್ದು ಈ ಘಟಕಗಳು ವರ್ಷಂಪ್ರತಿ 150 ಕೋಟಿ ರೂಪಾಯಿಗಳಿಗೂ ಹೆಚ್ಚಿನ ವಿದೇಶೀ ವಿನಿಮಯ ಗಳಿಸುತ್ತಿದ್ದಾರೆ. 1990ರಲ್ಲಿ ಇವುಗಳು ರಫ್ತುಮಾಡಿದ ತಮ್ಮ ಉತ್ಪಾದಿತ ವಸ್ತುಗಳ ಮೊತ್ತವು 300 ಕೋಟಿ ರೂಪಾಯಿಗಳಿಗೂ ಅಧಿಕವಾಗಿತ್ತು.

- **ಕೌಟುಂಬಿಕ ಕಾರಣಗಳು [Familial Reasons]**

ಕುಟುಂಬದ ಆರ್ಥಿಕ ದುರವಸ್ಥೆಯು ಈ ಹಿಂದೆಯೇ ಹೇಳಿರುವಂತೆ ಮಕ್ಕಳ ದುಡಿತಕ್ಕೆ ಪ್ರಧಾನ ಕಾರಣವಾಗಿರುವಂತೆ ವಿವಾಹವಿಚ್ಛೇದ, ಪರಿತ್ಯಜನೆ, ಕೌಟುಂಬಿಕ ಕ್ರೌರ್ಯ-ಹಿಂಸೆ, ಬಿಗುವಿನಿಂದ ಕೂಡಿದ ಕೌಟುಂಬಿಕ ಸಂಬಂಧಗಳು-ಮುಂತಾದವುಗಳ ಪರಿಣಾಮವಾದ ಕೌಟುಂಬಿಕ ವಿಘಟನೆ ಕೂಡ ಮಕ್ಕಳ ದುಡಿತಕ್ಕೆ ಕಾರಣವಾಗುವುದು. ಇಂತಹ ಕುಟುಂಬಗಳಲ್ಲಿ ಕಾಲ ಕಳೆಯಲಾಗದ ಮಕ್ಕಳು ಅವುಗಳಿಂದ ತಪ್ಪಿಕೊಳ್ಳಲು ಉದ್ಯೋಗಗಳಿಗೆ ಇಳಿಯಬಹುದು. ಅಥವಾ ಕೌಟುಂಬಿಕ ದುರವಸ್ಥೆಯಿಂದಾಗಿ ಮನೆಬಿಟ್ಟು ಓಡಿಹೋಗುವ ಮಕ್ಕಳು ಹೊಟ್ಟೆಹೊರೆಯಲೋಸುಗ ಇಂತಹ ಉದ್ಯೋಗಗಳಿಗೆ ಇಳಿಯಬಹುದು.

ಮನೆಗಳಿಂದ ಓಡಿಹೋಗುವ ಅನೇಕ ಮಂದಿ ಮಕ್ಕಳು ಪಟ್ಟಣ ಸೇರಿ ಕೆಲಕಾಲ ಬೀದಿಬದಿಯ ಮಕ್ಕಳಾಗಿ [Street Children] ಅಂಡಲೆದು ಕೊನೆಗೆ ಯಾವುದಾದರೂ ಚಿಕ್ಕ ಉದ್ಯೋಗಕ್ಕೆ ಸೇರಿಕೊಳ್ಳುವುದು ಭಾರತದಲ್ಲಿ ಸಾಮಾನ್ಯವಾಗಿದೆ. ಉದಾ: ಒಂದು ಅಂದಾಜಿನಂತೆ ದೆಹಲಿಯಲ್ಲಿ ನಾನಾ ಬಗೆಯ ದುಡಿತದಲ್ಲಿ ತೊಡಗಿಕೊಂಡಿರುವ ಸುಮಾರು 4 ಲಕ್ಷ ಮಕ್ಕಳಲ್ಲಿ 1.5 ಲಕ್ಷ ಮಕ್ಕಳು ಇಂತಹ ಬೀದಿ ಬದಿಯ ಮಕ್ಕಳಾಗಿದ್ದಾರೆ.

ಅಸಮರ್ಪಕವಾದ ಸಾಮಾಜೀಕರಣ, ಅತ್ಯುಗ್ರವಾದ ಕೌಟುಂಬಿಕ ಕ್ರೌರ್ಯ ಹಾಗೂ ಕಠಿಣ ಆರ್ಥಿಕ ಪರಿಸ್ಥಿತಿಗಳ ಬಲಿಪಶುಗಳಾದ ಚಿಕ್ಕ ಮಕ್ಕಳು ಮನೆಬಿಟ್ಟು ಓಡಿಹೋಗುವ ಸಾಧ್ಯತೆ ಹೆಚ್ಚಾಗಿದ್ದು ಇಂತಹ ಮಕ್ಕಳೇ ಸಾಮಾನ್ಯವಾಗಿ ಒತ್ತಾಯದ ದುಡಿತಕ್ಕೆ ಒಳಗಾಗುವರು.

- **ಇತರ ಕಾರಣಗಳು [Other Causes]**

**(i) ಬಲವಾದ ಗೀಳಿನ ಪರಿಣಾಮ:** ಬೀಡಿ, ಸಿಗರೇಟು ಸೇದುವ, ತಂಬಾಕು ಸೇವಿಸುವ, ಜುಗಾರಿ ಆಡುವ, ಲಾಟರಿ ಟಿಕೆಟ್ಟು ಕೊಳ್ಳುವ, ಸಿನಿಮಾ ನೋಡುವ – ಹಾಗೂ ಇಂತಹ ಇತರ ಬಗೆಯ ಬಲವಾದ ಗೀಳು ಹೊಂದಿರುವ ಬಡಕುಟುಂಬಗಳಿಗೆ ಸೇರಿದ ಮಕ್ಕಳು ತಮ್ಮ ಖರ್ಚಿಗೆ ಮನೆಯಿಂದ ದುಡ್ಡು ಸಿಗದೇ ಇದ್ದಾಗ ಈ ತೆರನಾದ ದುಡಿಮೆಗಳಲ್ಲಿ ತೊಗಿಕೊಂಡು ಹಣ ಸಂಪಾದನೆ ಮಾಡುವ ಯತ್ನ ಮಾಡಬಹುದು.

**(ii) ಉದ್ಯೋಗಪತಿಗಳು ನೀಡುವ ಸಮರ್ಥನೆ:** ಬಡತನದ ಬೇಗೆಗೆ ಸಿಲುಕಿ ಹಸಿವಿನಿಂದ ಕಂಗೆಟ್ಟು ಉಪವಾಸದಿಂದ ಸಾಯುವ ಸ್ಥಿತಿಯನ್ನು ತಲುಪಿರುವ ಮಕ್ಕಳನ್ನು ಹಾಗೆ ಸಾಲು ಬಿಡುವುದಕ್ಕಿಂತ ಅಥವಾ ಅಪರಾಧಗೈಯ್ಯುವ ಸನ್ನಿವೇಶಕ್ಕೆ ಅವರನ್ನು ನೂಕುವುದಕ್ಕಿಂತ ಚಿಕ್ಕ-ಪುಟ್ಟ ಕೆಲಸಗಳನ್ನು ನೀಡಿ

ಬದುಕಲು ಅವಕಾಶ ಕಲ್ಪಿಸುವುದು ಎಷ್ಟೋ ಮೇಲು-ಎಂಬುದಾಗಿ ಮಕ್ಕಳನ್ನು ದುಡಿತಕ್ಕೆ ಒಳಪಡಿಸಿದ ಅದೆಷ್ಟೋ ಮಂದಿ ಉದ್ಯೋಗಪತಿಗಳು ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳುವರು. ಅವರುಗಳು ನೀಡುವ ಸಮರ್ಥನೆ ಏನೇ ಇದ್ದರೂ ಮನೆಯಿಂದ ಓಡಿಹೋಗುವ ಮಕ್ಕಳಿಗೂ ಕೆಲಸ ನೀಡಿ ಬದುಕಲು ಅವಕಾಶ ನೀಡುವ ವ್ಯವಸ್ಥೆಯಿಂದೆ ಎಂಬ ಅಂಶವೇ ಎಷ್ಟೋ ಮಕ್ಕಳನ್ನು ಮನೆಯಿಂದ ಹೊರಬರುವಂತೆ ಹಾಗೂ ಉದ್ಯೋಗದ ಹಾದಿ ಹಿಡಿಯುವಂತೆ ಮಾಡುವ ಪ್ರೇರಕ ಶಕ್ತಿಯಾಗಿದೆ ಎನ್ನಬಹುದು.

**(iii) ಸರ್ಕಾರೀ ಯಂತ್ರಣದ ಹಾಗೂ ಶಾಸನ ವ್ಯವಸ್ಥೆಯ ವೈಫಲ್ಯ:** ಮಕ್ಕಳ ದುಡಿತವನ್ನು ನಿಷೇಧಿಸುವಲ್ಲಿ ಪರಿಣಾಮಕಾರಿಯಾಗಿ ಕಾರ್ಯಚರಿಸಬೇಕಾದ ಯಂತ್ರಣ ಹಾಗೂ ನೌಕರಶಾಹೀ ವರ್ಗವು ಈ ಸಮಸ್ಯೆಯ ಬಗ್ಗೆ ನಿರ್ಲಿಪ್ತವಾಗಿರುವುದರಿಂದ ಹಾಗೂ ಸದ್ಯದ ಆರ್ಥಿಕ ಪರಿಸ್ಥಿತಿಯಲ್ಲಿ ಮಕ್ಕಳ ದುಡಿತವನ್ನು ನಿಲ್ಲಿಸಿ ಆ ಮಕ್ಕಳಿಗೆ ಪರ್ಯಾಯ ವ್ಯವಸ್ಥೆ ಕಲ್ಪಿಸಿಕೊಡುವ ಸಾಮರ್ಥ್ಯ ಸರ್ಕಾರಕ್ಕೆ ಇಲ್ಲವೆಂಬ ನಿಲುವಿಗಂಟಿಕೊಂಡಿರುವ ಕಾರಣದಿಂದಲೂ ಮಕ್ಕಳ ದುಡಿತವು ಕಾನೂನಿ ನೆರಳಿನಲ್ಲಿಯೇ ಮುಂದುವರಿದಿದೆ.

**(iv) ಸಾಮಾಜಿಕ ಜಾಗೃತಿಯ ಕೊರತೆ:** ಮಕ್ಕಳ ದುರ್ಬಳಕೆ ಹಾಗೂ ಮಕ್ಕಳ ದುಡಿತದ ಬಗ್ಗೆ ಮತ್ತು ಈ ಸಮಸ್ಯೆಗಳ ಗಂಭೀರತೆಯ ಬಗ್ಗೆ ಸಮಾಜದಲ್ಲಿ ಸರಿಯಾದ ಜಾಗೃತಿಯಿಲ್ಲದೇ ಇರುವುದರಿಂದ ಹಾಗೂ ಇಂತಹ ಜಾಗೃತಿಯನ್ನು ನಿರ್ಮಿಸುವ ಯಾವುದೇ ಆಂದೋಲನ ಅಥವಾ ಅಭಿಯಾನ ನಮ್ಮಲ್ಲಿ ನಡೆದಿಲ್ಲವಾದ ಕರಾಮ ಈ ಸಮಸ್ಯೆಗಳು ಸಮಾಜದ ಮೌನ ಸಮ್ಮತಿ ಪಡೆದುಕೊಂಡು ಇಂದಿಗೂ ಅಸ್ತಿತ್ವದಲ್ಲಿ ಉಳಿದಿದೆ.

**(v) ಮಕ್ಕಳ ಅಪಹರಣ ಹಾಗೂ ಒತ್ತೆಯಿರಿಸುವ ಪ್ರವೃತ್ತಿ:** ಮಕ್ಕಳನ್ನು ಅಪಹರಿಸುವ ಹಾಗೂ ಅಪಹರಿಸಿದ ಮಕ್ಕಳನ್ನು ಕೆಲವು ಉದ್ಯೋಗಪತಿಗಳಿಗೆ ಮಾರಾಟಮಾಡುವ ಹಾಗೂ ಒತ್ತೆಯಿರಿಸುವ ಕೆಲವು ಸಮಾಜದ್ರೋಹಿ ಶಕ್ತಿಗಳೂ ನಮ್ಮಲ್ಲಿರುವುದರಿಂದ ಮಕ್ಕಳ ದುಡಿತಕ್ಕೆ ಆಶ್ರಯ ಸಿಕ್ಕಿದಂತಾಗಿದೆ.

ಕೈಗಾರಿಕೋದ್ಯಮಿಗಳು (ಮಾಲೀಕರು) ಇಂದು ಮಕ್ಕಳನ್ನು ಹೆಚ್ಚು ದುಡಿಸಿಕೊಳ್ಳಲು ಕಾರಣವೆಂದರೆ ಕಡಿಮೆ ವೇತನವನ್ನು ನೀಡಿ ಅಧಿಕ ಲಾಭವನ್ನು ಗಳಿಸುವುದೇ ಮುಖ್ಯ ಉದ್ದೇಶವಾಗಿದೆ. ಮಕ್ಕಳಿಗೆ ಅವರದೇ ಆದ ಕಾರ್ಮಿಕ ಸಂಘಟನೆಗಳು ಇರಲಾರದ ಕಾರಣ ಅವರು ಹೆಚ್ಚಿನ ವೇತನಕ್ಕಾಗಿ ಹೋರಾಟಕ್ಕಿಳಿಯುವ ಸಾಧ್ಯತೆಗಳು ತೀರಾ ಕಡಿಮೆ ಪರಿಣಾಮವಾಗಿ ಇಂದು ಗಣಿ ಕೆಲಸಗಳಲ್ಲಿ, ಬೀಡಿ ಕಟ್ಟುವ ಕಾರ್ಖಾನೆಗಳಲ್ಲಿ, ಗಾಜಿನ ಕಾರ್ಖಾನೆಗಳಲ್ಲಿ, ನೇಯ್ಗೆಯ ಕೆಲಸಗಳಲ್ಲಿ ಈ ಉದ್ದೇಶಗಳಿಂದಲೇ

ಮಕ್ಕಳನ್ನು ಹೆಚ್ಚೆಚ್ಚು ದುಡಿಸಿಕೊಳ್ಳಲಾಗುತ್ತಿದೆ. ಮಕ್ಕಳ ಹಿತಾಸಕ್ತಿಗಳನ್ನು ತಂದೆ-ತಾಯಿಗಳು ಗಮನಿಸಿದಿದ್ದಾಗ ಮಕ್ಕಳು ತಾವೇ ದುಡಿಯಲು ಮುಂದಾಗುವ ಸಾಧ್ಯತೆಗಳು ಹೆಚ್ಚಿವೆ.

ಕೌಟುಂಬಿಕ ವಿಘಟನೆಗಳು ಸಂಭವಿಸಿದಾಗ ಮಕ್ಕಳು ಮನೆಬಿಟ್ಟು ಪಟ್ಟಣ ಸೇರಿ ಕೆಲಕಾಲ ಅಲೆದು ನಂತರ ಯಾವುದಾದರೂ ಉದ್ಯೋಗ ಸೇರಿಕೊಳ್ಳುವ ದೃಶ್ಯ ಇಂದಿನ ನಗರಗಳಲ್ಲಿ ಸರ್ವಸಾಮಾನ್ಯವಾಗಿದೆ. ಉದಾಃ ಒಂದು ಸಮೀಕ್ಷೆಯಂತೆ ದೆಹಲಿನಗರದಲ್ಲಿ ನಾನಾ ಬಗೆಯ ದುಡಿತದಲ್ಲಿ ತೊಡಗಿಸಿಕೊಂಡಿರುವ ಸುಮಾರು 4 ಲಕ್ಷ ಮಕ್ಕಳಲ್ಲಿ 1.5ಲಕ್ಷ ಮಕ್ಕಳು ಬೀದಿ ಬದಿಯ ಮಕ್ಕಳಾಗಿದ್ದಾರೆ.

ದುಷ್ಟ ಪ್ರವೃತ್ತಿ (ಚಟ) ಗಳಿಗೆ ಒಳಗಾದ ಮಕ್ಕಳು ತಮ್ಮ ಮನೆಯಲ್ಲಿ ಹಣ ಸಿಗದೇ ಇದ್ದಾಗ ಅನೇಕ ತೆರನಾದ ದುಡಿಮೆಗೆ ಒಳಗಾಗಿ ಹಣ ಸಂಪಾದಿಸುವ ಕಾರ್ಯದಲಲಿ ತೊಡಗಬಹುದು. ಕೆಲವು ಮಾಲೀಕರು ಹೇಳುವಂತೆ ಬಡತನದ ಬೇಗೆಯಿಂದ ಮಕ್ಕಳನ್ನು ಮುಕ್ತವಾಗಿಸಲು ಮಾನವೀಯತೆಯ ದೃಷ್ಟಿಯಿಂದ ತಾವು ಮಕ್ಕಳನ್ನು ಉದ್ಯೋಗಕ್ಕೆ ಸೇರಿಸಿಕೊಂಡಿದ್ದೇವೆ ಎಂಬ ಹೇಳಿಕೆಯು ಬಾಲದುಡಿಮೆಗೆ ಪ್ರೇರಕ ಶಕ್ತಿಯಾಗಿದೆ.

ದೊಡ್ಡ ನಗರಗಳಲ್ಲಿರುವ ಕೆಲವು ಭೂಗತದೊರೆಗಳು ಅನೇಕ ಮಕ್ಕಳನ್ನು ಅಪಹರಿಸಿ ಅವರಿಗೆ ಉದ್ಯೋಗವನ್ನು ಕೊಡಿಸುವ ಆಮಿಷ ತೋರಿಸಿ, ಮೋಸಗೊಳಿಸಿ, ಅನೇಕ ಸಮಾಜ ಘಾತಕ ಕೃತ್ಯಗಳಲ್ಲಿ ಅಥವಾ ಅಪರಾಧಿ ಚಟುವಟಿಕೆಗಳಲ್ಲಿ ತೊಡಗಿಸುವುದುಂಟು. ಅಪರಾಧಿ ಚಟುವಟಿಕೆಗಳನ್ನು ಮಾಡುವಾಗ್ಗೆ ಅಕಸ್ಮಿಕವಾಗಿ ಪೋಲಿಸರು ಬಂಧಿಸಿದರೆ, ಕಾನೂನಿಂದ ಅವರು ಪಾರಾಗಬಹುದೆಂದೂ, ಇಲ್ಲವೇ ಸಣ್ಣ ಮಕ್ಕಳೆಂದೂ ತಿಳಿದು ಬೆದರಿಸಿ ಬಿಡುವ ಸಾಧ್ಯತೆಗಳು ಹೆಚ್ಚಿರುವುದರಿಂದ ಭೂಗತದೊರೆಗಳು ಮಕ್ಕಳ ದುರ್ಲಾಭ ಪಡೆಯುತ್ತಿರುವುದು ಮತ್ತೊಂದು ಕಾರಣವಾಗಿದೆ.

ಬಾಲಕಾರ್ಮಿಕರ ಸಮಸ್ಯೆಗೆ ಸಂಬಂಧಿಸಿದಂತೆ ಕಟ್ಟುನಿಟ್ಟಿನ ಸಾರ್ವತ್ರಿಕ ಕಾಯ್ದೆ-ಕಾನೂನುಗಳ ವೈಫಲ್ಯವು ಕೂಡಾ ಇಂದು ಈ ಸಮಸ್ಯೆಯು ಬೆಳವಣಿಗೆಯಾಗಲು ಕಾರಣವಾಗಿದೆ. ಸಾಮಾಜಿಕ ರಂಗದಲ್ಲಿ ಇದುವರೆಗೂ ಈ ಸಮಸ್ಯೆಯನ್ನು ಕುರಿತು ಸಂಘಟಿತ ಹೋರಾಟವಾಗಲಿ, ಸಾಮಾಜಿಕ ಜಾಗೃತಿಯಾಗಲಿ ನಡೆದಿಲ್ಲ. ಹೀಗಾಗಿ ಈ ಸಮಸ್ಯೆಯ ಬಗೆಗೆ ಸಾಮಾಜಿಕ ಸ್ತರಗಳಲ್ಲಿ ಕಂಡುಬರುವ ಮೌನಸಮ್ಮತಿಯು ಕೂಡಾ ಇನ್ನೊಂದು ಕಾರಣವಾಗಿದೆ.

ಬಾಲಕಾರ್ಮಿಕ ಪದ್ಧತಿಯು ಸಾಮಾಜಿಕ ಮತ್ತು ಆರ್ಥಿಕ ಸ್ವರೂಪದ ಒಂದು ಸಮಸ್ಯೆಯಾಗಿದ್ದು, ಅದಕ್ಕೆ ಕಾರಣಗಳು ಹಲವಾರು ಹಾಗೂ ದೀರ್ಘ ಹಿನ್ನಲೆಯನ್ನು ಹೊಂದಿರುವಂತಹವು. ಅವುಗಳಲ್ಲಿ ಮುಖ್ಯವಾದವುಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಿ ವಿವರಿಸಬಹುದು.

- ಆರ್ಥಿಕ ಸಮಸ್ಯೆ (ಬಡತನ).
- ನಿರುದ್ಯೋಗ ಮತ್ತು ಅರೆ ಉದ್ಯೋಗ.
- ಪೋಷಕರಲ್ಲಿ ಹಾಗೂ ಮಕ್ಕಳಲ್ಲಿ ಅನಕ್ಷರತೆ ಮತ್ತು ಅಜ್ಞಾನ.
- ಪಾಲಕರ ಮತ್ತು ಪೋಷಕರ ಬೇಜಾವಬ್ದಾರಿತನ.
- ಮಾಲೀಕರ ಆದ್ಯತೆ ಮತ್ತು ಸಮರ್ಥನೆ.
- ದುಷ್ಟ ಸ್ನೇಹಿತರ ಸಹವಾಸ.
- ಅಸಮರ್ಪಕ ಕಾನೂನು ಕ್ರಮ ಹಾಗೂ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸದೇ ಇರುವುದು.
- ವಯಸ್ಕ ಕಾರ್ಮಿಕರ ಕೆಳಮಟ್ಟದ ಆದಾಯ.
- ಕೌಟುಂಬಿಕ ವಿಘಟನೆ.
- ಕಷ್ಟಕರವಾದ ಜೀವನ ಪರಿಸ್ಥಿತಿ.

ಈ ಎಲ್ಲಾ ಅಂಶಗಳು ಬಾಲಕಾರ್ಮಿಕ ಪದ್ದತಿಗೆ ಪೂರಕವಾದ ಅಂಶಗಳಾಗಿವೆ ಎಂದು ಹೇಳಬಹುದು. ಈ ಮೇಲಿನ ಎಲ್ಲಾ ಕಾರಣಗಳನ್ನು ಈ ಕೆಳಗಿನಂತೆ ವಿವರಿಸಬಹುದು.

- **ಆರ್ಥಿಕ ಸಮಸ್ಯೆ (ಬಡತನ)**

ಬಡತನವು ಭಾರತದಲ್ಲಿ ಮತ್ತು ಜಗತ್ತಿನಲ್ಲಿ ಇತರ ಆರ್ಥಿಕವಾಗಿ ಹಿಂದುಳಿದರಾಷ್ಟ್ರಗಳಲ್ಲಿ ತುಂಬಾ ಗಮನಾರ್ಹ ಸಾಮಾಜಿಕ ಸಮಸ್ಯೆಯಾಗಿ ಪರಿಣಮಿಸಿದೆ. ಬಡತನಎಂದರೇನು? ಎಂಬುದನ್ನು ಹಲವಾರು ಶಾಸ್ತ್ರಜ್ಞರು ತಮ್ಮದೇ ಯಾದ ವ್ಯಾಖ್ಯಾನಗಳನ್ನು ನೀಡಿದ್ದಾರೆ. ಅವುಗಳನ್ನು ಈ ಕೆಳಗಿನಂತೆ ವ್ಯಾಖ್ಯಾನಿಸಬಹುದು.

ಜೆ.ಎಲ್.ಗಿಲಿನ್ ಮತ್ತು ಜೆ.ಪಿ.ಗಿಲಿನ್ ಇವರ ಪ್ರಕಾರ 'ಒಬ್ಬ ವ್ಯಕ್ತಿಯ ಅಸಮರ್ಪಕ ಆದಾಯ ಇಲ್ಲವೇ ವಿವೇಕ ರಹಿತ ವೆಚ್ಚಗಳಿಂದ ಅವನ ಭೌತಿಕ ಮಾನಸಿಕ ಸಾಮರ್ಥ್ಯಗಳಿಗಾಗಿ ಸೂಕ್ತ ಜೀವನ ಮಟ್ಟವನ್ನು ನಿರ್ವಹಿಸಲಾಗದೆ ಇರುವ ಮತ್ತು ಅವನು ಸದಸ್ಯನಾಗಿರುವ ಸಮಾಜದಲ್ಲಿ ಮತ್ತು ತನ್ನನ್ನೇ ಅವಲಂಬಿಸಿರುವವರಿಗೆ ಸೂಕ್ತ ರೀತಿಯ ಜೀವನ ಮಟ್ಟವನ್ನು ಕಾಯ್ದುಕೊಳ್ಳಲು ಅಸಮರ್ಥರಾಗಿರುವ ಪರಿಸ್ಥಿತಿಯನ್ನು ಬಡತನ ಎನ್ನುತ್ತೇವೆ ಎಂದಿದ್ದಾರೆ.

ಜೆ.ಬಿ. ಗೊಡಾರ್ಡ್ ರವರ ಪ್ರಕಾರ 'ವ್ಯಕ್ತಿಯು ತನ್ನ ಮತ್ತು ತನ್ನನ್ನು ಅವಲಂಬಿಸಿರುವವರ ಆರೋಗ್ಯ ಹಾಗೂ ಶಕ್ತಿಯನ್ನು ಕಾಪಾಡಿಕೊಳ್ಳಲು ಅಗತ್ಯವಾಗಿರುವ ಪ್ರಮಾಣದ ಪದಾರ್ಥಗಳನ್ನು ಪೂರೈಸಿಕೊಳ್ಳಲು ಆಗದೇ ಹೋದಾಗ ಬಡತನ ಎನ್ನುತ್ತೇವೆ ಎಂದಿದ್ದಾರೆ.

ಆಡಮ್ ಸ್ಮಿತ್ ರವರ ಪ್ರಕಾರ 'ಒಬ್ಬ ಮನುಷ್ಯನು ಬಡವ ಇಲ್ಲವೇ ಶ್ರೀಮಂತ ಎನ್ನುವುದನ್ನು ಅವನು ಜೀವನದಲ್ಲಿ ಪಡೆದು ಅನುಭವಿಸುತ್ತಿರುವ ಅವಶ್ಯಕತೆಗಳು, ಸೌಲಭ್ಯಗಳು ಹಾಗೂ ವಿನೋದಕ್ಕೆ ಸಂಬಂಧಿಸಿದ ಪದಾರ್ಥಗಳ ಪ್ರಮಾಣದ ಪ್ರಕಾರ ನಿರ್ಧರಿಸಬಹುದಾಗಿದೆ ಎಂದಿದ್ದಾರೆ.

ಬಾಲಕಾರ್ಮಿಕ ಪದ್ದತಿಗೆ ಅತೀ ಮುಖ್ಯವಾದ ಕಾರಣಗಳಲ್ಲಿ ಆರ್ಥಿಕ ಸಮಸ್ಯೆ (ಬಡತನ) ಅತ್ಯಂತ ಪ್ರಮುಖವಾದದ್ದು. ನಮ್ಮ ದೇಶದ ಸಮಸ್ಯೆಗಳಲ್ಲಿ ಈ ಬಡತನ ಅತ್ಯಂತ ಜಟಿಲವಾದ ಸಮಸ್ಯೆಯಾಗಿ ಪರಿಣಮಿಸಿದೆ. ಬಡತನದ ಬೇಗೆಯಲ್ಲಿ ಸಿಲುಕಿರುವ ಎಷ್ಟೋ ಮಕ್ಕಳು ತಮ್ಮಿಂದ ಕುಟುಂಬದ ಆದಾಯವನ್ನು ಸ್ವಲ್ಪವಾದರೂ ಹೆಚ್ಚಿಸುವ ಉದ್ದೇಶದಿಂದ ಇಂದು ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳು ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ.

ಭಾರತದ ಜನಸಂಖ್ಯೆಯ ಸುಮಾರು ಅರ್ಧದಷ್ಟು ಜನರು ಬಡತನ ರೇಖೆಯ ಕೆಳಗಡೆ ಜೀವಿಸುತ್ತಿದ್ದಾರೆ. ಹಾಗೂ ಗ್ರಾಮೀಣ ಪ್ರದೇಶದಲ್ಲಿ ಭೂಮಿಯ ಹಂಚಿಕೆ ಮತ್ತು ಭೂ ಒಡೆತನವು ಅತ್ಯಂತ ಅಸಮಾನ ರೀತಿಯಲ್ಲಿದೆ. ಕೆಳವರ್ಗದಲ್ಲಿರುವ ಸುಮಾರು ಅರ್ಧದಷ್ಟು ಸಂಸಾರಗಳು ಕೇವಲ ಶೇ.4 ರಷ್ಟು ಭಾಗ ಜಮೀನನ್ನು ಸಾಗುವಳಿ ಮಾಡುತ್ತಿದ್ದರೆ, ಸುಮಾರು ಶೇ.30.4 ರಷ್ಟು ಕುಟುಂಬಗಳು ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಬೃಹತ್ ನಗರಗಳ ಸುಮಾರು 1/3 ಜನರು ಕೊಳಚೆ ಪ್ರದೇಶಗಳಲ್ಲಿ ಹಾಗೂ ತಾತ್ಕಾಲಿಕ ಆಸರೆ ಒದಗಿಸುವ ಜೋಪಡಿಗಳಲ್ಲಿ ವಾಸಿಸುತ್ತಿದ್ದಾರೆ. ಇಂತಹ ಕುಟುಂಬಗಳಲ್ಲಿ ಪ್ರತಿ ಒಂದು ಮಗುವನ್ನು ದುಡಿಯುವ ಮತ್ತೋರ್ವ ಸದಸ್ಯನೆಂದೇ ಪರಿಗಣಿಸಲಾಗುತ್ತಿದೆ. ಮಕ್ಕಳ ದುಡಿಮೆಯಿಂದಾಗಿ ಬರುವ ಆದಾಯವು ಅತ್ಯಲ್ಪವೆನಿಸಿದರೂ ಇಂತಹ ಕುಟುಂಬಗಳನ್ನು ಆರ್ಥಿಕ ದುಃಸ್ಥಿತಿಯಿಂದ ಪಾರುಮಾಡಲು ನೆರವಾಗಬಲ್ಲದು. ಆರ್ಥಿಕ ಪರಿಸ್ಥಿತಿಯ ಒತ್ತಡವು ಬಡ ಕುಟುಂಬಗಳ ಪೋಷಕರು ತಮ್ಮ ಮಕ್ಕಳನ್ನು ದುಡಿಮೆಗೆ ಹಾಗೂ ಶೋಷಣೆಗೆ ನೂಕಲೂ ಪ್ರೇರೇಪಿಸುತ್ತದೆ ಬಡತನ ಮತ್ತು ಮಕ್ಕಳ ದುಡಿಮೆಯು ಒಂದು ಮತ್ತೋಂದನ್ನು ಸೃಷ್ಟಿಸುವುದಲ್ಲದೆ, ಇವೆರಡೂ ಅಂತಹ ಕುಟುಂಬಗಳಲ್ಲಿ ಬೇರೂರುತ್ತವೆ.

ಭಾರತದಲ್ಲಿ ಮಕ್ಕಳ ದುಡಿತಕ್ಕೆ ಜೀವನಾವಶ್ಯಕ ವಸ್ತುಗಳ ಕೊರತೆಯೇ ಕಾರಣವಾಗಿದೆ. ಅದರಲ್ಲೂ ಗ್ರಾಮೀಣ ಸಮುದಾಯದ ಬಡಜನರು ಆಸ್ತಿಪಾಸ್ತಿಯಿಲ್ಲದೆ ಜೀವನ ನಿರ್ವಹಣೆಗೆ ಕಷ್ಟವಾಗಿರುವದರಿಂದ ತಮ್ಮ ಜೀವನಾವಶ್ಯಕತೆಗಳನ್ನು ಈಡೇರಿಸಿಕೊಳ್ಳಲು ಮಕ್ಕಳನ್ನೇ ಒತ್ತೆಯಿಡುತ್ತಿದ್ದಾರೆ. ಕುಟುಂಬದ ಆದಾಯವನ್ನು ಹೆಚ್ಚಿಸಲು ಮಕ್ಕಳನ್ನು ಒತ್ತಾಯ ಪೂರ್ವಕವಾಗಿ ಕೆಲಸಕ್ಕೆ ಕಳುಹಿಸುತ್ತಾರೆ ಅವರಿಗೆ ಸಿಗುವ ದಿನಗೂಲಿ ಕೂಡ ಕಡಿಮೆಯಾಗಿರುತ್ತದೆ ತಂದೆ ತಾಯಿಗಳ ಅನಾರೋಗ್ಯ, ದೈಹಿಕ ಹಾಗೂ ಮಾನಸಿಕ ಅಂಗವಿಕಲತೆ, ನಿರುದ್ಯೋಗ ಮುಂತಾದ ಅಂಶಗಳು ಮಕ್ಕಳನ್ನು ದುಡಿಯುವಂತೆ ಪ್ರೇರೆಪಿಸುತ್ತದೆ. ಬದುಕಿನ ಅನಿವಾರ್ಯತೆಗೆ ದುಡಿಯಲೇ ಬೇಕಾಗುತ್ತದೆ.

ಮಕ್ಕಳ ದುಡಿಮೆಯ ಹಣ ಇಲ್ಲದಿದ್ದರೆ, ಆ ಕುಟುಂಬಗಳ ಪರಿಸ್ಥಿತಿ ಶೋಚನಿಯವಾಗಿದೆ. ಒಬ್ಬನ ಕೂಲಿಯಿಂದ ಇಡೀ ಕುಟುಂಬ ಜೀವನ ಸಾಗಿಸಲು ದುಸ್ತರವಾಗುತ್ತದೆ. ಪುರುಷರು, ಸ್ತ್ರೀಯರು ಮತ್ತು ಮಕ್ಕಳು ಎಲ್ಲ ಸದಸ್ಯರು ದುಡಿಯಲೇ ಬೇಕು. ಪರ್ಯಾಯವಾದ ವ್ಯವಸ್ಥೆಯಿಲ್ಲದಿದ್ದರೆ ದಿನಕ್ಕೆ ಎರಡು ಹೊತ್ತಿನ ಊಟ ಸಿಗುವುದು ಕಷ್ಟವಾಗುತ್ತದೆ. ಹೀಗಾಗಿ ಅವರು ಅನುಭವಿಸುತ್ತಿರುವ ಕಡುಬಡತನ ಮಕ್ಕಳ ದುಡಿಮೆಗೆ ಕಾರಣವಾದ ಅಂಶವಾಗಿದೆ.

ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಸಹ ಅನೇಕ ಬಡ ಕುಟುಂಬಗಳನ್ನು ಕಾಣಬಹುದು. ಇಲ್ಲಿ ಹೊರಗಿನ ಊರುಗಳಿಂದ ಬಂದಂತಹ ಬಡ ಕುಟುಂಬಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಕಾಣುತ್ತೇವೆ ಸುಮಾರು ಒಟ್ಟು ಜನಸಂಖ್ಯೆಯ ಅರ್ಧಕ್ಕಿಂತ ಹೆಚ್ಚಿನವರು ಬಡತನ ರೇಖೆ ಗಿಂತ ಕೆಳಗಿದ್ದಾರೆ. ಎಂದು ಅಂಕಿ ಅಂಶಗಳಿಂದ ತಿಳಿಯಬಹುದು.

- **ನಿರುದ್ಯೋಗ ಹಾಗೂ ಅರೆಉದ್ಯೋಗ**

ಜಗತ್ತಿನಲ್ಲಿ ಎಲ್ಲ ರಾಷ್ಟ್ರಗಳಲ್ಲಿ ಅವು ಮುಂದುವರೆದಿರಲಿ ಇಲ್ಲವೆ ಹಿಂದುಳಿದಿರಲಿ ಸಾಮಾನ್ಯವಾಗಿ ಕಂಡುಬರುತ್ತಿರುವ ಸಾಮಾಜಿಕ ಸಮಸ್ಯೆ ಎಂದರೆ ನಿರುದ್ಯೋಗ ಹಾಗೂ ಅರೆಉದ್ಯೋಗ ಸಮಸ್ಯೆ ಎಂದು ಹೇಳಬಹುದು.

ನಿರುದ್ಯೋಗವನ್ನು ಹಲವಾರು ಶಾಸ್ತ್ರಜ್ಞರು ತಮ್ಮದೇಯಾದ ವ್ಯಾಖ್ಯೆಗಳನ್ನು ನೀಡಿದ್ದಾರೆ. ಅವುಗಳನ್ನು ಈ ಕೆಳಗಿನಂತೆ ವ್ಯಾಖ್ಯಾನಿಸಬಹುದು.

ಫೇರ್ ಚೈಲ್ಡ್ ರವರ ಪ್ರಕಾರ ಸಾಮಾನ್ಯವಾದ ಕೆಲಸದ ವೇಳೆಯಲ್ಲಿ ಸಾಮಾನ್ಯವಾದ ಕೂಲಿಗಳಲ್ಲಿ ಮತ್ತು ಸಾಮಾನ್ಯವಾದ ಪರಿಸ್ಥಿತಿಗಳಲ್ಲಿ ಸಾಮಾನ್ಯವಾದ ಕೆಲಸಗಾರರ ತಂಡವನ್ನು ಲಾಭದಾಯಕ ಕೆಲಸದಿಂದ ಒತ್ತಾಯ ಪೂರ್ವಕವಾಗಿ ಅಥವಾ ಇಚ್ಛಾಪೂರ್ವಕವಲ್ಲದ ರೀತಿಯಲ್ಲಿ ಪ್ರತ್ಯೇಕಿಸುವುದನ್ನು ನಿರುದ್ಯೋಗ ಎನ್ನುತ್ತೇವೆ.

ಕ್ರಿ.ಶ. 1919 ಲೀಗ್ ಆಫ್ ನೇಷನ್ಸ್ ಸಮಿತಿಯ ಪ್ರಕಾರ ಕೂಲಿಗಾಗಿ ಕೆಲಸ ಹುಡುಕುವ ತಮ್ಮ ಅರ್ಹತೆಗೆ ಅನುಗುಣವಾದ ಕೆಲಸವನ್ನು ಪಡೆಯಲಾಗದೆ ಇರುವ ಪರಿಸ್ಥಿತಿಯನ್ನು ನಿರುದ್ಯೋಗ ಎನ್ನುತ್ತೇವೆ.

ಅರೆ ಉದ್ಯೋಗವನ್ನು ಲಾರ್ಡ್ ಕೀನ್ಸ್ ರವರು ಈ ರೀತಿಯಲ್ಲಿ ವ್ಯಾಖ್ಯಾನ ನೀಡಿದ್ದಾರೆ ಪ್ರಸ್ತುತ ವಾಸ್ತವಿಕ ಕೂಲಿಗಿಂತಲೂ ಕಡಿಮೆ ಕೂಲಿಯನ್ನು ಪಡೆದು ಕೆಲಸ ಮಾಡಲು ಸಿದ್ದವಿರುವುದನ್ನು ಅರೆಉದ್ಯೋಗ ಎನ್ನುತ್ತಾರೆ ಎಂದು ಹೇಳಿದ್ದಾರೆ.

ನಮ್ಮ ದೇಶದಲ್ಲಿ ಸುಮಾರು 2001 ರ ಜನಗಣತಿ ಪ್ರಕಾರ ನಿರುದ್ಯೋಗಿಗಳ ಸಂಖ್ಯೆ ಹಾಗೂ ಅರೆ ಉದ್ಯೋಗಿಗಳ ಸಂಖ್ಯೆ 40 ರಿಂದ 50 ಕೋಟಿಗೂ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ

ಈ ಸಮಸ್ಯೆಯಿಂದಲೇ ಇಂದು ಬಾಲಕಾರ್ಮಿಕ ಸಮಸ್ಯೆ ಉದ್ಭವಗೊಳ್ಳಲು ಪ್ರಮುಖ ಕಾರಣವಾಗಿದೆ ಎಂದು ಹೇಳಬಹುದು.

ನಿರುದ್ಯೋಗ ಸಮಸ್ಯೆ ಹಾಗೂ ಅರೆ ಉದ್ಯೋಗ ಸಮಸ್ಯೆ ಬಾಲಕಾರ್ಮಿಕ ಪದ್ಧತಿ ನೆಲೆಯೂರಲು ಕಾರಣವಾಗಿದೆ ಎನ್ನಬಹುದು. ನಿರುದ್ಯೋಗ ಹಾಗೂ ಆಗೊಮ್ಮೆ ಈಗೊಮ್ಮೆ ಸಿಗುವ ಉದ್ಯೋಗ ಅಥವಾ ಅರೆ ಉದ್ಯೋಗದಂತಹ ಪರಿಸ್ಥಿತಿಗಳು ತಮ್ಮ ಮಕ್ಕಳನ್ನು ದುಡಿಯಲು ಕಳುಹಿಸುವಂತೆ ಪೋಷಕರನ್ನು ಒತ್ತಾಯಿಸುತ್ತವೆ. ಬಡತನದ ಬೇಗೆಯಲ್ಲಿ ಬೇಯುತ್ತಿರುವ ತಂದೆ ತಾಯಿ ಸಹಜವಾಗಿಯೆ ತಮ್ಮ ಮಕ್ಕಳನ್ನು, ಕುಟುಂಬದ ಆದಾಯವನ್ನು ಹೆಚ್ಚಿಸುವ ಸಾಧನವೆಂದು ಪರಿಗಣಿಸುತ್ತಾರೆ. ಒಂದು ಮಗುವಿನ ಜನನವನ್ನು ಕುಟುಂಬಕ್ಕಾಗಿ ದುಡಿಯುವ ಮತ್ತೆರಡು ಕೈಗಳ ಸೇರ್ಪಡೆ ಎಂದೇ ಪರಿಗಣಿಸುತ್ತಾರೆ.

ಅದರಂತೆಯೇ ಬಳ್ಳಾರಿ ಜಿಲ್ಲೆ ಹಾಗೂ ಕೊಪ್ಪಳ ಜಿಲ್ಲೆಯಾದ್ಯಂತ ಇಂತಹ ಹಲವಾರು ಕುಟುಂಬಗಳನ್ನು ಕಾಣಬಹುದು. ಅಂತಹ ಕುಟುಂಬಗಳು ಸಹಜವಾಗಿ ತಮ್ಮ ಕುಟುಂಬದ ವರಮಾನವನ್ನು ಹೆಚ್ಚಿಸಲು ಮಕ್ಕಳನ್ನು ದುಡಿಮೆಗೆ ತಳ್ಳುವ ಪ್ರವೃತ್ತಿ ಇದೆ ಎಂದು ಹೇಳಬಹುದು. ಇಂತಹ ಕುಟುಂಬಗಳು ದಿನ ಕೂಲಿ ಹಾಗೂ ಇನ್ನಿತರ ಅರೆ ಉದ್ಯೋಗವನ್ನು ಹೆಚ್ಚು ಅವಲಂಬಿಸಿರುವುದರಿಂದ ಕುಟುಂಬದ ಪ್ರತಿ ಸದಸ್ಯನೂ ಸಹ ಇಲ್ಲಿ ದುಡಿಯ ಬೇಕಾಗಿದೆ. ಆದ್ದರಿಂದ ನಿರುದ್ಯೋಗ ಹಾಗೂ ಅರೆ ಉದ್ಯೋಗ ಸಮಸ್ಯೆ ಸಹ ಬಾಲಕಾರ್ಮಿಕ ಪದ್ಧತಿಗೆ ಕಾರಣವಾಗಿದೆ ಎಂದು ಹೇಳಬಹುದು.

- **ಪೋಷಕರಲ್ಲಿ ಹಾಗೂ ಮಕ್ಕಳಲ್ಲಿ ಅನಕ್ಷರತೆ ಮತ್ತು ಅಜ್ಞಾನ**

ಬಾಲಕಾರ್ಮಿಕ ಪದ್ಧತಿಗೆ ಇನ್ನೊಂದು ಮುಖ್ಯ ಕಾರಣಗಳಲ್ಲಿ ಪೋಷಕರಲ್ಲಿ ಹಾಗೂ ಮಕ್ಕಳಲ್ಲಿ ಅನಕ್ಷರತೆ ಮತ್ತು ಅಜ್ಞಾನ ಸಹ ಒಂದು ಪ್ರಮುಖ ಕಾರಣವೆಂದು ಹೇಳಬಹುದು.

ನಮ್ಮ ದೇಶದಲ್ಲಿ ನಗರ ಪ್ರದೇಶ ಹಾಗೂ ಗ್ರಾಮೀಣ ಪ್ರದೇಶಗಳ ಮಕ್ಕಳ ನಡುವೆ ಹಾಗೂ ಹೆಣ್ಣು ಮತ್ತು ಗಂಡು ಮಕ್ಕಳ ನಡುವೆ ಸಾಕ್ಷರತೆಯ ಮಟ್ಟದಲ್ಲಿ ಸಾಕಷ್ಟು ಅಂತರವಿದೆ. ನಗರ ಪ್ರದೇಶದ ಮಕ್ಕಳಲ್ಲಿ 2/3 ಭಾಗ ಮಕ್ಕಳು ಸಾಕ್ಷರಸ್ಥರಿದ್ದರೆ ಗ್ರಾಮೀಣ ಪ್ರದೇಶಗಳಲ್ಲಿ ಕೇವಲ 1/3 ರಷ್ಟು ಮಾತ್ರ ಸಾಕ್ಷರಸ್ಥರನ್ನು ಕಾಣಬಹುದಾಗಿದೆ. ಅದರಲ್ಲಿಯೂ ಗ್ರಾಮೀಣ ಪ್ರದೇಶಗಳಲ್ಲಿ ಹೆಣ್ಣು ಮಕ್ಕಳ ಸಾಕ್ಷರತೆ ಇದರಲ್ಲಿ ಅರ್ಧದಷ್ಟು ಮಾತ್ರ ಎಂದು ಹೇಳಬಹುದು. ಆದ್ದರಿಂದ 5 – 14 ವಯೋಗುಂಪಿನ ಗಂಡು ಮತ್ತು ಹೆಣ್ಣು ಮಕ್ಕಳಿಗೆ ಕಡ್ಡಾಯ ಶಿಕ್ಷಣವನ್ನು ಒದಗಿಸುವ ದಿಸೆಯಲ್ಲಿನ ಸೀಮಿತ ಯಶಸ್ಸು ಮಕ್ಕಳ ದುಡಿಮೆಗೆ ಮತ್ತೊಂದು ಕಾರಣವೆನಿಸಿದೆ ಎನ್ನಬಹುದು. ಶಾಲೆಗೆ ಒಂದು ಮಗುವನ್ನು ಸೇರಿಸುವುದು ಎಂದರೆ ಒಂದು ಮಗುವನ್ನು ಶೋಷಣೆಯಿಂದ ಅರ್ಥಾತ್

ಮಕ್ಕಳ ದುಡಿಮೆಯಿಂದ ರಕ್ಷಿಸಿದಂತೆಯೇ ಸರಿ. ಆದಾಗ್ಯೂ ಇಂದಿನ ಶಿಕ್ಷಣ ವ್ಯವಸ್ಥೆ ಮತ್ತು ಸಾಮಾಜಿಕ ಪರಿಸ್ಥಿತಿ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಬಡ ತಂದೆ ತಾಯಿಯರನ್ನು ಪ್ರಚೋದಿಸುವಲ್ಲಿ ವಿಫಲವಾಗಿದೆ.

ಉದ್ಯೋಗಗಳನ್ನು ಹುಡುಕಿಕೊಂಡು ನಗರ ಪ್ರದೇಶಗಳಿಗೆ ವಲಸೆ ಬರುವ ಅನೇಕ ಕುಟುಂಬಗಳು ನಗರಗಳಲ್ಲಿನ ಅನಿಶ್ಚಯ ಹಾಗೂ ಅಲ್ಪ ಆದಾಯದ ಉದ್ಯೋಗ ಅವಕಾಶಗಳಿಂದ ಬೇಸತ್ತು ಮಕ್ಕಳನ್ನು ದುಡಿಮೆಗೆ ದೂಡುತ್ತಾರೆ. ಇದರಿಂದಾಗಿ ಅವರ ಕುಟುಂಬದ ಆರ್ಥಿಕ ಪರಿಸ್ಥಿತಿ ಸ್ವಲ್ಪ ಮಟ್ಟಿಗಾದರೂ ಸುಧಾರಿಸೀತು ಎಂಬ ಆಸೆ ಪೋಷಕರದ್ದು.

ತಾತ್ಪುರ್ತಿಕ ದುಡಿಮೆಯಿಂದ ದುಡ್ಡಿನ ಮೋಹಕ್ಕೆ ಒಳಗಾಗಿ ಚಿಕ್ಕ ವಯಸ್ಸಿನಲ್ಲಿ ದುಡಿಮೆಗೆ ಒಳಗಾಗುವುದಕ್ಕೆ ಅಜ್ಞಾನವೇ ಕಾರಣವಾಗಿದೆ. ಕೆಲವೊಮ್ಮೆ ಮಕ್ಕಳ ದುಡಿಮೆಗೆ ಅವರೇ ಕಾರಣರು, ಸ್ವತಂತ್ರವಾಗಿ ದುಡಿಯಬೇಕು, ನಾವು ದುಡಿಯುವವನಾಗ ಬೇಕೆಂಬ ಅಕಾಲಿಕ ಬಯಕೆಯಿಂದ ಶೋಷಣೆಗೆ ಒಳಗಾಗುತ್ತಿದ್ದಾರೆ. ಅಜ್ಞಾನಿಗಳಾದ ತಂದೆ ತಾಯಿಗಳು ಹಣಕೋಸ್ಕರ ಮಕ್ಕಳನ್ನು ದುಡಿಮೆಗೆ ಹಚ್ಚುವರು. ಶಾಲೆಗೆ ಕಳುಹಿಸುವುದು ನಷ್ಟವೆಂದು ಭಾವಿಸಿ ಕೆಲಸಕ್ಕೆ ಹಚ್ಚಿ ದುಡಿದು ತಂದ ಹಣದಿಂದ ಸಂಸಾರ ನಿಭಾಯಿಸಲಿಕ್ಕೆ ಸಹಾಯ ಎಂದು ಪರಿಗಣಿಸುವರು. ಅನಕ್ಷರತೆ ಮತ್ತು ಅಜ್ಞಾನವೇ ಮಕ್ಕಳನ್ನು ದುಡಿಮೆಗೆ ತಳ್ಳಲು ಪ್ರಮುಖ ಕಾರಣವಾಗಿದೆ.

ಅಧ್ಯಯನ ಕೈಗೊಂಡ ಬಳ್ಳಾರಿ ಜಿಲ್ಲೆ ಹಾಗೂ ಕೊಪ್ಪಳ ಜಿಲ್ಲೆಯ ಸುತ್ತಮುತ್ತಲಿನ ಗ್ರಾಮೀಣ ಪ್ರದೇಶಗಳಲ್ಲಿ ನಾವು ಅನೇಕ ಅನಕ್ಷರಸ್ಥ ಬಡ ಕುಟುಂಬಗಳನ್ನು ಕಾಣಬಹುದು. ಶಾಲೆಗೆ ಮಕ್ಕಳನ್ನು ಕಳುಹಿಸಿದರೆ ಅದರಿಂದ ಯಾವುದೇ ಪ್ರಯೋಜನವಿಲ್ಲ, ವಿದ್ಯಾವಂತನಾಗಿ ಮುಂದೊಂದು ದಿನ ನಿರುದ್ಯೋಗಿ ಆಗುವುದಕ್ಕಿಂತ ಈಗಿನಿಂದಲೇ ಅವನು ತನ್ನ ಕಾಲಮೇಲೆ ತಾನು ನಿಂತು ಕೊಳ್ಳುವವನಾಗಲಿ ಎಂಬ ಪೋಷಕರ ಅಜ್ಞಾನವೂ ಸಹ ಇಂದು ಬಾಲಕಾರ್ಮಿಕ ಪದ್ದತಿಗೆ ಕಾರಣವಾಗಿದೆ. ಅನಕ್ಷರತೆ ಹಾಗೂ ಅಜ್ಞಾನವೂ ಸಹ ಪ್ರಮುಖ ಕಾರಣವಾಗಿದೆ ಎಂದು ಹೇಳಬಹುದು.

- **ಪಾಲಕರ ಮತ್ತು ಪೋಷಕರ ಬೇಜವಬ್ದಾರಿತನ**

ತಂದೆ ತಾಯಿಯರ ಹಾಗೂ ಪೋಷಕರ ಬೇಜವಬ್ದಾರಿತನವು ಬಾಲಕಾರ್ಮಿಕ ಪದ್ದತಿಗೆ ಒಂದು ಮುಖ್ಯ ಕಾರಣವಾಗಿದೆ ಎಂದು ಹೇಳಬಹುದು. ಸಮಾಜದಲ್ಲಿ ಒಳ್ಳೆಯದೂ ಇದೆ, ಕೆಟ್ಟದೂ ಇದೆ. ಮಕ್ಕಳು ಅವುಗಳ ನಡುವಿನ ಬೇಧವನ್ನು ಅರ್ಥ ಮಾಡಿಕೊಳ್ಳಲು ಸರಿಯಾದ ಮಾರ್ಗದರ್ಶನ ಅತ್ಯಗತ್ಯ.

ತಂದೆ ತಾಯಿಯರ ನಿಯಂತ್ರಣದ ಕೊರತೆ ಇರುವ ಅಥವಾ ನಿಯಂತ್ರಣ ರಹಿತ ಬಾಲ್ಯವನ್ನನುಭವಿಸಿದ ಮಕ್ಕಳು ಹೆಚ್ಚಾಗಿ ಬಾಲಕಾರ್ಮಿಕರಾಗಿ ದುಡಿಯುವ ಸಾಧ್ಯತೆ ಇರುತ್ತದೆ. ನಗರ

ಪ್ರದೇಶಗಳಲ್ಲಿ ಪತಿಯು ಮನೆಯಿಂದ ಹೊರಗೆ ಕೆಲಸಕ್ಕೆ ಹೋಗುವುದರ ಜೊತೆಗೆ ಪತ್ನಿಯೂ ದುಡಿಯಲು ಮನೆಯಿಂದ ಹೊರಗಡೆ ಹೋಗುವ ಹೆಚ್ಚು ಪರಿಪಾಠವಿದೆ. ಆಗ ಮನೆಯಲ್ಲಿ ಉಳಿದ ಮಕ್ಕಳ ಪಾಲನೆ ಪೋಷಣೆ, ಮಾರ್ಗದರ್ಶನ ಮಾಡಲು ಯಾವುದೇ ಹಿರಿಯ ಸದಸ್ಯರು ಅಂದರೆ ಅಜ್ಜ-ಅಜ್ಜಿ, ತಂದೆ-ತಾಯಿ ಮೊದಲಾದ ವಯಸ್ಕರು ಲಭ್ಯವಿಲ್ಲದಿದ್ದಾಗ ಮಕ್ಕಳು ತಮ್ಮ ಖರ್ಚು ವೆಚ್ಚಗಳಿಗೆ ತಂದೆ ತಾಯಿಯರು ಯಾವುದೇ ರೀತಿಯ ಜವಾಬ್ದಾರಿಯನ್ನು ಕೊಡದೇ ಹೋದಾಗ ಮಕ್ಕಳು ದುಡಿಮೆ ಮಾಡಿ ತಮ್ಮ ಜೀವನವನ್ನು ನೆಡೆಸಬೇಕಾಗಿ ಬರುವುದರಿಂದ ಮಕ್ಕಳು ದುಡಿಮೆಗೆ ಹೋಗುವುದು ಅನಿವಾರ್ಯವಾಗುತ್ತದೆ.

ಮಕ್ಕಳ ಹಿತಾಸಕ್ತಿಗಳನ್ನು ತಂದೆ ತಾಯಿಗಳು ಗಮನಿಸದೇ ಇದ್ದಾಗ ಮಕ್ಕಳು ತಾವೇ ದುಡಿಯಲು ಮುಂದಾಗುವ ಸಾಧ್ಯತೆಗಳು ಹೆಚ್ಚಿವೆ. ಆದ್ದರಿಂದ ಪೋಷಕರು ಹಾಗೂ ಪಾಲಕರ ಬೇಜವಬ್ದಾರಿತನ ಸಹ ಬಾಲಕಾರ್ಮಿಕ ಸಮಸ್ಯೆಗೆ ಒಂದು ಪ್ರಮುಖ ಕಾರಣವಾಗಿದೆ ಎಂದು ಹೇಳಬಹುದು.

- **ಮಾಲೀಕರ ಆದ್ಯತೆ ಮತ್ತು ಸಮರ್ಥನೆ**

ಬಾಲಕಾರ್ಮಿಕ ಪದ್ದತಿಗೆ 'ಮಾಲೀಕರು ಮಕ್ಕಳಿಗೆ ಕೊಡುವ ಆದ್ಯತೆ ಹಾಗೂ ಅದನ್ನು ಸಮರ್ಥನೆ' ಮಾಡಿಕೊಳ್ಳುವುದು ಸಹ ಬಾಲಕಾರ್ಮಿಕ ಪದ್ದತಿಗೆ ಕಾರಣವಾಗಿದೆ ಎಂದು ಹೇಳಬಹುದು.

ಮಾಲೀಕರು ದೊಡ್ಡವರಿಗಿಂತ ಮಕ್ಕಳನ್ನೇ ಕೆಲಸಕ್ಕೆ ತೆಗೆದು ಕೊಳ್ಳುವುದಕ್ಕೆ ಆದ್ಯತೆಯನ್ನು ನೀಡುತ್ತಾರೆ. ಏಕೆಂದರೆ ಮಕ್ಕಳನ್ನು ಸುಲಭವಾಗಿ ನಿಯಂತ್ರಿಸಬಹುದು, ಕಡಿಮೆ ಕೂಲಿಯನ್ನು ಕೊಡಬಹುದು, ಇವರಿಗಾಗಿ ಕಾರ್ಮಿಕ ಸಂಘಗಳು ಇರುವುದಿಲ್ಲ. ಯಾವಾಗಲು ಚುರುಕುತನ ಕಂಡು ಬರುವುದರಿಂದ ಮಾಲೀಕರು ಬಾಲಕಾರ್ಮಿಕರಿಗೆ ಆದ್ಯತೆ ನೀಡುತ್ತಾರೆ.

ಮಕ್ಕಳನ್ನು ದುಡಿಸಿಕೊಳ್ಳುವ ಮಾಲೀಕರು ಅವರ ಬಗ್ಗೆ ಕರುಣೆ, ಪ್ರೀತಿ ತೋರಿಸಿದ ಹಾಗೆ ಮಾತನಾಡುತ್ತಾರೆ. ಅನ್ನಕ್ಕೆ ಹಚ್ಚಿದೆ ಎಂದು ಜಂಭದಿಂದ ಹೇಳುತ್ತಾರೆ. ಉಪವಾಸದಿಂದ ಮಕ್ಕಳನ್ನು ಮುಕ್ತಗೊಳಿಸಿದೆ, ಶಾಲೆಗೆ ಹೋಗದ ಮಕ್ಕಳು ಅಪರಾಧಿಗಳಾಗದಂತೆ ತಡೆಯಲು ದುಡಿಮೆಗೆ ಹಚ್ಚಿದ್ದೇವೆ ಎಂದು ತಮ್ಮನ್ನು ಸಮರ್ಥಿಸಿಕೊಳ್ಳುತ್ತಾರೆ. ಮಕ್ಕಳ ದುಡಿಮೆ ಬಗ್ಗೆ ಮಾತಾಡುವವರು ಮಕ್ಕಳಿಗೆ ಅನ್ನ, ಬಟ್ಟೆ ಕೊಡಲು ಆಗುವುದಿಲ್ಲ. ಎಲ್ಲಾ ಮಕ್ಕಳಿಗೆ ಸರ್ಕಾರ ಬದಲಿ ಉದ್ಯೋಗವನ್ನಾಗಲೀ ಮಾಡುವುದು ಕಷ್ಟ. ಸರ್ಕಾರದ ನಿಯಮ ಪುಕ್ಕಟೆಯಾದ ಹಾಗೂ ಕಡ್ಡಾಯವಾದ ಶಿಕ್ಷಣದ ವ್ಯವಸ್ಥೆಯ ಕಾನೂನು ಜಾರಿಯಲ್ಲಿರದ ಕಾರಣ ಯಜಮಾನರಿಗೆ ಬಾಲಕಾರ್ಮಿಕರ ಬಗ್ಗೆ ಆದ್ಯತೆ ಹಾಗೂ ಸಮರ್ಥನೆಗಳನ್ನು ಮಾಡಿ ಲಾಭಗಳಿಸುವಲ್ಲಿ ತೊಡಗಿದ್ದಾರೆ.

ಉದ್ಯೋಗಗಳನ್ನು ಅರಸಿ ನಗರಗಳಿಗೆ ಬರುವ ಅನೇಕ ಬಡಕುಟುಂಬಗಳು ನಗರಗಳಲ್ಲಿನ ಅನಿಶ್ಚಯ ಹಾಗೂ ಅಲ್ಪ ಆದಾಯದ ಉದ್ಯೋಗದಿಂದ ಬೇಸತ್ತು ಮಕ್ಕಳನ್ನು ದುಡಿಮೆಗೆ ದೂಡುತ್ತಾರೆ. ಇದರಿಂದಾಗಿ ಅವರ ಆರ್ಥಿಕ ಪರಿಸ್ಥಿತಿ ಸ್ವಲ್ಪವಾದರೂ ಸುಧಾರಿಸಿತು ಎಂಬ ಆಸೆ ಅವರದು. ಅದರಂತೆಯೇ ಅಧ್ಯಯನ ಕೈಗೊಂಡ ಬಳ್ಳಾರಿ ಜಿಲ್ಲೆ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಸಹ ಮಾಲೀಕರು ಮಕ್ಕಳನ್ನು ದುಡಿಸಿಕೊಳ್ಳುವುದನ್ನು ಸಮರ್ಥನೆ ಮಾಡಿಕೊಳ್ಳುತ್ತಾರೆ. ಅದರಿಂದ ಮಕ್ಕಳಿಗೆ ಎರಡು ಹೊತ್ತಿನ ಊಟ ಸಿಗುವುದಕ್ಕೆ ಸಹಾಯ ಮಾಡಿದೆ ಎಂದು ಹೇಳಿ ಅದರಿಂದ ಅವರಿಗೆ ಅನ್ನವನ್ನು ನೀಡಿದೆ ಎಂದು ತಮ್ಮ ನಿಲುವನ್ನು ಸಮರ್ಥಿಸಿ ಕೊಳ್ಳುವುದು ಸಹ ಬಾಲಕಾರ್ಮಿಕ ಪದ್ಧತಿಗೆ ಪ್ರಮುಖ ಕಾರಣವಾಗಿದೆ ಎಂದು ಹೇಳಬಹುದು.

ಕೆಲವು ಮಾಲೀಕರು ಹೇಳುವಂತೆ ಬಡತನದ ಬೇಗೆಯಿಂದ ಮಕ್ಕಳನ್ನು ಮುಕ್ತವಾಗಿಸಲು ಮಾನವೀಯತೆಯ ದೃಷ್ಟಿಯಿಂದ ತಾವು ಮಕ್ಕಳನ್ನು ಉದ್ಯೋಗಕ್ಕೆ ಸೇರಿಸಿಕೊಂಡಿದ್ದೇವೆ ಎಂಬ ಹೇಳಿಕೆಯು ಬಾಲದುಡಿಮೆಗೆ ಪ್ರೇರಕ ಶಕ್ತಿಯಾಗಿದೆ ಎಂದು ಹೇಳಬಹುದು.

- **ದುಷ್ಟ ಸ್ನೇಹಿತರ ಸಹವಾಸ**

ಬಾಲಕಾರ್ಮಿಕ ಪದ್ದತಿಗೆ ದುಷ್ಟ ಸ್ನೇಹಿತರ ಸಹವಾಸ ಸಹ ಅತ್ಯಂತ ಪ್ರಮುಖ ಕಾರಣವಾಗಿದೆ. ದುಷ್ಟ ಸ್ನೇಹಿತರ ಸಹವಾಸದಿಂದ ಅವರು ಅನೇಕ ದುಷ್ಟ ಪ್ರವೃತ್ತಿ (ಚಟ) ಗಳಿಗೆ ಒಳಗಾದ ಮಕ್ಕಳು ಮನೆಯಲ್ಲಿ ಹಣ ಸಿಗದೇ ಇದ್ದಾಗ ಅನೇಕ ತೆರನಾದ ದುಡಿಮೆಗೆ ಒಳಗಾಗಿ ಹಣ ಸಂಪಾದಿಸುವ ಕಾರ್ಯದಲ್ಲಿ ತೊಡಗುತ್ತಾರೆ ಎಂದು ಹೇಳಬಹುದು.

ಬೆಳೆಯುತ್ತಿರುವ ಮಕ್ಕಳ ವ್ಯಕ್ತಿತ್ವದ ಮೇಲೆ ಅವರ ಸಹಪಾಠಿಗಳ ಪ್ರಭಾವ ಬಹಳವಾಗಿರುತ್ತದೆ. ಎಳೆಯ ವಯಸ್ಸಿನಲ್ಲಿ ಯೋಗ್ಯರ ಸಹವಾಸವೇ ಸಿಗುವಂತೆ ಎಚ್ಚರಿಕೆ ವಹಿಸಬೇಕಾದುದು ತುಂಬಾ ಅಗತ್ಯ. ಬೀಡಿ, ಸಿಗರೇಟು, ಸೇದುವ ಅಭ್ಯಾಸ ಹಾಗೂ ಅನೇಕ ದುಶ್ಚಟಗಳನ್ನು ಬೆಳೆಸಿಕೊಂಡ ಮಕ್ಕಳು ನಂತರ ಅವುಗಳಿಗೆ ಮನೆಯಲ್ಲಿ ಹಣ ಸಿಗದೇ ಇದ್ದಾಗ ಅವರು ಅನೇಕ ತೆರನಾದ ದುಡಿಮೆಗೆ ಒಳಗಾಗಿ ಹಣ ಸಂಪಾದಿಸುವ ಕಾರ್ಯದಲ್ಲಿ ತೊಡಗುತ್ತಿದ್ದಾರೆ.

ಕೆಟ್ಟ ಸ್ನೇಹಿತರ ಸಹವಾಸದಿಂದ ಎಂತಹ ಒಳ್ಳೆಯ ಮಕ್ಕಳೂ ಸಹ ಅಡ್ಡ ದಾರಿ ಹಿಡಿದು ದಾರಿ ತಪ್ಪಿದ ಮಕ್ಕಳಾಗುವ ಸಾಧ್ಯತೆ ಇರುತ್ತದೆ. ನೂರು ಜನ ಕಳ್ಳರ ಗುಂಪಿನಲ್ಲಿ ಒಬ್ಬ ಸಜ್ಜನನಾಗಿರುವುದು ಸಾಧ್ಯವಾಗದು. ಬಹುಜನರ ಅಭಿಪ್ರಾಯಗಳಿಗೆ, ಮನೋಭಾವಗಳಿಗೆ, ವರ್ತನೆಗಳಿಗೆ ಸರಿ ಹೊಂದಿಸಿ ನೆಡೆಯುವುದು ಅಗತ್ಯವಾದುದು. ಆದ್ದರಿಂದ ಎಳೆಯ ವಯಸ್ಸಿನಲ್ಲಿ ಸಜ್ಜನರ, ಯೋಗ್ಯ ಸಹಪಾಠಿಗಳ ಸಹವಾಸವನ್ನಿರಿಸಿ ಕೊಂಡಿರ ಬೇಕಾದುದು ತುಂಬಾ ಅಗತ್ಯವಾಗಿದೆ.

* **ಅಸಮರ್ಪಕ ಕಾನೂನು ಕ್ರಮ ಹಾಗೂ ಅದನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸದೇ ಇರುವುದು**

ಬಾಲಕಾರ್ಮಿಕ ಸಮಸ್ಯೆಗೆ ಸಂಬಂಧಿಸಿದಂತೆ ಕಟ್ಟು ನಿಟ್ಟಿನ ಸಾರ್ವತ್ರಿಕ ಕಾಯ್ದೆ ಕಾನೂನುಗಳ ವೈಫಲ್ಯವು ಕೂಡಾ ಇಂದು ಬಾಲಕಾರ್ಮಿಕ ಸಮಸ್ಯೆಯು ಬೆಳವಣಿಗೆಯಾಗಲು ಕಾರಣವಾಗಿದೆ. ಬಾಲಕಾರ್ಮಿಕ ಸಮಸ್ಯೆಯನ್ನು ನೀಗಿಸುವ ದಿಸೆಯಲ್ಲಿ ಭಾರತ ಸರಕಾರವು ಅನೇಕ ಶಾಸನಗಳನ್ನು ಹೊರಡಿಸಿದ್ದರೂ ಅವುಗಳು ಪರಿಣಾಮಕಾರಿಯಾಗಿ ಜಾರಿಗೆ ಬಂದಿಲ್ಲ. ಹೋಟೆಲುಗಳಲ್ಲಿ, ಡಾಬಗಳಲ್ಲಿ, ಗಣಿಗಾರಿಕೆಯಲ್ಲಿ, ಹಲವಾರು ನಿಷೇದಿತ ಪ್ರದೇಶಗಳಲ್ಲಿ ಅನೇಕ ಮಕ್ಕಳು ಇಂದು ಕೆಲಸ ಮಾಡುವುದನ್ನು ನಾವೆಲ್ಲ ಕಾಣುತ್ತೇವೆ. ಅನೇಕ ಉದ್ದಿಮೆಗಳಲ್ಲಿ ಮಕ್ಕಳು ದುಡಿಯುತ್ತಿದ್ದಾರೆ. ಅನೇಕ ಪ್ರತಿಷ್ಠಿತ ವ್ಯಕ್ತಿಗಳ ಮನೆಗಳಲ್ಲಿ ಮನೆಗೆಲಸದವರಾಗಿ ದುಡಿಯುತ್ತಿದ್ದಾರೆ. ಇದೆಲ್ಲರಿಗೂ ತಿಳಿದ ಸಂಗತಿಯಾದರೂ, ಸಂಬಂಧಪಟ್ಟ ಇಲಾಖೆಯ ಅಧಿಕಾರಿಗಳು ಇವರ ಮೇಲೆ ಕಾನೂನಿನ ಕ್ರಮ ಜರುಗಿಸುತ್ತಿಲ್ಲ. ತನಿಖೆಗೆ ಅಧಿಕಾರಿಗಳು ಬಂದರೆ ಅವರಿಗೆ ಲಂಚ ಕೊಡುವ ಮೂಲಕ ತಪ್ಪನ್ನು ಮುಚ್ಚಿಡಲಾಗುತ್ತಿದೆ. ಕೆಲವರ ಮೇಲೆಯಾದರೂ ಕ್ರಮ ಜರುಗಿಸಿದರೆ, ಅದರಿಂದ ಇನ್ನುಳಿದವರು ಪಾಠ ಕಲಿತು ಮಕ್ಕಳನ್ನು ದುಡಿಮೆಗೆ ತೊಡಗಿಸಲಾರರು.

ಮಕ್ಕಳ ದುಡಿಮೆಯು, ಅದರಲ್ಲಿಯೂ ವಿಶೇಷವಾಗಿ ಅಪಾಯಕರ ಉದ್ಯೋಗಗಳಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವುದಕ್ಕೆ, ಅಸಮರ್ಪಕ ಹಾಗೂ ಅಷ್ಟೇನೂ ಪರಿಣಾಮಕಾರಿಯಲ್ಲದ ರೀತಿಯಲ್ಲಿ ಕಾಯಿದೆಗಳನ್ನು ಜಾರಿಗೊಳಿಸುತ್ತಿರುವ ಸರಕಾರವು ಸಹ ಅಷ್ಟೇ ಕಾರಣವೆಂದು ಹೇಳಬಹುದು. ಕಾಯಿದೆಗಳು ಪೂರ್ಣವಾಗಿ ಜಾರಿಯಾಗುವುದಕ್ಕಿಂತ, ಕಾಗದದ ಮೇಲೆ ಉಳಿಯುವುದೇ ಹೆಚ್ಚು. ಕಾನೂನಿನಲ್ಲಿರುವ ನ್ಯೂನತೆಗಳನ್ನು ಉದ್ಯೋಗಪತಿಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ಉಪಯೋಗಿಸಿ ಕೊಳ್ಳುತ್ತಾರೆ. ಸಣ್ಣ ಮತ್ತು ಕೌಟುಂಬಿಕ ಘಟಕಗಳಲ್ಲಿ ಮಕ್ಕಳನ್ನು ದುಡಿಮೆಗೆ ತೊಡಗಿಸುತ್ತಾರೆ. ಸರಕಾರಿ ಅಧಿಕಾರಿಗಳು ಫ್ಯಾಕ್ಟರಿ ಇನ್‌ಸ್ಪೆಕ್ಟರ್‌ಗಳು ಅನೇಕ ವೇಳೆ ತಮ್ಮ ಕರ್ತವ್ಯವನ್ನು ಯಶಸ್ವಿಯಾಗಿ ನಿರ್ವಹಿಸುವುದಿಲ್ಲ. ಇದರ ಪರಿಣಾಮ ಮಕ್ಕಳು ಶೋಷಣೆಗೆ ಒಳಗಾಗುವುದು ನಿಲ್ಲುವುದಿಲ್ಲ.

ಮಕ್ಕಳ ಸಂರಕ್ಷಣೆಗೆ ಸರಿಯಾದ ಕಾನೂನುಗಳು ಇಲ್ಲದಿರುವುದರಿಂದಲೂ ಅಥವಾ ಕಾನೂನನ್ನು ಸಮರ್ಪಕವಾಗಿ ಜಾರಿಗೆ ತರದೆ ಇರುವುದರಿಂದ ಬಾಲಕಾರ್ಮಿಕರನ್ನು ಶೋಷಣೆಗೆ ಒಳಗಾಗಿದ್ದಾರೆ. ಕಾನೂನುಗಳನ್ನು ಅನುಷ್ಠಾನಕ್ಕೆ ತರುವ ಲೋಪದಿಂದಾಗಿ ಮಕ್ಕಳ ಶೋಷಣೆಗೆ ಅವಕಾಶ ದೊರೆತಂತಾಗಿದೆ.

* **ವಯಸ್ಕ ಕಾರ್ಮಿಕರ ಕೆಳಮಟ್ಟದ ಆದಾಯ**

ಬಾಲಕಾರ್ಮಿಕ ಸಮಸ್ಯೆಗೆ ವಯಸ್ಕ ಕಾರ್ಮಿಕರ ತೀರಾ ಕಡಿಮೆ ಆದಾಯ ಸಹ ಒಂದು ಪ್ರಮುಖ ಕಾರಣವಾಗಿದೆ ಎಂದು ಹೇಳಬಹುದು. ಮನೆಯಲ್ಲಿ ದುಡಿಯುವ ವಯಸ್ಕರ ಆದಾಯ ತೀರಾ ಕೆಳಮಟ್ಟದಲ್ಲಿದ್ದಾಗ ಮಕ್ಕಳು ಸಹ ಕುಟುಂಬದ ಆದಾಯವನ್ನು ಹೆಚ್ಚಿಸುವ ಸಲುವಾಗಿ ದುಡಿಮೆಗೆ ಹೊಗುವುದು ಅನಿವಾರ್ಯವಾಗುತ್ತದೆ.

ತಂದೆ ತಾಯಿ ದುಡಿದು ತಂದ ವರಮಾನ ಕುಟುಂಬದ ಖರ್ಚಿಗೆ ಸಾಲದೆ ಹೋದಾಗ ಅವರು ತಮ್ಮ ಚಿಕ್ಕ ಮಕ್ಕಳನ್ನು ಶಾಲೆಗೆ ಕಳುಹಿಸುವ ಬದಲಾಗಿ ಕೆಲಸಕ್ಕೆ ಕಳುಹಿಸುವರು. ಆ ಮಕ್ಕಳು ತರುವ ಆದಾಯವನ್ನು ಬಳಸಿಕೊಂಡು ಹೊಟ್ಟೆ ಹೊರುವರು. ಬಡತನದ ಪರಿಸ್ಥಿತಿಯು ಮಕ್ಕಳನ್ನು ಕೆಲಸಕ್ಕೆ ಸೇರುವಂತೆ ಮಾಡುತ್ತದೆ. ಇನ್ನು ಕೆಲವು ಮಕ್ಕಳು ಅನಾಥರು, ದಿಕ್ಕಿಲ್ಲದವರು. ಅವರಿಗೆ ದುಡಿಯದೆ ಅನ್ಯಮಾರ್ಗವಿಲ್ಲ. ಇನ್ನು ಹಲವು ಮಕ್ಕಳು ಮನೆಯಿಂದ ನಗರಗಳಿಗೆ ಓಡಿ ಬಂದವರು ಅಂತಹವರಿಗೆ ನಗರಗಳಲ್ಲಿ ಯಾರ ಆಶ್ರಯವೂ ದೊರಕುವುದಿಲ್ಲ. ಹೊಟ್ಟೆಪಾಡಿಗಾಗಿ ಅಂತಹ ಮಕ್ಕಳು ಹೋಟೆಲು, ಡಾಬಾಗಳಲ್ಲಿ, ದಿನಸಿ ಅಂಗಡಿಗಳಲ್ಲಿ ಕೆಲಸಕ್ಕೆ ಸೇರಿ ಜೀವನ ನಡೆಸುವರು. ಅನೇಕರು ಕಾಗದ, ಪ್ಲಾಸ್ಟಿಕ್ ಹೆಕ್ಕಿ ಬರುವ ಅತ್ಯಲ್ಪ ಆದಾಯದಿಂದ ಜೀವನ ಮಾಡುತ್ತಾರೆ. ಆದ್ದರಿಂದ ವಯಸ್ಕ ಕಾರ್ಮಿಕರ ಕೆಳ ಮಟ್ಟದ ಆದಾಯವು ಸಹ ಒಂದು ಪ್ರಮುಖ ಕಾರಣವಾಗಿದೆ. ಇದರಿಂದ ಮಕ್ಕಳು ಶಾಲೆಯನ್ನು ಬಿಟ್ಟು ಕೆಲಸಕ್ಕೆ ಹೋಗಬೇಕಾಗುತ್ತದೆ. ಇದರಿಂದ ಕುಟುಂಬದ ಆದಾಯವನ್ನು ಹೆಚ್ಚಿಸಲು ಮಕ್ಕಳು ನೆರವಾಗುತ್ತಿದ್ದಾರೆ ಎಂದು ಹೇಳಬಹುದು.

* **ಕೌಟುಂಬಿಕ ವಿಘಟನೆ**

ವಿವಿಧ ಕಾರಣಗಳಿಂದಾಗಿ ಇಂದಿನ ದಿನಗಳಲ್ಲಿ ಕೌಟುಂಬಿಕ ವಿಘಟನೆಯ ಪ್ರಕರಣಗಳು ಹೆಚ್ಚುತ್ತಿವೆ. ಇಂತಹ ಕುಟುಂಬಗಳಲ್ಲಿ ಮಕ್ಕಳ ವರ್ತನೆಗಳ ಮೇಲೆ ನಿಯಂತ್ರಣ ಹೇರಲು ಹೆತ್ತವರು ವಿಫಲರಾಗುತ್ತಿದ್ದಾರೆ. ಆಗ ಮಕ್ಕಳು  ಕೆಟ್ಟವರ ಸಂಗ ಮಾಡಿ ದುಶ್ಚಟಗಳನ್ನು ಕಲಿತು ಮನೆ ಬಿಟ್ಟು ಓಡಿ ಹೋಗುತ್ತಾರೆ. ತಮ್ಮ ಜತೆಗೆ ಕೊಂಡೊಯ್ದ ಹಣ ಖಾಲಿಯಾದಾಗ ಅಸಹಾಯಕರಾಗಿ ನಗರಗಳಲ್ಲಿ ಚಿಕ್ಕ  ಪುಟ್ಟ ಕೆಲಸಕ್ಕೆ ಸೇರುತ್ತಾರೆ. ಅಲ್ಲಿಂದ ಅವರ ಶೋಷಣೆ ಆರಂಭವಾಗುತ್ತದೆ.

ಕುಟುಂಬದಲ್ಲಿನ ಘರ್ಷಣೆ, ಕೌಟುಂಬಿಕ ಅಸಹನೀಯ ತೊಂದರೆಗಳು, ಪರಿತ್ಯಾಗ ಮತ್ತು ವಿಚ್ಛೇದನಗಳು, ಜೀವನ ಅವಶ್ಯಕ ವಸ್ತುಗಳ ಕೊರತೆ, ಹಿರಿಯ ಸದಸ್ಯರ ದುಶ್ಚಟಗಳ ಪರಿಣಾಮ, ಮಕ್ಕಳನ್ನು ಸರಿಯಾಗಿ ನೋಡಿಕೊಳ್ಳದೆ  ಇರುವುದು ಇತ್ಯಾದಿ ಅಂಶಗಳಿಂದ ಮಗು ತನ್ನ ಅಗತ್ಯಕ್ಕೆ ಅನುಗುಣವಾಗಿ ದುಡಿಮೆ ಮಾಡಲು ಸಿದ್ಧನಾಗುತ್ತಾನೆ. ಮನೆಯಿಂದ ಓಡಿಹೋಗುತ್ತಾನೆ. ಇಂತಹ ಸಂದರ್ಭದಲ್ಲಿ ಯಾವುದೇ ಕೆಲಸವನ್ನಾದರೂ ಮಾಡಬೇಕಾಗುತ್ತದೆ. ಹೀಗಾಗಿ  ಸರಿಯಾದ ರೀತಿಯಲ್ಲಿ

ಕುಟುಂಬದ ಕಾರ್ಯಗಳು ಜರುಗದೆ ಇದ್ದಾಗ ಕುಟುಂಬ ನಾನಾ ತೊಂದರೆಗಳಿಗೆ ಸಿಲುಕಿ ವಿಘಟಿತವಾಗಿ ಮಕ್ಕಳು ದುಡಿಯಲು ಕಾರಣವಾಗುತ್ತದೆ. ಕೌಟುಂಬಿಕ ವಿಘಟನೆಗಳು ಸಂಭವಿಸಿದಾಗ ಮಕ್ಕಳು ಮನೆಬಿಟ್ಟು ಪಟ್ಟಣ ಸೇರಿ ಕೆಲಕಾಲ ಅಲೆದು ಕೈಯಲ್ಲಿದ್ದ ಹಣ ಖಾಲಿಯಾದಾಗ ಯಾವುದಾದರೂ ಉದ್ಯೋಗ ಸೇರಿಕೊಳ್ಳುವ ದೃಶ್ಯ ಇಂದಿನ ದಿನಗಳಲ್ಲಿ ಸಾಮಾನ್ಯವಾಗಿ ಬಿಟ್ಟಿದೆ.

- **ಕಷ್ಟಕರವಾದ ಜೀವನ ಪರಿಸ್ಥಿತಿ**

ಇಂದಿನ ದಿನಗಳಲ್ಲಿ ಅಗತ್ಯ ವಸ್ತುಗಳ ಬೆಲೆ ಏರಿಕೆಯ ಪರಿಣಾಮದಿಂದಾಗಿ ಇಂದು ಬಡ ಕುಟುಂಬದ ಜೀವನ ಪರಿಸ್ಥಿತಿ ತುಂಬಾ ಕಷ್ಟಕರವಾಗಿದೆ ಎಂದು ಹೇಳಬಹುದು. ಈ ಕಾರಣದಿಂದ ಸಹ ಇಂದು ಮಕ್ಕಳು ಶಾಲೆ ಬಿಟ್ಟು ದುಡಿಮೆ ಮಾಡಲು ಆರಂಭಿಸಿ ಬಾಲಕಾರ್ಮಿಕರಾಗುತ್ತಿದ್ದಾರೆ ಎಂದು ಹೇಳಬಹುದು.

ನಮ್ಮ ದೇಶದಲ್ಲಿ ಒಟ್ಟು ಜನಸಂಖ್ಯೆಯ ಅರ್ಧಕ್ಕಿಂತ ಹೆಚ್ಚು ಜನರು ಬಡತನ ರೇಖೆಗಿಂತ ಕೆಳಮಟ್ಟದಲ್ಲಿ ಜೀವನ ನೆಡೆಸುತ್ತಿದ್ದಾರೆ. ಅದರಲ್ಲಿ ಅವರು ಹೆಚ್ಚಿನ ಪ್ರಮಾಣದಲ್ಲಿ ಗ್ರಾಮೀಣ ಪ್ರದೇಶದಲ್ಲಿ ವಾಸ ಮಾಡುತ್ತಿದ್ದಾರೆ. ಹಾಗೆಯೇ ನಗರ ಪ್ರದೇಶಗಳಲ್ಲಿ ಹೆಚ್ಚಾಗಿ ಕೊಳಚೆ ಪ್ರದೇಶ ಮುಂತಾದ ಕಡೆಗಳಲ್ಲಿ ವಾಸ ಮಾಡುತ್ತಿದ್ದಾರೆ. ಅವರು ತಮ್ಮ ಜೀವನ ಸಾಗಿಸಲು ಮನೆಯಲ್ಲಿನ ಪ್ರತಿಯೊಬ್ಬ ಸದಸ್ಯನೂ ದುಡಿದರೂ ಸಹ ಜೀವನ ನೆಡೆಸುವುದು ಕಷ್ಟ ವಾಗಿದೆ. ಆದ್ದರಿಂದ ಮಕ್ಕಳು ಸಹ ದುಡಿಯ ಬೇಕಾದ ಪರಿಸ್ಥಿತಿ ಉಂಟಾಗಿದೆ. ಹಾಗೆಯೇ ಬಡಜನರು ತಮ್ಮ ದಿನನಿತ್ಯದ ವಸ್ತುಗಳಾದ ಅಕ್ಕಿ, ಬೇಳೆ, ಮುಂತಾದ ದಿನನಿತ್ಯದ ವಸ್ತುಗಳಿಗೋಸ್ಕರ ಇಂದು ತಮ್ಮ ಮಕ್ಕಳನ್ನು ದುಡಿಮೆಗೆ ತಳ್ಳುತ್ತಿರುವುದನ್ನು ಕಾಣಬಹುದು. ಇಂದು ದಿನನಿತ್ಯದ ವಸ್ತುಗಳು ಬಡಜನರ ಕೈಗೆ ಸಿಗದ ಹಾಗೆ ಏರಿಕೆ ಕಂಡಿರುವುದು ಸಹ ಮಕ್ಕಳು ದುಡಿಮೆಗೆ ಹೋಗಲು ಮುಖ್ಯ ಕಾರಣವಾಗಿದೆ.

ಬಡರೈತರು ವಿವಾಹ, ಮಗುವಿನ ನಾಮಕರಣ, ಶವಸಂಸ್ಕಾರ ಪೂಜೆ ಪುನಸ್ಕಾರ ಇತ್ಯಾದಿ ಅನುತ್ಪಾದಕ ಖರ್ಚುಗಳಿಗೆ ಶ್ರೀಮಂತರಿಂದ ಸಾಲ ಪಡೆದು ಅದನ್ನು ತೀರಿಸಲು ಸಾಧ್ಯವಾಗದೆ ಹೋದಾಗ ಶ್ರೀಮಂತರು ಅವರನ್ನು ಜೀತದಾಳುಗಳಾಗಿ ದುಡಿಸಿಕೊಳ್ಳುತ್ತಾರೆ. ಕೆಲವೊಮ್ಮೆ ಸಾಲ ತೀರಿಸುವ ಸಲುವಾಗಿ ತಂದೆಯ ಜೊತೆಗೆ ಚಿಕ್ಕ ವಯಸ್ಸಿನ ಮಗನನ್ನು ದುಡಿಮೆಗೆ ಸೇರಿಸಿಕೊಳ್ಳುವುದು ಸಾಮಾನ್ಯವಾಗಿದೆ. ಈ ಅನಿಷ್ಟ ಜೀತಪದ್ಧತಿಯಿಂದ ಚಿಕ್ಕ ಮಕ್ಕಳು ಶ್ರೀಮಂತರ ತೋಟಗಳಲ್ಲಿ ಎಸ್ಟೇಟ್‌ಗಳಲ್ಲಿ ಬಾಲಕಾರ್ಮಿಕರಾಗಿ ದುಡಿಯುವಂತಾಗಿರುವುದು ದುರಾದೃಷ್ಟಕರವಾಗಿದೆ ಎಂದು ಹೇಳಬಹುದು. ಈ ಕಾರಣಗಳು ಮಾತ್ರವಲ್ಲದೆ ಇನ್ನೂ ಹಲವಾರು ಕಾರಣಗಳನ್ನು ನೋಡಬಹುದು. ಒಟ್ಟಾರೆಯಾಗಿ ಬಾಲಕಾರ್ಮಿಕತೆಗೆ ಪ್ರಮುಖವಾಗಿ ಬಡತನ, ನಿರುದ್ಯೋಗ, ಕಾನೂನುಕ್ರಮಗಳು ಪರಿಣಾಮಕಾರಿಯಾಗಿ ಅನುಷ್ಠಾನ ಗೊಳಿಸದೆ ಇರುವುದು ಮಕ್ಕಳ ದುಡಿಮೆಗೆ ಪ್ರಮುಖ ಕಾರಣವಾಗಿವೆ ಎಂದು ಹೇಳಬಹುದು.

ಒಟ್ಟಾರೆಯಾಗಿ ಈ ಅಧ್ಯಯನದಲ್ಲಿ ಬಾಲಕಾರ್ಮಿಕರ ಹಿನ್ನೆಲೆಯ ಕುರಿತು ನೋಡಿದಾಗ ಈ ಪದ್ಧತಿ ಇತ್ತೀಚಿಗೆ ಇರುವ ಸಮಸ್ಯೆಯಲ್ಲ ಇದು ಪ್ರಾಚೀನ ಕಾಲದಲ್ಲಿಯೇ ಇರುವುದನ್ನು ಕಾಣಬಹುದು. ಮೊದ ಮೊದಲು ಹೊಟ್ಟೆಪಾಡಿಗಾಗಿ ಇದ್ದ ಈ ಪದ್ಧತಿ ಕಾಲಕ್ರಮೇಣವಾಗಿ ಒಂದು ಸಮಸ್ಯೆಯಾಗಿ ಪರಿವರ್ತನೆಯಾಗುತ್ತಾ ಸಾಗಿದೆ. ಹಾಗೆಯೇ ಈ ಅಧ್ಯಯನದಲ್ಲಿ ಬಾಲಕಾರ್ಮಿಕರ ಅರ್ಥ ವಿವರಣೆಯನ್ನು ಸಹ ವಿಶ್ಲೇಷಣಾತ್ಮಕವಾಗಿ ವಿವರಣೆ ನೀಡಲಾಗಿದೆ. ಅಲ್ಲದೆ ಬಾಲಕಾರ್ಮಿಕ ಪದ್ಧತಿಯ ಪ್ರಕಾರಗಳನ್ನು ಸಹ ಈ ಅಧ್ಯಯನದಲ್ಲಿ ವಿವರಿಸಲಾಗಿದೆ. ಈ ಅಧ್ಯಯನದ ಕೊನೆಯಲ್ಲಿ ಬಾಲಕಾರ್ಮಿಕ ಪದ್ಧತಿಗೆ ಕಾರಣವಾದ ಅಂಶಗಳ ಕುರಿತು ವಿವರಣಾತ್ಮಕ ವಿಶ್ಲೇಷಣೆಯನ್ನು ಮಾಡಲಾಗಿದೆ.

**ಪರಾಮರ್ಶನ ಗ್ರಂಥಗಳು :**


- ಕರ್ನಾಟಕ ವಿಕಾಸ, ಬಾಲಕಾರ್ಮಿಕತೆ – ನಾಗರಿಕ ಸಮಾಜಕ್ಕೊಂದು ಸವಾಲು – ಸೆಪ್ಟೆಂಬರ್, 2006.
- ಕರ್ನಾಟಕ ವಿಕಾಸ –ಬಾಲಕಾರ್ಮಿಕರು. – ಅಕ್ಟೋಬರ್, 2007.
- ಕ್ಯಾತನಹಳ್ಳಿ ಬಸವರಾಜು –ಬಾಲಕಾರ್ಮಿಕರು –ವಿಜಯಲಕ್ಷ್ಮಿ ಪ್ರಕಾಶನ, ಮೈಸೂರು. – 2005.
- ಕೃಷ್ಣ ಬಿ.ಆರ್.–ಸಾಮಾನ್ಯ ಸಮಾಜಶಾಸ್ತ್ರ –ಬಿ.ಆರ್.ಕೃಷ್ಣ –ವಿದ್ಯಾನಿಧಿ ಪ್ರಕಾಶನ, ಗದಗ – 1999.
- ಚ.ನ.ಶಂಕರರಾವ್. – ಭಾರತದಲ್ಲಿ ಸಾಮಾಜಿಕ ಸಮಸ್ಯೆಗಳು ಮತ್ತು ವಿಘಟನೆ. –ಜೈ ಭಾರತ್ ಪ್ರಕಾಶನ, ಮಂಗಳೂರು. –2001.
- ಚಂಗಾಮಣಿ. ಎಂ.ವಿ. –ಭಾರತೀಯ ಸಮಾಜದ ಸಮಾಜಶಾಸ್ತ್ರ. –ಅರ್ಚನಾ ಬುಕ್ ಹೌಸ್, ಬೆಂಗಳೂರು. –1999–2000.
- ಚ.ನ.ಶಂಕರ್ ರಾವ್. – ಸಾಮಾನ್ಯ ಸಮಾಜಶಾಸ್ತ್ರ. –ಜೈ ಭಾರತ್ ಪ್ರಕಾಶನ, ಮಂಗಳೂರು. –ಜೂನ್ 2001.
- ಚಂದ್ರಶೇಖರ ದಾಮ್ಲೆ. – ಸಮಾಜಶಾಸ್ತ್ರ –ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ. –2006.
- ಚಂಗಮ. – ಸಮಸ್ಯೆಗಳ ಸುಳಿಯಲ್ಲಿ ಸ್ವತಂತ್ರ ಭಾರತ –ಎಸ್.ವಿ.ಪಿ.ಪ್ರಕಾಶನ, ಮಂಕಿ.(ಉತ್ತರ ಕನ್ನಡ) –1996.
- ಮರಳಸಿದ್ಧಯ್ಯ ಡಾ.ಎಂ.–ಭಾರತ ಸಮಾಜಕಾರ್ಯ ವಿಶ್ವಕೋಶ (ಸಂಪುಟ–1) – ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ –1994.
- ಯಮನೂರಪ್ಪ ಅಣ್ಣಿಗೇರಿ ಡಾ. –ಬಾಲಕಾರ್ಮಿಕರು (ಮಂಟಪಮಾಲೆ–259) – ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ –2011.
- ಶಾಲಿನಿ ರಜನೀಶ್ ಡಾ. –ನಡೆಮುಂದೆ –ಸಪ್ನ ಬುಕ್‌ಹೌಸ್, ಗಾಂಧಿನಗರ, ಬೆಂಗಳೂರು–09 –2008.

# ಅಧ್ಯಾಯ–ನಾಲ್ಕು :

# ಬಾಲಕಾರ್ಮಿಕರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳು

4.1. ಬಾಲಕಾರ್ಮಿಕರು ಮತ್ತು ಸಾಮಾಜಿಕತೆ.

4.2. ಬಾಲಕಾರ್ಮಿಕರು ಮತ್ತು ಆರ್ಥಿಕತೆ.

4.3. ಬಾಲಕಾರ್ಮಿಕರು ಮತ್ತು ಶಿಕ್ಷಣ.

# ಅಧ್ಯಾಯ – ನಾಲ್ಕು

# ಬಾಲಕಾರ್ಮಿಕರ ಇಂದಿನ ಸ್ಥಿತಿಗತಿ

ಮಕ್ಕಳ ದುಡಿಮೆಯಿಂದ ಉಂಟಾಗುವ ಸಮಸ್ಯೆಗಳನ್ನು ಪ್ರಮುಖವಾಗಿ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳಾಗಿ ಈ ಕೆಳಗಿನಂತೆ ವಿಂಗಡಿಸಿ ವಿವರಿಸಬಹುದು.

- **ಬಾಲಕಾರ್ಮಿಕರು ಮತ್ತು ಸಾಮಾಜಿಕತೆ.**
- **ಬಾಲಕಾರ್ಮಿಕರು ಮತ್ತು ಆರ್ಥಿಕತೆ.**
- **ಬಾಲಕಾರ್ಮಿಕರು ಮತ್ತು ಶಿಕ್ಷಣ.**

## 4.1. ಬಾಲಕಾರ್ಮಿಕರು ಮತ್ತು ಸಾಮಾಜಿಕತೆ

ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಬಾಲಕಾರ್ಮಿಕರ ಸಾಮಾಜಿಕತೆಯನ್ನು ಈ ಕೆಳಗಿನಂತೆ ವಿಂಗಡಿಸಿ ವಿವರಿಸಬಹುದು.

**ಅ. ದುಡಿಯುವ ಮಕ್ಕಳ ಹಾಗೂ ಪೋಷಕರ ನಡುವೆ ಸ್ಪಂದಿಸುವ ಭಾವನಾತ್ಮಕ ಸಂಬಂಧ ಹದಗೆಡುತ್ತದೆ.**

ಬಾಲಕಾರ್ಮಿಕತೆಯಿಂದ ದುಡಿಯುವ ಮಕ್ಕಳ ಹಾಗೂ ಪೋಷಕರ ನಡುವೆ ಇರುವ ಭಾವನಾತ್ಮಕ ಸಂಬಂಧ ಹದಗೆಡುತ್ತಿದೆ ಎನ್ನಬಹುದು. ಮಕ್ಕಳು ದುಡಿಯುವುದರಿಂದ ಹಣ ಬರುತ್ತದೆ. ಅದರಿಂದ ಮಕ್ಕಳು ಪೋಷಕರಿಗೆ ಯಾವುದೇ ರೀತಿಯ ಗೌರವ ಇತ್ಯಾದಿಗಳನ್ನು

ಕೊಡುವುದು ಕಡಿಮೆಯಾಗುತ್ತಿದೆ. ಇದರಿಂದ ಮಕ್ಕಳ ಮೇಲೆ ಪೋಷಕರ ಹಿಡಿತ ಸಡಿಲಗೊಳ್ಳುತ್ತಿದೆ. ಈ ರೀತಿಯಾಗುವುದರಿಂದ ಸಾಮಾನ್ಯವಾಗಿ ಮಕ್ಕಳು ತಪ್ಪು ದಾರಿ ಹಿಡಿಯುತ್ತಾರೆ. ಅನೇಕ ದುಶ್ಚಟಗಳಿಗೆ ಒಳಗಾಗಿ ತಮ್ಮ ಆರೋಗ್ಯವನ್ನು ಹಾಳು ಮಾಡಿಕೊಳ್ಳುತ್ತಿದ್ದಾರೆ. ಆದ್ದರಿಂದ ಮಕ್ಕಳ ದುಡಿಮೆಯು ಪೋಷಕರ ಹಾಗೂ ಮಕ್ಕಳ ನಡುವಿನ ಭಾವನಾತ್ಮಕ ಸಂಬಂಧ ಹದಗೆಡಲು ಕಾರಣವಾಗಿದೆ ಎಂದು ಹೇಳಬಹುದು.

**ಆ. ತಂದೆ–ತಾಯಿ–ಮಕ್ಕಳ ನಡುವಿನ ವಾತ್ಸಲ್ಯ ಹಾಗೂ ವಿಶ್ವಾಸ, ವ್ಯವಹಾರಿಕ ಸಂಬಂಧವಾಗುತ್ತಿದೆ.**

ತಂದೆ–ತಾಯಿ–ಮಕ್ಕಳ ನಡುವಿನ ವಾತ್ಸಲ್ಯ ಹಾಗೂ ವಿಶ್ವಾಸಗಳು ಇಂದು ಮಕ್ಕಳ ದುಡಿಮೆಯಿಂದ ವ್ಯವಹಾರಿಕ ಸಂಬಂಧಗಳಾಗಿ ಮಾರ್ಪಡಾಗುತ್ತಿವೆ. ಇದರಿಂದ ತಂದೆ ತಾಯಿ ಮತ್ತು ಮಕ್ಕಳ ಮಧ್ಯೆ ಸಾಕಷ್ಟು ಅಂತರವಾಗುತ್ತಿರುವುದನ್ನು ಕಾಣಬಹುದು. ಇದರಿಂದ ಮಕ್ಕಳು ಹಾಗೂ ತಂದೆ–ತಾಯಿಗಳು ಇಂದು ತಮ್ಮ ಸಂಬಂಧವನ್ನು ವ್ಯವಹಾರಿಕ ಸಂಬಂಧವಾಗಿ ಮಾರ್ಪಡಿಸಿಕೊಂಡು ತಮ್ಮ ತಮ್ಮಲ್ಲೇ ಅಂತರವನ್ನು ಇಂದು ಸೃಷ್ಟಿ ಮಾಡಿಕೊಂಡಿದ್ದಾರೆ. ಇದರಿಂದ ತಂದೆ ತಾಯಿ ಹಾಗೂ ಮಕ್ಕಳ ನಡುವಿನ ಪ್ರೀತಿ, ವಿಶ್ವಾಸ, ವಾತ್ಸಲ್ಯ ಮಕ್ಕಳ ದುಡಿಮೆಯಿಂದ ಕಣ್ಮರೆಯಾಗುತ್ತಿರುವುದನ್ನು ಕಾಣಬಹುದು.

**ಇ. ಸೀಮಿತ ಉತ್ಪಾದನೆ ಮತ್ತು ಕಾರ್ಮಿಕ ಶಕ್ತಿಯನ್ನು ಬಳಸಿಕೊಳ್ಳಲಾರದೆ ಪ್ರಾಪ್ತ ವಯಸ್ಸಿನಲ್ಲಿ ಪೂರ್ಣ ಶಕ್ತಿಯನ್ನು ಕಳೆದುಕೊಂಡು ಆರ್ಥಿಕ ನಷ್ಟ ಅನುಭವಿಸಬೇಕಾಗುತ್ತದೆ**

ಮಕ್ಕಳ ದುಡಿಮೆಯಿಂದ ಇಂದು ಸೀಮಿತ ಉತ್ಪಾದನೆ ಮತ್ತು ಕಾರ್ಮಿಕ ಶಕ್ತಿಯನ್ನು ಬಳಸಿಕೊಳ್ಳಲಾರದೆ ಮಕ್ಕಳು ಪ್ರಾಪ್ತ ವಯಸ್ಸಿಗೆ ಬಂದಾಗ ಪೂರ್ಣ ಶಕ್ತಿಯನ್ನು ಕಳೆದುಕೊಂಡು ಅವರು ಇನ್ನೊಬ್ಬರಿಗೆ ಭಾರವಾಗ ಬೇಕಾದ ಪರಿಸ್ಥಿತಿ ಉಂಟಾಗಿದೆ. ಇದರಿಂದ ಇವರು ತಮ್ಮ ಕೆಲಸವನ್ನು ಮಾಡಿಕೊಳ್ಳಲು ಸಹ ಆಗದ ಪರಿಸ್ಥಿತಿಯನ್ನು ಎದುರಿಸಬೇಕಾಗಿದೆ. ಆದ್ದರಿಂದ ಮಕ್ಕಳ ದುಡಿಮೆಯಿಚಿದ ಮಕ್ಕಳು ಪ್ರಾಪ್ತ ವಯಸ್ಸಿಗೆ ಬಂದಾಗ ತಮ್ಮ ಪೂರ್ಣ ಶಕ್ತಿಯನ್ನು ಕಳೆದುಕೊಂಡು ಆರ್ಥಿಕ ನಷ್ಟ ಅನುಭವಿಸ ಬೇಕಾಗಿದೆ.

**ಈ. ಅಪ್ರಾಪ್ತ ವಯಸ್ಸಿನ ಮಕ್ಕಳ ಸಾಮರ್ಥ್ಯ, ಉತ್ಪಾದನೆ ಶಕ್ತಿ, ವಯಸ್ಕರಿಗಿಂತ ಕಡಿಮೆಯಾದುದರಿಂದ ಅವರ ಉತ್ಪಾದನಾ ಸಾಮರ್ಥ್ಯ ಅತ್ಯಂತ ಕಡಿಮೆಯಾಗಿರುತ್ತದೆ.**

ಮಕ್ಕಳ ದುಡಿಮೆಯು ಹಾಗೂ ಮಕ್ಕಳು ಕೆಲಸಮಾಡುವ ಸಾಮರ್ಥ್ಯ, ಅವರು ದುಡಿದು ಉತ್ಪಾದಿಸುವ ಉತ್ಪಾದನೆ, ಮಕ್ಕಳ ಶಕ್ತಿ, ವಯಸ್ಕ ಕಾರ್ಮಿಕರಿಗಿಂತ ಅತ್ಯಂತ ಕಡಿಮೆ ಮಟ್ಟದಲ್ಲಿರುತ್ತದೆ. ಇದರಿಂದ ಉತ್ತಮ ಗುಣಮಟ್ಟದ ಹಾಗೂ ಉತ್ತಮ ಸಾಮರ್ಥ್ಯದ ಉತ್ಪಾದನೆ ಸಾಧ್ಯವಾಗುವುದಿಲ್ಲ. ಹಾಗೆಯೇ ವಯಸ್ಕರು ಮಕ್ಕಳ ದುಡಿಮೆಯಿಂದ ಅವರು ನಿರುದ್ಯೋಗಿಗಳಾಗಿ ಹಾಗೂ ವಯಸ್ಕ

ಕಾರ್ಮಿಕರಿಗೆ ಸರಿಯಾದ ಯಾವುದೇ ರೀತಿಯ ಉದ್ಯೋಗಗಳು ಇಂದು ಸಿಗದೇ ಅರೆಉದ್ಯೋಗಿಗಳಾಗಿ ಉಳಿದಿದ್ದಾರೆ.

ಬಾಲಕಾರ್ಮಿಕರ ಸಮಸ್ಯೆಗಳಲ್ಲಿ ಆರೋಗ್ಯ ಸಮಸ್ಯೆ ಅತ್ಯಂತ ಪ್ರಮುಖವಾದದ್ದು. ಇಲ್ಲಿ ಅಧ್ಯಯನ ಕೈಗೊಂಡ ಬಳ್ಳಾರಿ ಜಿಲ್ಲೆ ಹಾಗೂ ಕೊಪ್ಪಳ ಜಿಲ್ಲೆಯಾದ್ಯಂತ ದುಡಿಮೆ ಮಾಡುವ ಮಕ್ಕಳ ಆರೋಗ್ಯ ಕೆಳಮಟ್ಟದಲ್ಲಿದೆ ಎಂದು ಹೇಳಬಹುದು. ದುಡಿಮೆಯಲ್ಲಿ ತೊಡಗಿಸಿಕೊಂಡಿರುವ ಮಕ್ಕಳು ಸಾಮಾನ್ಯವಾಗಿ ಒಂದಿಲ್ಲ ಒಂದು ಆರೋಗ್ಯ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಗಣಿಗಳಲ್ಲಿ ದುಡಿಯುವ ಮಕ್ಕಳು ಗಣಿಯಲ್ಲಿನ ಧೂಳಿನಿಂದ ಅವರು ಶ್ವಾಸಕೋಶದ ತೊಂದರೆಯನ್ನು ಎದುರಿಸುತ್ತಿದ್ದಾರೆ. ಕೃಷಿ ಚಟುವಟಿಕೆಯಲ್ಲಿ ಕೆಲಸ ಮಾಡುವ ಮಕ್ಕಳು ಕೀಟನಾಶಕಗಳು ಮತ್ತು ಫಾರ್ಮ್‌ಯಂತ್ರಗಳಿಂದ ಹಾನಿಗಳನ್ನು, ಜ್ವರ, ಇತರೇ ಸಾಂಕ್ರಾಮಿಕ ರೋಗಗಳಿಗೆ ತುತ್ತಾಗುತ್ತಿರುವುದನ್ನು ನಾವು ಇಲ್ಲಿ ಕಾಣಬಹುದು.

ಅದರಂತೆಯೇ ಮಂಡಕ್ಕಿ ಭಟ್ಟಿಯಲ್ಲಿ ಕೆಲಸಮಾಡುವ ಮಕ್ಕಳು ಅಸ್ತಮಾ, ಶ್ವಾಸಕೋಶ ಸಂಬಂಧಿತ ರೋಗ, ಗಂಟಲು ರೋಗ, ಕಣ್ಣುಬೇನೆ, ಚರ್ಮವ್ಯಾಧಿ, ಅಪಘಾತಗಳಿಗೆ ಒಳಗಾಗುವ ಸಂಭವನ್ನು ಎದುರಿಸುತ್ತಿದ್ದಾರೆ. ಬೀಡಿ ಉದ್ದಿಮೆಯಲ್ಲಿ ಕೆಲಸ ಮಾಡುವ ಮಕ್ಕಳು ಕ್ಷಯ, ಶ್ವಾಸಕೋಶ ಸಂಬಂಧಿತ ರೋಗಗಳು, ಗಂಟಲು ರೋಗಗಳಿಗೆ ತುತ್ತಾಗುತ್ತಿದ್ದಾರೆ. ಕಟ್ಟಡ ನಿರ್ಮಾಣ ಹಾಗೂ ಇಟ್ಟಿಗೆ ನಿರ್ಮಾಣದಲ್ಲಿ ಕೆಲಸ ಮಾಡುವ ಮಕ್ಕಳು ಅಪಘಾತಗಳಿಗೆ ತುತ್ತಾಗುವುದು ಹಾಗೂ ಮಕ್ಕಳ ಬೆಳವಣಿಗೆಗೆ ಅಡ್ಡಿಯನ್ನುಂಟು ಮಾಡುತ್ತಿವೆ ಎಂದು ಹೇಳಬಹುದು. ಚಿಂದಿ ಆಯುವ ಮಕ್ಕಳು ಅನೇಕ ರೀತಿಯ ಚರ್ಮವ್ಯಾಧಿಗಳು, ಸಾಂಕ್ರಾಮಿಕ ರೋಗಗಳು, ಧನುರ್ವಾಯು ಹಾಗೂ ಕೆಟ್ಟ ಚಟಗಳಿಗೆ ಬಲಿಯಾಗುತ್ತಿದ್ದಾರೆ.

ಅಧ್ಯಯನ ಕೈಗೊಂಡ ಬಳ್ಳಾರಿ ಜಿಲ್ಲೆ ಹಾಗೂ ಕೊಪ್ಪಳ ಜಿಲ್ಲೆಯಲ್ಲಿ ದುಡಿಯುವ ಮಕ್ಕಳ ಆರೋಗ್ಯ ಸ್ಥಿತಿಗತಿ ತುಂಬಾ ಶೋಚನೀಯವಾಗಿದೆ. ಇಲ್ಲಿನ ಮಕ್ಕಳು ತಮ್ಮ ಆರೋಗ್ಯದ ಕಡೆ ಗಮನ ನೀಡುವುದಕ್ಕಿಂತ ಅವರು ತಮ್ಮ ಕೆಲಸದ ಮೇಲೆ ಹೆಚ್ಚಿನ ಗಮನ ನೀಡುವುದು, ಮಕ್ಕಳ ಆರೋಗ್ಯವನ್ನು ಕಡೆಗಣಿಸುವ ಮಾಲೀಕರು, ಪೋಷಕರು ಸಹ ಮಕ್ಕಳ ಆರೋಗ್ಯ ಸಮಸ್ಯೆ ಉಲ್ಬಣಗೊಳ್ಳಲು ಕಾರಣರಾಗಿದ್ದಾರೆ ಎಂದು ಹೇಳಬಹುದು.

ಬಳ್ಳಾರಿ ಜಿಲ್ಲೆ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಅಧ್ಯಯನ ಕೈಗೊಂಡ ಬಾಲಕಾರ್ಮಿಕರ ಯಾವ ಜಾತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಇದ್ದಾರೆ ಎನ್ನುವುದನ್ನು ಈ ಕೆಳಗಿನ ಕೋಷ್ಟಕಗಳ ಮುಖಾಂತರ ಇಲ್ಲಿ ವಿವರಿಸಲಾಗಿದೆ.

**ಕೋಷ್ಟಕ–4.1**

ಜಿಲ್ಲಾವಾರು ಬಾಲಕಾರ್ಮಿಕರ ಜಾತಿವಾರು ಮಾದರಿ ಆಯ್ಕೆ ವಿವರ.

| ಕ್ರ.ಸಂ | ಜಿಲ್ಲೆ ಹೆಸರು | ಒಟ್ಟು ಮಾದರಿ ಆಯ್ಕೆ | | | ಪ.ಜಾತಿ | | | ಪ.ಪಂ | | | ಮುಸ್ಲಿಂ | | | ಇತರೆ | | |
|---|---|---|---|---|---|---|---|---|---|---|---|---|---|---|---|---|
| | | M | F | T | M | F | T | M | F | T | M | F | T | M | F | T |
| 1. | ಬಳ್ಳಾರಿ | 128 | 122 | 250 | 43 | 53 | 96 | 34 | 32 | 66 | 24 | 15 | 39 | 27 | 22 | 49 |
| 2. | ಕೊಪ್ಪಳ | 75 | 125 | 200 | 28 | 48 | 76 | 21 | 39 | 60 | 16 | 15 | 31 | 10 | 23 | 33 |
| | ಒಟ್ಟು | 203 | 247 | 450 | 71 | 101 | 172 | 55 | 71 | 126 | 40 | 30 | 70 | 37 | 45 | 82 |

*ಮೂಲ: ಪ್ರಾಥಮಿಕ ಅಂಕಿಅಂಶಗಳು*

ಕೋಷ್ಟಕ–4.1ರಲ್ಲಿರವಂತೆ ಜಿಲ್ಲಾವಾರು ಬಾಲಕಾರ್ಮಿಕರ ಜಾತಿವಾರು ಮಾದರಿ ಆಯ್ಕೆ ವಿವರಗಳನ್ನು ಅವಲೋಕಿಸಿದಾಗ ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು 250(100%) ಬಾಲಕಾರ್ಮಿಕರನ್ನು ಸಂದರ್ಶನ ಮಾಡಿ ಅವರ ಜಾತಿಯನ್ನು ಕೇಳಲಾಯಿತು. ಒಟ್ಟು 250(100%) ಬಾಲಕಾರ್ಮಿಕರಲ್ಲಿ 128(51.2%) ಗಂಡು ಮಕ್ಕಳು ಹಾಗೂ 122(48.8%) ಹೆಣ್ಣು ಮಕ್ಕಳನ್ನು ಸಂದರ್ಶನ ಮಾಡಿದಾಗ ಪರಿಶಿಷ್ಟ ಜಾತಿಗೆ ಸೇರಿದ 96(38.4%) ಮಕ್ಕಳು ಪತ್ತೆಯಾದರು. ಅವರಲ್ಲಿ 43(17.2%)ರಷ್ಟು ಗಂಡು ಮಕ್ಕಳು ಹಾಗೂ 53(21.2%)ರಷ್ಟು ಹೆಣ್ಣು ಮಕ್ಕಳು ಪರಿಶಿಷ್ಟ ಜಾತಿಗೆ ಸೇರಿದ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಅದೇ ರೀತಿಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ 250(100%) ಬಾಲಕಾರ್ಮಿಕರಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ ಒಟ್ಟು 66(26.4%) ಬಾಲಕಾರ್ಮಿಕರನ್ನು ಸಂದರ್ಶನ ಮಾಡಲಾಯಿತು. ಅವರಲ್ಲಿ 34(31.6%) ಗಂಡು ಮಕ್ಕಳು ಹಾಗೂ 32(12.8%) ಹೆಣ್ಣು ಮಕ್ಕಳು ಪರಿಶಿಷ್ಟ ಪಂಗಡಕ್ಕೆ ಸೇರಿದ ಮಕ್ಕಳಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ ಬಳ್ಳಾರಿ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಬಾಲಕಾರ್ಮಿಕರಲ್ಲಿ ಮುಸ್ಲಿಂ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ಒಟ್ಟು 39(15.6%) ಮಕ್ಕಳು ಮುಸ್ಲಿಂ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಈ ಒಟ್ಟು ಮಕ್ಕಳಲ್ಲಿ 24(9.6%) ಗಂಡು ಮಕ್ಕಳು ಹಾಗೂ 15(6%) ಹೆಣ್ಣು ಮಕ್ಕಳು ಮುಸ್ಲಿಂ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರಾಗಿದ್ದಾರೆ. ಅದೇ ರೀತಿಯಲ್ಲಿ ಇತರೆ ಸಮುದಾಯಗಳಾದ ಕುರುಬ, ಕಬ್ಬೇರ, ಕಬ್ಬಲಿಗ ಮುಂತಾದ ಜಾತಿಗಳಿಗೆ ಸೇರಿದ ಬಾಲಕಾರ್ಮಿಕರು 49(19.6%) ರಷ್ಟು ಪತ್ತೆಯಾಗಿರುವುದನ್ನು ಕಾಣಬಹುದು. ಇವರಲ್ಲಿ 27(10.8%) ಗಂಡು ಮಕ್ಕಳು ಹಾಗೂ 22(8.8%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ವಿಶ್ಲೇಷಿಸಿದಾಗ ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಮಕ್ಕಳೇ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು. ಹಾಗೆಯೇ ನಂತರದ ಸ್ಥಾನಗಳಲ್ಲಿ ಮುಸ್ಲಿಂ ಸಮುದಾಯಕ್ಕೆ ಸೇರಿದ ಮಕ್ಕಳು ಹಾಗೂ ಇತರೆ ಜಾತಿಗೆ ಸೇರಿದ ಮಕ್ಕಳು ಸಹ ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಈ ಅಂಶಗಳನ್ನು ನೋಡಿದಾಗ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಬಾಲಕಾರ್ಮಿಕರು ಅತ್ಯಂತ ಬಡತನ ಹಾಗೂ ಸಾಮಾಜಿಕವಾಗಿ ಅತೀ ಹಿಂದುಳಿದಿರುವುದನ್ನು ಕಾಣಬಹುದು.

ಅದೇ ರೀತಿಯಲ್ಲಿ ಕೋಷ್ಟಕ–4.1ರಲ್ಲಿ ಇರುವಂತೆ ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ಬಾಲಕಾರ್ಮಿಕರಲ್ಲಿ 200(100%) ಬಾಲಕಾರ್ಮಿಕರನ್ನು ಮಾದರಿ ಆಯ್ಕೆ ಮಾಡಿ ಸಂದರ್ಶನ ಮಾಡಿದಾಗ ಅವರಲ್ಲಿ 75(37.5%) ಗಂಡುಮಕ್ಕಳು ಹಾಗೂ 125(62.5%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಅವರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ 76(38%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 28(14%) ಗಂಡು ಮಕ್ಕಳು ಹಾಗೂ 48(24%) ಹೆಣ್ಣು ಮಕ್ಕಳು ಪರಿಶಿಷ್ಟ ಜಾತಿಗೆ ಸೇರಿದ ಬಾಲಕಾರ್ಮಿಕರಾಗಿದ್ದಾರೆ. ಅದೇ ರೀತಿಯಾಗಿ ಒಟ್ಟು 200(100%) ಬಾಲಕಾರ್ಮಿಕರಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ 60(30%) ಮಕ್ಕಳು ಕೊಪ್ಪಳ ಜಿಲ್ಲೆಯಲ್ಲಿ ಕಂಡುಬಂದಿದ್ದಾರೆ. ಇವರಲ್ಲಿ 21(10.5%) ಗಂಡು ಮಕ್ಕಳು ಹಾಗೂ 39(19.5%) ಹೆಣ್ಣು ಮಕ್ಕಳು ಪರಿಶಿಷ್ಟ ಪಂಗಡಕ್ಕೆ ಸೇರಿದ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ ಮುಸ್ಲಿಂ ಸಮುದಾಯಕ್ಕೆ ಸೇರಿದ 31(15.5%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಈ ಬಾಲಕಾರ್ಮಿಕರಲ್ಲಿ 16(8%) ಗಂಡುಮಕ್ಕಳು ಹಾಗೂ 15(7.5%) ಹೆಣ್ಣು ಮಕ್ಕಳು ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. 33(16.5%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 10(5%) ಗಂಡುಮಕ್ಕಳು ಹಾಗೂ 23(11.5%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಕೊಪ್ಪಳ ಜಿಲ್ಲೆಯಲ್ಲಿ ಮಾದರಿ ಆಯ್ಕೆ ಮಾಡಿಕೊಂಡ 200(100%) ಬಾಲಕಾರ್ಮಿಕರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳು 62.5 ಇರುವುದನ್ನು ಕಾಣುತ್ತೇವೆ. ಹಾಗೆಯೇ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ನಂತರದ ಸ್ಥಾನಗಳಲ್ಲಿ ಮುಸ್ಲಿಂ ಹಾಗೂ ಇತರೆ ಸಮುದಾಯಗಳಿಗೆ ಸೇರಿದ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಜಿಲ್ಲಾವಾರು ಮಾದರಿ ಆಯ್ಕೆಯನ್ನು ವಿಶ್ಲೇಷಣೆ ಮಾಡಿದಾಗ ಒಟ್ಟು 450(100%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಅವರಲ್ಲಿ 203(45.11%) ಗಂಡುಮಕ್ಕಳು ಹಾಗೂ 247(54.88%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣುತ್ತೇವೆ. ಜಿಲ್ಲಾವಾರು ಹೆಣ್ಣು ಮಕ್ಕಳು (54.88) ಆಗಿದ್ದಾರೆ ಎಂದು ಹೇಳಬಹುದು. ಹಾಗೆಯೇ ಅತೀ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಬಾಲಕಾರ್ಮಿಕರೇ ಅತೀ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ನಂತರದ ಸ್ಥಾನದಲ್ಲಿ ಮುಸ್ಲಿಂ ಹಾಗೂ ಇತರೆ ಜಾತಿಯಗಳಲ್ಲಿ ಕುರುಬ, ಕಬ್ಬೇರ, ಕಬ್ಬಲಿಗ ಮುಂತಾದ ಜಾತಿಯ ಬಾಲಕಾರ್ಮಿಕರು ಇರುವುದನ್ನು ಈ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

**ಕೋಷ್ಟಕ–4.2**
**ತಾಲ್ಲೂಕುವಾರು ಬಾಲಕಾರ್ಮಿಕರ ಜಾತಿವಾರು ಮಾದರಿ ಆಯ್ಕೆ ವಿವರ.**

| ಕ್ರ.ಸಂ. | ತಾಲ್ಲೂಕು ಹೆಸರು | ಒಟ್ಟು ಮಾದರಿ ಆಯ್ಕೆ | | | ಪ.ಜಾತಿ | | | ಪ.ಪಂ | | | ಮುಸ್ಲಿಂ | | | ಇತರೆ | | |
|---|---|---|---|---|---|---|---|---|---|---|---|---|---|---|---|---|
| | | M | F | T | M | F | T | M | F | T | M | F | T | M | F | T |
| 1. | ಹಗರಿಬೊಮ್ಮನಹಳ್ಳಿ | 65 | 61 | 126 | 23 | 27 | 50 | 14 | 15 | 29 | 11 | 7 | 18 | 17 | 12 | 29 |
| 2. | ಹೊಸಪೇಟೆ | 63 | 61 | 124 | 20 | 26 | 46 | 20 | 17 | 37 | 13 | 8 | 21 | 10 | 10 | 20 |
| 3. | ಕೊಪ್ಪಳ | 32 | 60 | 92 | 11 | 23 | 34 | 9 | 19 | 28 | 7 | 7 | 14 | 5 | 11 | 16 |
| 4. | ಗಂಗಾವತಿ | 43 | 65 | 108 | 17 | 25 | 42 | 12 | 20 | 32 | 9 | 8 | 17 | 5 | 12 | 17 |
| | ಒಟ್ಟು | 203 | 247 | 450 | 61 | 101 | 172 | 55 | 71 | 126 | 40 | 30 | 70 | 37 | 45 | 82 |

*ಮೂಲ: ಪ್ರಾಥಮಿಕ ಅಂಕಿಅಂಶಗಳು*

ಕೋಷ್ಟಕ–4.2ರಲ್ಲಿ ಇರುವಂತೆ ತಾಲ್ಲೂಕುವಾರು ಬಾಲಕಾರ್ಮಿಕರ ಜಾತಿವಾರು ಮಾದರಿ ಆಯ್ಕೆ ವಿವರಗಳನ್ನು ಕಾಣಬಹುದು. ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ಹಾಗೂ ಹೊಸಪೇಟೆ ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯ ಒಟ್ಟು 250(100%) ಮಾದರಿ ಆಯ್ಕೆಯಲ್ಲಿ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ 126 ಬಾಲಕಾರ್ಮಿಕರನ್ನು ಹಾಗೂ ಹೊಸಪೇಟೆ ತಾಲ್ಲೂಕಿನ 124 ಬಾಲಕಾರ್ಮಿಕರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಒಟ್ಟು 126(100%) ಮಾದರಿ ಆಯ್ಕೆಯಲ್ಲಿ 65(51.58%) ಗಂಡು ಮಕ್ಕಳು ಹಾಗೂ 61(48.42%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಒಟ್ಟು ಮಾದರಿ ಆಯ್ಕೆಯಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಒಟ್ಟು 50(39.68%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 23(18.25%) ಗಂಡು ಮಕ್ಕಳು ಹಾಗೂ 27(21.42%) ಹೆಣ್ಣು ಮಕ್ಕಳು

ಪರಿಶಿಷ್ಟ ಜಾತಿಗೆ ಸೇರಿದ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ ಪರಿಶಿಷ್ಟ ಪಂಗಡಕ್ಕೆ ಸೇರಿದ 29(23.01%) ಬಾಲಕಾರ್ಮಿಕರು ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿದ್ದಾರೆ. ಇವರಲ್ಲಿ 14(11.11%) ಗಂಡು ಮಕ್ಕಳು ಹಾಗೂ 15(11.90%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ಮುಸ್ಲಿಂ ಸಮುದಾಯಕ್ಕೆ ಸೇರಿದ 18(14.3%) ಜನ ಮಕ್ಕಳು ಬಾಲಕಾರ್ಮಿಕರಾಗಿದ್ದಾರೆ. ಇವರಲ್ಲಿ 11(8.73%) ಗಂಡು ಮಕ್ಕಳು ಹಾಗೂ 7(5.55%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಅದೇ ರೀತಿಯಾಗಿ ಇತರೆ ಸಮುದಾಯಗಳಿಗೆ ಸೇರಿದ 29(23.01%) ಬಾಲ ಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 17(13.49%) ಗಂಡು ಮಕ್ಕಳು ಹಾಗೂ 12(9.52%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಒಟ್ಟು 126 ಬಾಲಕಾರ್ಮಿಕರನ್ನು ಮಾದರಿ ಆಯ್ಕೆ ಮಾಡಿಕೊಂಡಿದ್ದೇನೆ. ಇವರಲ್ಲಿ 65(51.58%) ಗಂಡು ಮಕ್ಕಳು ಹಾಗೂ 61(48.42%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಈ ಅಂಕಿ ಅಂಶಗಳಿಂದ ಬಾಲಕಾರ್ಮಿಕರು ಗಂಡು ಹಾಗೂ ಹೆಣ್ಣು ಮಕ್ಕಳು ಸಮಾನವಾಗಿರುವುದನ್ನು ಕಾಣುತ್ತೇವೆ. ಹಾಗೆಯೇ ಹೆಚ್ಚಿನ ಬಾಲಕಾರ್ಮಿಕರು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ನಂತರದ ಸ್ಥಾನದಲ್ಲಿ ಇತರೆ ಜಾತಿಗೆ ಸೇರಿದ ಬಾಲಕಾರ್ಮಿಕರಿದ್ದಾರೆ. ಹಾಗೂ ನಂತರದ ಸ್ಥಾನದಲ್ಲಿ ಮುಸ್ಲಿಂ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು.

ಹಾಗೆಯೇ ಕೋಷ್ಟಕ–4.2ರಲ್ಲಿ ಇರುವಂತೆ ತಾಲ್ಲೂಕುವಾರು ಬಾಲಕಾರ್ಮಿಕರ ಜಾತಿವಾರು ಮಾದರಿ ಆಯ್ಕೆಯಲ್ಲಿ ಹೊಸಪೇಟೆ ತಾಲ್ಲೂಕಿನ ಒಟ್ಟು 124(100%) ಬಾಲಕಾರ್ಮಿಕರನ್ನು ಜಾತಿವಾರು ಸಮೀಕ್ಷೆ ಮಾಡಲಾಯಿತು. ಇವರಲ್ಲಿ 63(50.81%) ಗಂಡು ಮಕ್ಕಳು ಹಾಗೂ 61(49.19%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಹೊಸಪೇಟೆ ತಾಲ್ಲೂಕಿನ ಒಟ್ಟು 124(100%) ಮಾದರಿ ಆಯ್ಕೆಯಲ್ಲಿ 46(37.09%) ಮಕ್ಕಳು ಪರಿಶಿಷ್ಟ ಜಾತಿಗೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 20(16.12%) ಗಂಡು ಮಕ್ಕಳು ಹಾಗೂ 26(20.96%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಹೊಸಪೇಟೆ ತಾಲ್ಲೂಕಿನ ಒಟ್ಟು 124(100%) ಬಾಲಕಾರ್ಮಿಕರಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ 37(29.83%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 20(16.12%) ಗಂಡು ಮಕ್ಕಳು ಹಾಗೂ 17(13.70%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಹಾಗೆಯೇ ಈ ತಾಲ್ಲೂಕಿನಲ್ಲಿ ಮಾದರಿ ಆಯ್ಕೆ ಮಾಡಿಕೊಂಡ ಒಟ್ಟು 124(100%) ಬಾಲಕಾರ್ಮಿಕರಲ್ಲಿ 21(16.93%) ಮಕ್ಕಳು ಮುಸ್ಲಿಂ ಸಮುದಾಯಕ್ಕೆ ಸೇರಿದ

ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 13(10.48%) ಗಂಡು ಮಕ್ಕಳು ಹಾಗೂ 8(6.45%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಇತರೆ ಜಾತಿಗಳಿಗೆ ಸೇರಿದ 20(16.12%) ಬಾಲಕಾರ್ಮಿಕರು ಹೊಸಪೇಟೆ ತಾಲ್ಲೂಕಿನಲ್ಲಿ ಕಂಡುಬಂದಿದ್ದಾರೆ. ಇವರಲ್ಲಿ 10(8.06%) ಗಂಡು ಮಕ್ಕಳು ಹಾಗೂ 10(8.06%) ಗಂಡು ಮಕ್ಕಳು ಹಾಗೂ 10(8.06%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಹೊಸಪೇಟೆ ತಾಲ್ಲೂಕಿನಲ್ಲಿ ಆಯ್ಕೆ ಮಾಡಿಕೊಂಡ ಮಾದರಿ ಆಯ್ಕೆಯಲ್ಲಿ 124(100%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 63(50.81%) ಗಂಡು ಮಕ್ಕಳು ಹಾಗೂ 61(49.19%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಈ ಎಲ್ಲಾ ಅಂಕಿಅಂಶಗಳನ್ನು ವಿಶ್ಲೇಷಿಸಿದಾಗ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳಿಗೆ ಸೇರಿದ ಬಾಲಕಾರ್ಮಿಕರು ಅತೀ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ನಂತರದ ಸ್ಥಾನದಲ್ಲಿ ಮುಸ್ಲಿಂ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಕೋಷ್ಟಕದ ಅಂಕಿ ಅಂಶಗಳನ್ನು ಗಮನಿಸಿದಾಗ ಗಂಡು ಹಾಗೂ ಹೆಣ್ಣು ಮಕ್ಕಳು ಸಮಾನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಕೋಷ್ಟಕ–4.2ರಲ್ಲಿ ಇರುವಂತೆ ತಾಲ್ಲೂಕುವಾರು ಬಾಲಕಾರ್ಮಿಕರ ಜಾತಿವಾರು ಮಾದರಿ ಆಯ್ಕೆಯಲ್ಲಿ ಕೊಪ್ಪಳ ತಾಲ್ಲೂಕಿನಲ್ಲಿ ಒಟ್ಟು 92(100%) ಬಾಲಕಾರ್ಮಿಕರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 32(34.78%) ಗಂಡು ಮಕ್ಕಳು ಹಾಗೂ 60(65.21%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ತಾಲ್ಲೂಕುವಾರು ಬಾಲಕಾರ್ಮಿಕರನ್ನು ಜಾತಿವಾರು ಮಾದರಿ ಆಯ್ಕೆಯಲ್ಲಿ ನೋಡಿದಾಗ ಒಟ್ಟು 92(100%) ಬಾಲಕಾರ್ಮಿಕರರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ 34(36.95%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 11(11.95%) ಗಂಡು ಮಕ್ಕಳು ಹಾಗೂ 23(25%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಕೊಪ್ಪಳ ತಾಲ್ಲೂಕುವಾರು ಮಾದರಿ ಆಯ್ಕೆಯ ಒಟ್ಟು 92(100%) ಬಾಲಕಾರ್ಮಿಕರಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ 28(30.43%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 9(9.78%) ಗಂಡು ಮಕ್ಕಳು ಹಾಗೂ 19(20.65%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಹಾಗೆಯೇ ಮುಸ್ಲಿಂ ಸಮುದಾಯಕ್ಕೆ ಸೇರಿದ 14(15.21%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 7(7.60%) ಗಂಡು ಮಕ್ಕಳು ಹಾಗೂ ಅಷ್ಟೇ ಸಂಖ್ಯೆಯ ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಇತರೆ ಜಾತಿಗಳಿಗೆ ಸೇರಿದ 16(17.39%)

ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 5(5.43%) ಗಂಡು ಮಕ್ಕಳು ಹಾಗೂ 11(11.95%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಕೊಪ್ಪಳ ತಾಲ್ಲೂಕುವಾರು ಮಾದರಿ ಆಯ್ಕೆಯಲ್ಲಿ ಒಟ್ಟು 92(100%) ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಇವರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳು 60(65.21%) ಬಾಲಕಾರ್ಮಿಕರು ಇದ್ದಾರೆ. ಹಾಗೆಯೇ 32(34.75%) ಗಂಡು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿದ್ದಾರೆ.

ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಒಟ್ಟು 92(100%) ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ಹಾಗೆಯೇ ನಂತರದ ಸ್ಥಾನದಲ್ಲಿ ಇತರೆ ಜಾತಿಗೆ ಸೇರಿದ ಬಾಲಕಾರ್ಮಿಕರು ಹಾಗೂ ಕೊನೆ ಸ್ಥಾನದಲ್ಲಿ ಮುಸ್ಲಿಂ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರು ಕೊಪ್ಪಳ ತಾಲ್ಲೂಕಿನಲ್ಲಿ ಇರುವುದನ್ನು ಕಾಣಬಹುದು.

ಕೋಷ್ಟಕ–4.2ರಲ್ಲಿ ಇರುವಂತೆ ಗಂಗಾವತಿ ತಾಲ್ಲೂಕುವಾರು ಬಾಲಕಾರ್ಮಿಕರ ಜಾತಿವಾರು ಮಾದರಿ ಆಯ್ಕೆ ವಿವರಗಳನ್ನು ವಿಶ್ಲೇಷಿಸಿದಾಗ ಗಂಗಾವತಿ ತಾಲ್ಲೂಕಿನಲ್ಲಿ ಒಟ್ಟು 108(100%) ಬಾಲಕಾರ್ಮಿಕರ ಮಾದರಿ ಆಯ್ಕೆಯನ್ನು ಮಾಡಲಾಗಿದೆ. ಇವರಲ್ಲಿ 43(39.81%) ಗಂಡು ಮಕ್ಕಳು ಹಾಗೂ 65(60.19%) ಹೆಣ್ಣು ಮಕ್ಕಳು ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಗಂಗಾವತಿ ತಾಲ್ಲೂಕಿನ ಒಟ್ಟು 108(100%) ಬಾಲಕಾರ್ಮಿಕರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ 42(38.88%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 17(15.74%) ಗಂಡು ಮಕ್ಕಳು ಹಾಗೂ 25(23.14%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಹಾಗೆಯೇ ಪರಿಶಿಷ್ಟ ಪಂಗಡಕ್ಕೆ ಸೇರಿದ 32(29.62%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 12(11.11%) ಗಂಡು ಮಕ್ಕಳು ಹಾಗೂ 20(18.51%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಮುಸ್ಲಿಂ ಸಮುದಾಯಕ್ಕೆ ಸೇರಿದ 17(15.74%) ಬಾಲಕಾರ್ಮಿಕರನ್ನು ಕಾಣುತ್ತೇವೆ. ಇವರಲ್ಲಿ 9(8.33%) ಗಂಡು ಮಕ್ಕಳು ಹಾಗೂ 8(7.40%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ಇರುವುದನ್ನು ಕಾಣಬಹುದು. ಹಾಗೆಯೇ ಇತರೆ ಜಾತಿಗಳಿಗೆ ಸೇರಿದ 17(15.74%) ಜನ ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಇವರಲ್ಲಿ 5(4.62%) ಗಂಡು ಮಕ್ಕಳು ಹಾಗೂ 12(11.11%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು.

ಗಂಗಾವತಿ ತಾಲ್ಲೂಕಿನ ಒಟ್ಟಾರೆ ಬಾಲಕಾರ್ಮಿಕರ ಮಾದರಿ ಆಯ್ಕೆಯ ಅಂಕಿ ಅಂಶಗಳನ್ನು ವಿಶ್ಲೇಷಇಸಿದಾಗ ಒಟ್ಟು 108(100%) ಬಾಲಕಾರ್ಮಿಕರಿದ್ದು ಅವರಲ್ಲಿ 43(39.81%) ಗಂಡು ಮಕ್ಕಳು

ಹಾಗೂ 65(60.19%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಗಂಗಾವತಿ ತಾಲ್ಲೂಕಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿಕೊಂಡಿರುವುದನ್ನು ಕಾಣಬಹುದು. ಹಾಗೂ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಹೆಚ್ಚಿನ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿಕೊಂಡಿರುವುದನ್ನು ಕಾಣಬಹುದು. ನಂತರದ ಸ್ಥಾನಗಳಲ್ಲಿ ಮುಸ್ಲಿಂ ಸಮುದಾಯದ ಮಕ್ಕಳು ಹಾಗೂ ಇತರೆ ಜಾತಿಗಳಿಗೆ ಸೇರಿದ ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಕೋಷ್ಟಕ-2ರಲ್ಲಿ ಇರುವಂತೆ ತಾಲ್ಲೂಕುವಾರು ಬಾಲಕಾರ್ಮಿಕರ ಜಾತಿವಾರು ಮಾದರಿ ಆಯ್ಕೆಯ ವಿವರಗಳನ್ನು ಅವಲೋಕಿಸಿದಾಗ ಒಟ್ಟು 450(100%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 203(45.11%) ಗಂಡು ಮಕ್ಕಳು ಹಾಗೂ 247(54.88%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಪರಿಶಿಷ್ಟ ಜಾತಿಗೆ ಸೇರಿದ ಹೆಚ್ಚಿನ ಸಂಖ್ಯೆಯ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ ಮಕ್ಕಳು ನಂತರದ ಸ್ಥಾನದಲ್ಲಿ ಹಾಗೂ ಇತರೆ ಜಾತಿಗೆ ಸೇರಿದ ಮಕ್ಕಳು ಹಾಗೆಯೇ ಕೊನೆಯ ಸ್ಥಾನದಲ್ಲಿ ಮುಸ್ಲಿಂ ಸಮುದಾಯಕ್ಕೆ ಸೇರಿದ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ.

**ಕೋಷ್ಟಕ-4.3**
**ಗ್ರಾಮವಾರು ಬಾಲಕಾರ್ಮಿಕರ ಜಾತಿವಾರು ಮಾದರಿ ಆಯ್ಕೆ ವಿವರ**

| ಕ್ರಸಂ. | ಗ್ರಾಮಗಳ ಹೆಸರು | ಒಟ್ಟು ಮಾದರಿ ಆಯ್ಕೆ | | | ಪ.ಜಾತಿ | | | ಪ.ಪಂ | | | ಮುಸ್ಲಿಂ | | | ಇತರೆ | | |
|---|---|---|---|---|---|---|---|---|---|---|---|---|---|---|---|---|
| | | M | F | T | M | F | T | M | F | T | M | F | T | M | F | T |
| 1 | ಬನ್ನಿಕಲ್ಲು | 32 | 33 | 65 | 13 | 18 | 31 | 5 | 6 | 11 | 5 | 4 | 9 | 9 | 5 | 14 |
| 2 | ಕಡಲಬಾಳು | 33 | 28 | 61 | 10 | 9 | 19 | 9 | 9 | 18 | 6 | 3 | 9 | 8 | 7 | 15 |
| 3 | ಮರಿಯಮ್ಮನಹಳ್ಳಿ | 30 | 26 | 56 | 10 | 10 | 20 | 10 | 8 | 18 | 6 | 4 | 10 | 4 | 4 | 8 |
| 4 | ಕಮಲಾಪುರ | 33 | 35 | 68 | 10 | 16 | 26 | 10 | 9 | 19 | 7 | 4 | 11 | 6 | 6 | 12 |
| 5 | ಹುಲಗಿ | 19 | 33 | 52 | 7 | 14 | 21 | 5 | 10 | 15 | 4 | 3 | 7 | 3 | 6 | 9 |
| 6 | ಗಿಣಿಗೇರಾ | 13 | 27 | 40 | 4 | 9 | 13 | 4 | 9 | 13 | 3 | 4 | 7 | 2 | 5 | 7 |
| 7 | ಹೇರೂರು | 22 | 30 | 52 | 9 | 11 | 20 | 6 | 9 | 15 | 4 | 4 | 8 | 3 | 6 | 9 |
| 8 | ಕನಕಗಿರಿ | 21 | 35 | 56 | 8 | 14 | 22 | 6 | 11 | 17 | 5 | 4 | 9 | 2 | 6 | 8 |
| | ಒಟ್ಟು | 203 | 247 | 450 | 61 | 101 | 172 | 55 | 71 | 126 | 40 | 30 | 70 | 37 | 45 | 82 |

*ಮೂಲ: ಪ್ರಾಥಮಿಕ ಅಂಕಿಅಂಶಗಳು*

ಕೋಷ್ಟಕ-4.3ರಲ್ಲಿ ಇರುವಂತೆ ಗ್ರಾಮವಾರು ಬಾಲಕಾರ್ಮಿಕರ ಜಾತಿವಾರು ಮಾದರಿ ಆಯ್ಕೆ ವಿವರಗಳನ್ನು ಅವಲೋಕಿಸಿದಾಗ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಬನ್ನಿಕಲ್ಲು ಗ್ರಾಮದ ಸುತ್ತಮುತ್ತಲಿನಲ್ಲಿ ಮಾದರಿ ಆಯ್ಕೆ ಮಾಡಿಕೊಂಡ ಒಟ್ಟು 65 ಬಾಲಕಾರ್ಮಿಕರ ಜಾತಿವಾರು ಮಕ್ಕಳನ್ನು ನೋಡಿದಾಗ ಇವರಲ್ಲಿ 32(49.23%) ಗಂಡು ಮಕ್ಕಳು ಹಾಗೂ 33(50.76%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಒಟ್ಟು ಬನ್ನಿಕಲ್ಲು ಗ್ರಾಮದ ಒಟ್ಟು 65(100%) ಮಾದರಿ ಆಯ್ಕೆಯಲ್ಲಿ ಪರಿಶಿಷ್ಟ ಜಾತಿಗೆ ಸೇರಿದ 31(47.69%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 31(20%) ಗಂಡು ಮಕ್ಕಳು ಹಾಗೂ 18(27.69%) ಹೆಣ್ಮು ಮಕ್ಕಳು ಇರುವುದನ್ನು ಕಾಣಬಹುದು. ಪರಿಶಿಷ್ಟ ಪಂಗಡಕ್ಕೆ ಸೇರಿದ 11(16.92%) ಬಾಲಕಾರ್ಮಿಕರನ್ನು ಗುರುತಿಸಲಾಗಿದೆ. ಇವರಲ್ಲಿ 5(7.69%) ಗಂಡು ಮಕ್ಕಳು ಹಾಗೂ 6(9.23%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಬನ್ನಿಕಲ್ಲು ಗ್ರಾಮದ ಸುತ್ತಮುತ್ತಲಿನ ಪ್ರದೇಶದಲ್ಲಿ ಕೆಲಸ ಮಾಡುವ ಮುಸ್ಲಿಂ ಸಮುದಾಯಕ್ಕೆ ಸೇರಿದ 9(13.84%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 5(7.69%) ಗಂಡು ಮಕ್ಕಳು ಹಾಗೂ 4(6.15%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ಇತರೆ ಸಮುದಾಯಕ್ಕೆ ಸೇರಿದ ಒಟ್ಟು 14(21.53%) ಬಾಲಕಾರ್ಮಿಕರನ್ನು ಬನ್ನಿಕಲ್ಲು ಗ್ರಾಮದ ಸುತ್ತಮುತ್ತಲಿನ ಪ್ರದೇಶದಲ್ಲಿ ಕಾಣಬಹುದು. ಇವರಲ್ಲಿ 9(13.84%) ಗಂಡು ಮಕ್ಕಳು ಹಾಗೂ 5(7.69%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು.

ಒಟ್ಟಾರೆ ಬನ್ನಿಕಲ್ಲು ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಒಟ್ಟು 65(100%) ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು ಪರಿಶಿಷ್ಟ ಜಾತಿಗೆ ಸೇರಿದ ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ನಂತರದ ಸ್ಥಾನದಲ್ಲಿ ಇತರೆ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರು ಹಾಗೂ ಮೂರನೇ ಸ್ಥಾನದಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಕೊನೆಯ ಸ್ಥಾನದಲ್ಲಿ ಮುಸ್ಲಿಂ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು.

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಇನ್ನೊಂದು ಗ್ರಾಮವಾದ ಕಡಲಬಾಳು ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಒಟ್ಟು 61 ಬಾಲಕಾಮಿಕರ ಮಾದರಿ ಆಯ್ಕೆಯನ್ನು ಮಾಡಿಕೊಳ್ಳಲಾಗಿದೆ. ಇವರಲ್ಲಿ 33(54.1%) ಗಂಡು ಮಕ್ಕಳು ಹಾಗೂ 28(45.9%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಪರಿಶಿಷ್ಟ ಜಾತಿಗೆ ಸೇರಿದ 19(31.14%) ಬಾಲಕಾರ್ಮಿಕರು ಕಡಲಬಾಳು ಗ್ರಾಮದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಇರುವುದನ್ನು ಕಾಣಬಹುದು. ಇವರಲ್ಲಿ 10(16.39%) ಗಂಡು ಮಕ್ಕಳು ಹಾಗೂ 9(14.750%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಪರಿಶಿಷ್ಟ ಪಂಗಡಕ್ಕೆ

ಸೇರಿದ ಒಟ್ಟು 18(29.50%) ಮಕ್ಕಳು ಇರುವುದನ್ನು ಕಾಣಬಹುದು. ಇವರಲ್ಲಿ 9(14.75%) ಗಂಡು ಮಕ್ಕಳು ಹಾಗೂ 9(14.75%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಅದೇ ರೀತಿಯಾಗಿ ಮುಸ್ಲಿಂ ಸಮುದಾಯಕ್ಕೆ ಸೇರಿದ 9(14.75%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 6(9.83%) ಗಂಡು ಮಕ್ಕಳು ಹಾಗೂ 3(4.91%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಹಾಗೆಯೇ ಇತರೆ ಸಮುದಾಯಕ್ಕೆ ಸೇರಿದ 15(24.59%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 8(13.11%) ಗಂಡು ಮಕ್ಕಳು ಹಾಗೂ 7(11.47%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಕಡಲಬಾಳು ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಮಾದರಿ ಆಯ್ಕೆ ಮಾಡಿಕೊಂಡ 61(100%) ಬಾಲಕಾರ್ಮಿಕರಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ಇತರೆ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರು ನಂತರದ ಸ್ಥಾನದಲ್ಲಿರುವುದನ್ನು ಕಾಣಬಹುದು. ಕೊನೆ ಸ್ಥಾನದಲ್ಲಿ ಮುಸ್ಲಿಂ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ.

ಕೋಷ್ಟಕ–4.3ರಲ್ಲಿ ಇರುವಂತೆ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಒಟ್ಟು 56(100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ 30(53.57%) ಗಂಡು ಮಕ್ಕಳು ಹಾಗೂ 26(46.47%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಮರಿಯಮ್ಮನಹಳ್ಳಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಒಟ್ಟು 56(100%) ಮಾದರಿ ಆಯ್ಕೆಯಲ್ಲಿ ಪರಿಶಿಷ್ಟ ಜಾತಿಗೆ ಸೇರಿದ 20(35.71%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 10(17.85%) ಗಂಡು ಮಕ್ಕಳು ಹಾಗೂ 10(17.85%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಪರಿಶಿಷ್ಟ ಪಂಗಡಕ್ಕೆ ಸೇರಿದ 18(32.14%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 10(17.85%) ಗಂಡು ಮಕ್ಕಳು ಹಾಗೂ 8(14.28%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಅದೇ ರೀತಿಯಾಗಿ ಈ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಮುಸ್ಲಿಂ ಸಮುದಾಯಕ್ಕೆ ಸೇರಿದ 10(17.85%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 6(10.71%) ಗಂಡು ಮಕ್ಕಳು ಹಾಗೂ 4(7.14%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಹಾಗೆಯೇ ಇತರೆ ಸಮುದಾಯಗಳಿಗೆ ಸೆರಿದ 8(14.28%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 4(7.14%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಹಾಗೆಯೇ ಇತರೆ ಸಮುದಾಯಗಳಿಗೆ ಸೇರಿದ 8(14.28%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 4(7.14%) ಗಂಡು ಮಕ್ಕಳು ಹಾಗೂ 4(7.14%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಮರಿಯಮ್ಮನಹಳ್ಳಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಒಟ್ಟು ಮಾದರಿ ಆಯ್ಕೆಯಲ್ಲಿ ಪರಿಶಿಷ್ಟ ಜಾತಿ ಹಾಗೂ ಪಂಗಡಕ್ಕೆ ಸೇರಿದ ಬಾಲಕಾರ್ಮಿಕರು ಹೆಚ್ಚಿನ

ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ನಂತರದ ಸ್ಥಾನದಲ್ಲಿ ಮುಸ್ಲಿಂ ಹಾಗೂ ಇತರೆ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದಾಗಿದೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂರಿನ ಇನ್ನೊಂದು ಗ್ರಾಮವಾದ ಕಮಲಾಪುರ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಒಟ್ಟು 68(100%) ಬಾಲಕಾರ್ಮಿಕರ ಮಾದರಿ ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 33(48.52%) ಗಂಡು ಮಕ್ಕಳು ಹಾಗೂ 35(51.47%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ. ಇವರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ 26(38.23%) ಬಾಲಕಾರ್ಮಿಕರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 10(14.70%) ಗಂಡು ಮಕ್ಕಳು ಹಾಗೂ 16(23.52%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಪರಿಶಿಷ್ಟ ಪಂಗಡಕ್ಕೆ ಸೇರಿದ 19(27.94%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 10(14.7%) ಗಂಡು ಮಕ್ಕಳು ಹಾಗೂ 9(13.23%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಹಾಗೆಯೇ ಮುಸ್ಲಿಂ ಸಮುದಾಯಕ್ಕೆ ಸೇರಿದ 11(16.17%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 7(10.29%) ಗಂಡು ಮಕ್ಕಳು ಹಾಗೂ 4(5.88%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ಇತರೆ ಸಮುದಾಯಗಳಿಗೆ ಸೇರಿದ 12(17.64%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 6(8.87%) ಗಂಡು ಮಕ್ಕಳು ಹಾಗೂ 6(8.87%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಕಮಲಾಪುರ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಒಟ್ಟು 68(100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯ ಮಕ್ಕಳು 35(51.47%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಹಾಗೆಯೇ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ಮುಸ್ಲಿಂ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರು ಕಡಿಮೆ ಸ್ಥಾನದಲ್ಲಿರುವುದನ್ನು ಕಾಣಬಹುದಾಗಿದೆ.

ಕೋಷ್ಟಕ –4.3ರಲ್ಲಿ ಇರುವಂತೆ ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲ್ಲೂಕಿನ ಹುಲಗಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಬಾಲಕಾರ್ಮಿಕರ ಜಾತಿವಾರು ಮಾದರಿ ಆಯ್ಕೆಯಲ್ಲಿ ಒಟ್ಟು 52(100%) ಬಾಲಕಾರ್ಮಿಕರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 19(36.53%) ಗಂಡು ಮಕ್ಕಳು ಹಾಗೂ 33(63.46%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಹಾಗೆಯೇ 52(100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಪರಿಶಿಷ್ಟ ಜಾತಿಗೆ ಸೇರಿದ 21(40.38%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 7(13.46%) ಗಂಡು ಮಕ್ಕಳು ಹಾಗೂ 14(26.92%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಪರಿಶಿಷ್ಟ ಪಂಗಡಕ್ಕೆ ಸೆರಿದ 15(28.84%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 5(9.61%) ಗಂಡು ಮಕ್ಕಳು ಹಾಗೂ 10(19.23%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಅದೇ ರೀತಿಯಾಗಿ

ಮುಸ್ಲಿಂ ಸಮುದಾಯಕ್ಕೆ ಸೇರಿದ 7(13.46%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 4(4.69%) ಗಂಡು ಮಕ್ಕಳು ಹಾಗೂ 3(5.76%) ಹೆಣ್ಣು ಮಕ್ಕಳು ಇರುವುದನ್ನು ಬಾಲಕಾರ್ಮಿಕರಾಗಿರುವುದನ್ನು ಕಾಣುತ್ತೇವೆ. ಹಾಗೆಯೇ ಇತರೆ ಸಮುದಾಯಗಳಿಗೆ ಸೇರಿದ 9(17.3%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 3(5.76%) ಗಂಡು ಮಕ್ಕಳು ಹಾಗೂ 6(11.53%) ಹೆಣ್ಣು ಮಕ್ಕಳಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಹುಲಗಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಒಟ್ಟು 52(100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಇವರ ಜಾತಿವಾರು ಅಂಕಿ ಅಂಶಗಳನ್ನು ವಿಶ್ಲೇಷಣೆ ಮಾಡಿದಾಗ ಹೆಚ್ಚಿನ ಸಂಖ್ಯೆಯಲ್ಲಿ 33(63.46%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಅದೇ ರೀತಿಯಾಗಿ ಹೆಚ್ಚಿನ ಬಾಲಕಾರ್ಮಿಕರು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಮಕ್ಕಳೇ ಹೆಚ್ಚಿನ ಸಂಖ್ಯೆಯಲ್ಲಿ ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಮುಸ್ಲಿಂ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರು ಕಡಿಮೆ ಸಂಖ್ಯೆಯಲ್ಲಿರುವುದನ್ನು ಕಾಣಬಹುದಾಗಿದೆ.

ಕೊಪ್ಪಳ ಜಿಲ್ಲೆಯ ಹಾಗೂ ಇದೇ ತಾಲ್ಲೂಕಿನ ಇನ್ನೊಂದು ಗ್ರಾಮವಾದ ಗಿಣಿಗೇರಾ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಒಟ್ಟು 40(100%) ಬಾಲಕಾರ್ಮಿಕರ ಮಾದರಿ ಆಯ್ಕೆಯನ್ನು ಮಾಡಿಕೊಳ್ಳಲಾಗಿದೆ. ಇವರಲ್ಲಿ 13(32.5%) ಗಂಡು ಮಕ್ಕಳು ಹಾಗೂ 27(67.5%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಗಿಣಿಗೇರಾ ಹಾಗೂ ಸುತ್ತಮುತ್ತಲಿನ ಪ್ರದೇಶಗಳ 40(100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಇವರ ಜಾತಿವಾರು ವಿವರಗಳನ್ನು ನೋಡಿದಾಗ ಪರಿಶಿಷ್ಟ ಜಾತಿಗೆ ಸೇರಿದ 13(32.5%) ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಇವರಲ್ಲಿ 4(10%) ಗಂಡು ಮಕ್ಕಳು ಹಾಗೂ 9(22.5%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ. ಪರಿಶಿಷ್ಟ ಪಂಗಡಕ್ಕೆ ಸೇರಿದ 13(32.5%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿಯೂ ಸಹ 4(10%) ಗಂಡು ಮಕ್ಕಳು ಹಾಗೂ 9(22.5%) ಹೆಣ್ಣು ಮಕ್ಕಳು ಇರುವುದನ್ನು ಕಾಣಬುದಾಗಿದೆ. ಅದೇ ರೀತಿಯಲ್ಲಿ ಮುಸ್ಲಿಂ ಸಮುದಾಯಕ್ಕೆ ಸೇರಿದ 7(17.5%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 3(7.5%) ಗಂಡು ಮಕ್ಕಳು ಹಾಗೂ 4(10%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಹಾಗೂ ಇತರೆ ಸಮುದಾಯಗಳಿಗೆ ಸೇರಿದ 7(17.5%) ಬಾಲಕಾರ್ಮಿಕರನ್ನು ಕಾಣುತ್ತೇವೆ. ಇವರಲ್ಲಿ 2(5%) ಗಂಡು ಮಕ್ಕಳು ಹಾಗೂ 5(12.5%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದಾಗಿದೆ.

ಒಟ್ಟಾರೆಯಾಗಿ ಕೊಪ್ಪಳ ತಾಲ್ಲೂಕಿನ ಗಿಣಿಗೇರಾ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿನ ಒಟ್ಟು 40 (100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಬಾಲಕಾರ್ಮಿಕರೇ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ನಂತರದ

ಸ್ಥಾನಗಳಲ್ಲಿ ಅಂದರೆ ಕಡಿಮೆ ಪ್ರಮಾಣದ ಬಾಲಕಾರ್ಮಿಕರು ಮುಸ್ಲಿಂ ಹಾಗೂ ಇತರೆ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರನ್ನು ಕಾಣಬಹುದಾಗಿದೆ.

ಕೋಷ್ಟಕ-4.3ರಲ್ಲಿ ಇರುವಂತೆ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಹೇರೂರು ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದಗಳಲ್ಲಿ ಒಟ್ಟು 52(100%) ಬಾಲಕಾರ್ಮಿಕರ ಮಾದರಿ ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 22(42.3%) ಗಂಡು ಮಕ್ಕಳು ಹಾಗೂ 30(57.69%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಪರಿಶಿಷ್ಟ ಜಾತಿಗೆ ಸೇರಿದ 20(38.46%) ಬಾಲಕಾರ್ಮಿಕರನ್ನು ಈ ಪ್ರದೇಶದಲ್ಲಿ ಇರುವುದನ್ನು ಕಾಣುತ್ತೇವೆ. ಇವರಲ್ಲಿ 9(17.3%)ಗಂಡು ಮಕ್ಕಳು ಹಾಗೂ 11(21.15%) ಹೆಣ್ಣು ಮಕ್ಕಳು ಇರುವುದನ್ನು ಕಾಣಬುಹುದು. ಪರಿಶಿಷ್ಟ ಪಂಗಡಕ್ಕೆ ಸೇರಿದ 15(28.84%) ಬಾಲಕಾರ್ಮಿಕರನ್ನು ಕಾಣುತ್ತೇವೆ. ಇವರಲ್ಲಿ 6(11.53%) ಗಂಡು ಮಕ್ಕಳು ಹಾಗೂ 9(17.3%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ. ಹಾಗೆಯೇ ಮುಸ್ಲಿಂ ಸಮುದಾಯಕ್ಕೆ ಸೇರಿದ 8(15.38%) ಬಾಲಕಾರ್ಮಿಕರನ್ನು ಕಾಣಬುಹುದು. ಇವರಲ್ಲಿ 4(7.69%) ಗಂಡು ಮಕ್ಕಳು ಹಾಗೂ 4(7.69%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಹಾಗೆಯೇ ಇತರೆ ಸಮುದಾಯಕ್ಕೆ ಸೇರಿದ 9(17.3%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 3(5.76%)ಗಂಡು ಮಕ್ಕಳು ಹಾಗೂ 6(11.53%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ.

ಒಟ್ಟಾರೆಯಾಗಿ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಹೇರೂರು ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಬಾಲಕಾರ್ಮಿಕರ ಒಟ್ಟು 52(100%) ಮಾದರಿ ಆಯ್ಕೆಯಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಬಾಲಕಾರ್ಮಿಕರೇ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಮುಸ್ಲಿಂ ಹಾಗೂ ಇತರೆ ಸಮುದಾಯಗಳಿಗೆ ಸೇರಿದ ಬಾಲಕಾರ್ಮಿಕರು ಸಹ ಇರುವುದನ್ನು ಕಾಣುತ್ತೇವೆ.

ಕೋಷ್ಟಕ-4.3ರಲ್ಲಿ ಇರುವಂತೆ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಇನ್ನೊಂದು ಗ್ರಾಮವಾದ ಕನಕಗಿರಿ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಒಟ್ಟು 56(100%) ಬಾಲಕಾರ್ಮಿಕ ಮಾದರಿ ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ21(37.5%) ಗಂಡು ಮಕ್ಕಳು ಹಾಗೂ 35(62.5%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ. ಒಟ್ಟು ಬಾಲಕಾರ್ಮಿಕರಲ್ಲಿ 22(39.29%) ಮಕ್ಕಳು ಪರಿಶಿಷ್ಟ ಜಾತಿಗೆ ಸೇರಿದ ಮಕ್ಕಳಾಗಿದ್ದಾರೆ. ಇವರಲ್ಲಿ 8(14.28%) ಗಂಡು ಮಕ್ಕಳು ಹಾಗೂ 14(25%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಪರಿಶಿಷ್ಟ ಪಂಗಡಕ್ಕೆ ಸೇರಿದ 17(30.35%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 6(10.71%) ಗಂಡು ಮಕ್ಕಳು ಹಾಗೂ 11(19.64%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಹಾಗೆಯೇ ಮುಸ್ಲಿಂ ಸಮುದಾಯಕ್ಕೆ ಸೇರಿದ 9(16.07%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 5(8.92.%) ಗಂಡು ಮಕ್ಕಳು ಹಾಗೂ 4(7.14%) ಹೆಣ್ಣು

ಮಕ್ಕಳು ಇರುವುದನ್ನು ಕಾಣಬಹುದು. ಹಾಗೆಯೇ ಇತರೆ ಸಮುದಾಯಕ್ಕೆ ಸೇರಿದ 8(14.28%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 2(3.57%) ಗಂಡು ಮಕ್ಕಳು ಹಾಗೂ 6(10.71%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ.

ಒಟ್ಟಾರೆಯಾಗಿ ಕನಕಗಿರಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಒಟ್ಟು ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆ ಬಾಲಕಾರ್ಮಿಕರು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರವುದನ್ನು ಕಾಣಬಹುದು. ಮುಸ್ಲಿಂ ಹಾಗೂ ಇತರೆ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರು ಇವುದನ್ನು ಕಾಣಬಹುದಾಗಿದೆ.

ಕೋಷ್ಟಕ–4.3ರಲ್ಲಿ ಇರುವಂತೆ ಒಟ್ಟಾರೆಯಾಗಿ ಬಾಲಕಾರ್ಮಿಕರ 450(100%) ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಲ್ಲಿ ಹೆಣ್ಣು ಮಕ್ಕಳೇ ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬುಹದು ಹಾಗೆಯೇ 172(38.22%) ಬಾಲಕಾರ್ಮಿಕರು ಪರಿಶಿಷ್ಟ ಜಾತಿಗೆ ಸೇರಿದ ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಇವರಲ್ಲಿಯೂ ಸಹ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳೇ ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಹಾಗೆಯೇ ಪರಿಶಿಷ್ಟ ಪಂಗಡಕ್ಕೆ ಸೇರಿದ 126(28%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಇತರೆ ಸಮುದಾಯಗಳಾದ ಕುರುಬ, ಕಬ್ಬಲಿಗ ಮುಂತಾದ ಹಿಂದುಳಿದ ವರ್ಗದ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರೂ ಇರುವುದನ್ನು ಕಾಣಬಹುದು. ಹಾಗೆಯೇ ಮುಸ್ಲಿಂ ಸಮುದಾಯಕ್ಕೆ ಸೇರಿದ ಬಾಲಕಾರ್ಮಿಕರು ಸಹ ಹೆಚ್ಚಿನ ಸಂಖ್ಯೆಯಲ್ಲಿ ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ.

ಹಾಗೆಯೇ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಸಂದರ್ಶನ ಮಾಡಿದ ಒಟ್ಟು 450 ಬಾಲಕಾರ್ಮಿಕರಲ್ಲಿ ಯಾವ ವಯೋಮಾನದ ಮಕ್ಕಳು ಯಾವ ಪ್ರದೇಶಗಳಲ್ಲಿ ಹಾಗೂ ಯಾವ ಯಾವ ವಯೋಮಾನದ ಮಕ್ಕಳು ದುಡಿಮೆಯಲ್ಲಿ ತೊಡಗಿರುವುದನ್ನು ಈ ಕೆಳಗಿನ ಕೋಷ್ಟಕಗಳ ಮುಖಾಂತರ ವಿವರಣೆ ನೀಡಲಾಗಿದೆ.

**ಕೋಷ್ಟಕ–4.4**

**ಜಿಲ್ಲಾವಾರು ಬಾಲಕಾರ್ಮಿಕರ ವಯೋಮಾನದ ಮಾದರಿ ಆಯ್ಕೆ ವಿವರ.**

| ಕ್ರಸಂ. | ಜಿಲ್ಲೆ ಹೆಸರು | ಒಟ್ಟು ಮಾದರಿ ಆಯ್ಕೆ | | | 6–9ವರ್ಷ | | | 10–12ವರ್ಷ | | | 13–14ವರ್ಷ | | |
|---|---|---|---|---|---|---|---|---|---|---|---|---|---|
| | | M | F | T | M | F | T | M | F | T | M | F | T |
| 1. | ಬಳ್ಳಾರಿ | 128 | 122 | 250 | 7 | 5 | 12 | 41 | 36 | 77 | 80 | 81 | 161 |
| 2. | ಕೊಪ್ಪಳ | 75 | 125 | 200 | 3 | 6 | 9 | 18 | 38 | 56 | 54 | 81 | 135 |
| | ಒಟ್ಟು | 203 | 247 | 450 | 10 | 11 | 21 | 59 | 74 | 133 | 134 | 162 | 296 |

*ಮೂಲ: ಪ್ರಾಥಮಿಕ ಅಂಕಿಅಂಶಗಳು*

ಕೋಷ್ಟಕ-4.4ರಲ್ಲಿರುವಂತೆ ಜಿಲ್ಲಾವಾರು ಬಾಲಕಾರ್ಮಿಕರ ವಯೋಮಾನದ ಮಾದರಿ ಆಯ್ಕೆ ವಿವರಗಳನ್ನು ಅವಲೋಕಿಸಿದಾಗ ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು 250(100%) ಬಾಲಕಾರ್ಮಿಕರನ್ನು ಸಂದರ್ಶನ ಮಾಡಿ ಅವರ ವಯೋಮಾನವನ್ನು ಕೇಳಲಾಯಿತು. ಒಟ್ಟು 250(100%) ಬಾಲಕಾರ್ಮಿಕರಲ್ಲಿ 128(51.2%) ಗಂಡು ಮಕ್ಕಳು ಹಾಗೂ 122(48.8%) ಹೆಣ್ಣು ಮಕ್ಕಳನ್ನು ಸಂದರ್ಶನ ಮಾಡಿದಾಗ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ 12(4.8%) ಮಕ್ಕಳು ಪತ್ತೆಯಾಗಿದ್ದಾರೆ. ಅವರಲ್ಲಿ 7(2.8%)ರಷ್ಟು ಗಂಡು ಮಕ್ಕಳು ಹಾಗೂ 5(2%)ರಷ್ಟು ಹೆಣ್ಣು ಮಕ್ಕಳು 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಅದೇ ರೀತಿಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ 250(100%) ಬಾಲಕಾರ್ಮಿಕರಲ್ಲಿ 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಒಟ್ಟು 77(30.8%) ಬಾಲಕಾರ್ಮಿಕರನ್ನು ಸಂದರ್ಶನ ಮಾಡಲಾಯಿತು. ಅವರಲ್ಲಿ 41(16.4%) ಗಂಡು ಮಕ್ಕಳು ಹಾಗೂ 36(14.4%) ಹೆಣ್ಣು ಮಕ್ಕಳು 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ ಬಳ್ಳಾರಿ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಬಾಲಕಾರ್ಮಿಕರಲ್ಲಿ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ಒಟ್ಟು 161(64.4%) ಮಕ್ಕಳು 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಈ ಒಟ್ಟು ಮಕ್ಕಳಲ್ಲಿ 80(32%) ಗಂಡು ಮಕ್ಕಳು ಹಾಗೂ 81(32.4%) ಹೆಣ್ಣು ಮಕ್ಕಳು 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಾಗಿದ್ದಾರೆ.

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ವಿಶ್ಲೇಷಿಸಿದಾಗ ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಹಾಗೂ 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಮಕ್ಕಳೇ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು. ಹಾಗೆಯೇ ನಂತರದ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು.

ಅದೇ ರೀತಿಯಲ್ಲಿ ಕೋಷ್ಟಕ-4.4ರಲ್ಲಿ ಇರುವಂತೆ ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ಬಾಲಕಾರ್ಮಿಕರಲ್ಲಿ 200(100%) ಬಾಲಕಾರ್ಮಿಕರನ್ನು ಮಾದರಿ ಆಯ್ಕೆ ಮಾಡಿ ಸಂದರ್ಶನ ಮಾಡಿದಾಗ ಅವರಲ್ಲಿ 75(37.5%) ಗಂಡುಮಕ್ಕಳು ಹಾಗೂ 125(62.5%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಅವರಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ 9(4.5%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 3(1.5%) ಗಂಡು ಮಕ್ಕಳು

ಹಾಗೂ 6(3%) ಹೆಣ್ಣು ಮಕ್ಕಳು 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಾಗಿದ್ದಾರೆ. ಅದೇ ರೀತಿಯಾಗಿ ಒಟ್ಟು 200(100%) ಬಾಲಕಾರ್ಮಿಕರಲ್ಲಿ 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ 56(28%) ಮಕ್ಕಳು ಕೊಪ್ಪಳ ಜಿಲ್ಲೆಯಲ್ಲಿ ಕಂಡುಬಂದಿದ್ದಾರೆ. ಇವರಲ್ಲಿ 18(9%) ಗಂಡು ಮಕ್ಕಳು ಹಾಗೂ 38(19%) ಹೆಣ್ಣು ಮಕ್ಕಳು 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಸೇರಿದ 135(67.5%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಈ ಬಾಲಕಾರ್ಮಿಕರಲ್ಲಿ 54(27%) ಗಂಡುಮಕ್ಕಳು ಹಾಗೂ 81(40.5%) ಹೆಣ್ಣು ಮಕ್ಕಳು ಬಾಲಕಾರ್ಮಿಕರು ಇರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಕೊಪ್ಪಳ ಜಿಲ್ಲೆಯಲ್ಲಿ ಮಾದರಿ ಆಯ್ಕೆ ಮಾಡಿಕೊಂಡ 200(100%) ಬಾಲಕಾರ್ಮಿಕರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳು 125(62.5%) ಇರುವುದನ್ನು ಕಾಣುತ್ತೇವೆ. ಹಾಗೆಯೇ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಹಾಗೂ 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ನಂತರದ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಜಿಲ್ಲಾವಾರು ಮಾದರಿ ಆಯ್ಕೆಯನ್ನು ವಿಶ್ಲೇಷಣೆ ಮಾಡಿದಾಗ ಒಟ್ಟು 450(100%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಅವರಲ್ಲಿ 203(45.11%) ಗಂಡುಮಕ್ಕಳು ಹಾಗೂ 247(54.88%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣುತ್ತೇವೆ. ಜಿಲ್ಲಾವಾರು ವಯೋಮಾನದ ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳು 247(54.88%) ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ ಅತೀ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಹಾಗೂ 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರೇ ಅತೀ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ನಂತರದ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಈ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

**ಕೋಷ್ಟಕ-4.5**

**ತಾಲ್ಲೂಕುವಾರು ಬಾಲಕಾರ್ಮಿಕರ ವಯೋಮಾನದ ಮಾದರಿ ಆಯ್ಕೆ ವಿವರ.**

| ಕ್ರಸಂ. | ತಾಲ್ಲೂಕು ಹೆಸರು | ಒಟ್ಟು ಮಾದರಿ ಆಯ್ಕೆ | | | 6-9ವರ್ಷ | | | 10-12ವರ್ಷ | | | 13-14ವರ್ಷ | | |
|---|---|---|---|---|---|---|---|---|---|---|---|---|---|
| | | M | F | T | M | F | T | M | F | T | M | F | T |
| 1. | ಹಗರಿಬೊಮ್ಮನಹಳ್ಳಿ | 65 | 61 | 126 | 4 | 2 | 6 | 23 | 15 | 38 | 38 | 44 | 82 |
| 2. | ಹೊಸಪೇಟೆ | 63 | 61 | 124 | 3 | 3 | 6 | 18 | 21 | 39 | 42 | 37 | 79 |
| 3. | ಕೊಪ್ಪಳ | 32 | 60 | 92 | 1 | 3 | 4 | 10 | 16 | 26 | 21 | 41 | 62 |
| 4. | ಗಂಗಾವತಿ | 43 | 65 | 108 | 2 | 3 | 5 | 8 | 22 | 30 | 33 | 40 | 73 |
| | ಒಟ್ಟು | 203 | 247 | 450 | 10 | 11 | 21 | 59 | 74 | 133 | 134 | 162 | 296 |

*ಮೂಲ: ಪ್ರಾಥಮಿಕ ಅಂಕಿಅಂಶಗಳು*

ಕೋಷ್ಟಕ-4.5ರಲ್ಲಿ ಇರುವಂತೆ ತಾಲ್ಲೂಕುವಾರು ಬಾಲಕಾರ್ಮಿಕರ ವಯೋಮಾನದ ಮಾದರಿ ಆಯ್ಕೆ ವಿವರಗಳನ್ನು ಕಾಣಬಹುದು. ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ಹಾಗೂ ಹೊಸಪೇಟೆ ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯ ಒಟ್ಟು 250(100%) ಮಾದರಿ ಆಯ್ಕೆಯಲ್ಲಿ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ 126 ಬಾಲಕಾರ್ಮಿಕರನ್ನು ಹಾಗೂ ಹೊಸಪೇಟೆ ತಾಲ್ಲೂಕಿನ 124 ಬಾಲಕಾರ್ಮಿಕರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಒಟ್ಟು 126(100%) ಮಾದರಿ ಆಯ್ಕೆಯಲ್ಲಿ 65(51.58%) ಗಂಡು ಮಕ್ಕಳು ಹಾಗೂ 61(48.42%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಒಟ್ಟು ಮಾದರಿ ಆಯ್ಕೆಯಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಒಟ್ಟು 6(4.76%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 4(3.17%) ಗಂಡು ಮಕ್ಕಳು ಹಾಗೂ 2(1.58%) ಹೆಣ್ಣು ಮಕ್ಕಳು 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ 38(30.01%) ಬಾಲಕಾರ್ಮಿಕರು ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿದ್ದಾರೆ. ಇವರಲ್ಲಿ 23(18.25%) ಗಂಡು ಮಕ್ಕಳು ಹಾಗೂ 15(11.90%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ 82(65.07%) ಮಕ್ಕಳು ಬಾಲಕಾರ್ಮಿಕರಾಗಿದ್ದಾರೆ. ಇವರಲ್ಲಿ 38(30.01%) ಗಂಡು ಮಕ್ಕಳು ಹಾಗೂ 44(34.92%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಒಟ್ಟು 126 ಬಾಲಕಾರ್ಮಿಕರನ್ನು ಮಾದರಿ ಆಯ್ಕೆ ಮಾಡಿಕೊಂಡಿದ್ದೇನೆ. ಇವರಲ್ಲಿ 65(51.58%) ಗಂಡು ಮಕ್ಕಳು ಹಾಗೂ 61(48.42%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಈ ಅಂಕಿ ಅಂಶಗಳಿಂದ ಬಾಲಕಾರ್ಮಿಕರು ಗಂಡು ಹಾಗೂ ಹೆಣ್ಣು ಮಕ್ಕಳು ಸಮಾನವಾಗಿರುವುದನ್ನು ಕಾಣುತ್ತೇವೆ. ಹಾಗೆಯೇ ಹೆಚ್ಚಿನ ಬಾಲಕಾರ್ಮಿಕರು 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಹಾಗೂ 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ನಂತರದ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು.

ಹಾಗೆಯೇ ಕೋಷ್ಟಕ-4.5ರಲ್ಲಿ ಇರುವಂತೆ ತಾಲ್ಲೂಕುವಾರು ಬಾಲಕಾರ್ಮಿಕರ ವಯೋಮಾನದ ಮಾದರಿ ಆಯ್ಕೆಯಲ್ಲಿ ಹೊಸಪೇಟೆ ತಾಲ್ಲೂಕಿನ ಒಟ್ಟು 124(100%) ಬಾಲಕಾರ್ಮಿಕರನ್ನು ವಯೋಮಾನದ ಸಮೀಕ್ಷೆ ಮಾಡಲಾಯಿತು. ಇವರಲ್ಲಿ 63(50.81%) ಗಂಡು ಮಕ್ಕಳು ಹಾಗೂ 61(49.19%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಹೊಸಪೇಟೆ ತಾಲ್ಲೂಕಿನ ಒಟ್ಟು 124(100%) ಮಾದರಿ ಆಯ್ಕೆಯಲ್ಲಿ 6(4.83%) ಮಕ್ಕಳು 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಇವರಲ್ಲಿ 3(2.41%) ಗಂಡು ಮಕ್ಕಳು ಹಾಗೂ 3(2.41%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಹೊಸಪೇಟೆ ತಾಲ್ಲೂಕಿನ ಒಟ್ಟು 124(100%) ಬಾಲಕಾರ್ಮಿಕರಲ್ಲಿ 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ 39(31.45%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 18(14.51%) ಗಂಡು ಮಕ್ಕಳು ಹಾಗೂ 21(16.93%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಹಾಗೆಯೇ ಈ ತಾಲ್ಲೂಕಿನಲ್ಲಿ ಮಾದರಿ ಆಯ್ಕೆ ಮಾಡಿಕೊಂಡ ಒಟ್ಟು 124(100%) ಬಾಲಕಾರ್ಮಿಕರಲ್ಲಿ 79(63.70%) ಮಕ್ಕಳು 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 42(33.87%) ಗಂಡು ಮಕ್ಕಳು ಹಾಗೂ 37(29.83%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಹೊಸಪೇಟೆ ತಾಲ್ಲೂಕಿನಲ್ಲಿ ಆಯ್ಕೆ ಮಾಡಿಕೊಂಡ ಮಾದರಿ ಆಯ್ಕೆಯಲ್ಲಿ 124(100%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 63(50.81%) ಗಂಡು ಮಕ್ಕಳು ಹಾಗೂ 61(49.19%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಈ ಎಲ್ಲಾ ಅಂಕಿಅಂಶಗಳನ್ನು ವಿಶ್ಲೇಷಿಸಿದಾಗ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಹಾಗೂ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಅತೀ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ನಂತರದ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು

ಕಾಣುತ್ತೇವೆ. ಕೋಷ್ಟಕದ ಅಂಕಿ ಅಂಶಗಳನ್ನು ಗಮನಿಸಿದಾಗ ಗಂಡು ಹಾಗೂ ಹೆಣ್ಣು ಮಕ್ಕಳು ಸಮಾನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಕೋಷ್ಟಕ–4.5ರಲ್ಲಿ ಇರುವಂತೆ ತಾಲ್ಲೂಕುವಾರು ಬಾಲಕಾರ್ಮಿಕರ ವಯೋಮಾನದ ಮಾದರಿ ಆಯ್ಕೆಯಲ್ಲಿ ಕೊಪ್ಪಳ ತಾಲ್ಲೂಕಿನಲ್ಲಿ ಒಟ್ಟು 92(100%) ಬಾಲಕಾರ್ಮಿಕರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 32(34.78%) ಗಂಡು ಮಕ್ಕಳು ಹಾಗೂ 60(65.21%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ತಾಲ್ಲೂಕುವಾರು ಬಾಲಕಾರ್ಮಿಕರನ್ನು ವಯೋಮಾನದ ಮಾದರಿ ಆಯ್ಕೆಯಲ್ಲಿ ನೋಡಿದಾಗ ಒಟ್ಟು 92(100%) ಬಾಲಕಾರ್ಮಿಕರರಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ 4(4.34%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 1(1.08%) ಗಂಡು ಮಕ್ಕಳು ಹಾಗೂ 3(3.26%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಕೊಪ್ಪಳ ತಾಲ್ಲೂಕುವಾರು ಮಾದರಿ ಆಯ್ಕೆಯ ಒಟ್ಟು 92(100%) ಬಾಲಕಾರ್ಮಿಕರಲ್ಲಿ 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ 26(28.26%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 10(10.86%) ಗಂಡು ಮಕ್ಕಳು ಹಾಗೂ 16(17.39%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಹಾಗೆಯೇ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ 62(67.39%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 21(22.83%) ಗಂಡು ಮಕ್ಕಳು ಹಾಗೂ 41(44.56) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಕೊಪ್ಪಳ ತಾಲ್ಲೂಕುವಾರು ಮಾದರಿ ಆಯ್ಕೆಯಲ್ಲಿ ಒಟ್ಟು 92(100%) ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಇವರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳು 60(65.21%) ಬಾಲಕಾರ್ಮಿಕರು ಇದ್ದಾರೆ. ಹಾಗೆಯೇ 32(34.75%) ಗಂಡು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿದ್ದಾರೆ.

ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಒಟ್ಟು 92(100%) ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಹಾಗೂ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ಹಾಗೆಯೇ ಕೊನೆ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಕೊಪ್ಪಳ ತಾಲ್ಲೂಕಿನಲ್ಲಿ ಇರುವುದನ್ನು ಕಾಣಬಹುದು.

ಕೋಷ್ಟಕ–4.5ರಲ್ಲಿ ಇರುವಂತೆ ಗಂಗಾವತಿ ತಾಲ್ಲೂಕುವಾರು ಬಾಲಕಾರ್ಮಿಕರ ವಯೋಮಾನದ ಮಾದರಿ ಆಯ್ಕೆ ವಿವರಗಳನ್ನು ವಿಶ್ಲೇಷಿಸಿದಾಗ ಗಂಗಾವತಿ ತಾಲ್ಲೂಕಿನಲ್ಲಿ ಒಟ್ಟು 108(100%)

ಬಾಲಕಾರ್ಮಿಕರ ಮಾದರಿ ಆಯ್ಕೆಯನ್ನು ಮಾಡಲಾಗಿದೆ. ಇವರಲ್ಲಿ 43(39.81%) ಗಂಡು ಮಕ್ಕಳು ಹಾಗೂ 65(60.19%) ಹೆಣ್ಣು ಮಕ್ಕಳು ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಗಂಗಾವತಿ ತಾಲ್ಲೂಕಿನ ಒಟ್ಟು 108(100%) ಬಾಲಕಾರ್ಮಿಕರಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ 5(4.62%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 2(1.85%) ಗಂಡು ಮಕ್ಕಳು ಹಾಗೂ 3(2.77%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಹಾಗೆಯೇ 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ 30(27.77%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 8(7.4%) ಗಂಡು ಮಕ್ಕಳು ಹಾಗೂ 22(20.37%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ 73(67.59%) ಬಾಲಕಾರ್ಮಿಕರನ್ನು ಕಾಣುತ್ತೇವೆ. ಇವರಲ್ಲಿ 33(30.55%) ಗಂಡು ಮಕ್ಕಳು ಹಾಗೂ 40(37.03%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು.

ಗಂಗಾವತಿ ತಾಲ್ಲೂಕಿನ ಒಟ್ಟಾರೆ ಬಾಲಕಾರ್ಮಿಕರ ಮಾದರಿ ಆಯ್ಕೆಯ ಅಂಕಿ ಅಂಶಗಳನ್ನು ವಿಶ್ಲೇಷಿಸಿದಾಗ ಒಟ್ಟು 108(100%) ಬಾಲಕಾರ್ಮಿಕರಿದ್ದು ಅವರಲ್ಲಿ 43(39.81%) ಗಂಡು ಮಕ್ಕಳು ಹಾಗೂ 65(60.19%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಗಂಗಾವತಿ ತಾಲ್ಲೂಕಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿಕೊಂಡಿರುವುದನ್ನು ಕಾಣಬಹುದು. ಹಾಗೂ 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಹಾಗೂ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಹೆಚ್ಚಿನ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿಕೊಂಡಿರುವುದನ್ನು ಕಾಣಬಹುದು. ನಂತರದ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಕೋಷ್ಟಕ–4.5ರಲ್ಲಿ ಇರುವಂತೆ ತಾಲ್ಲೂಕುವಾರು ಬಾಲಕಾರ್ಮಿಕರ ವಯೋಮಾನದ ಮಾದರಿ ಆಯ್ಕೆಯ ವಿವರಗಳನ್ನು ಅವಲೋಕಿಸಿದಾಗ ಒಟ್ಟು 450(100%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 203(45.11%) ಗಂಡು ಮಕ್ಕಳು ಹಾಗೂ 247(54.88%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಹಾಗೂ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಹೆಚ್ಚಿನ ಸಂಖ್ಯೆಯ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಹಾಗೆಯೇ ಕೊನೆಯ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ.

**ಕೋಷ್ಟಕ–4.6**

**ಗ್ರಾಮವಾರು ಬಾಲಕಾರ್ಮಿಕರ ವಯೋಮಾನದ ಮಾದರಿ ಆಯ್ಕೆ ವಿವರ.**

| ಕ್ರ.ಸಂ. | ಗ್ರಾಮಗಳ ಹೆಸರು | ಒಟ್ಟು ಮಾದರಿ ಆಯ್ಕೆ | | | 6–9ವರ್ಷ | | | 10–12ವರ್ಷ | | | 13–14ವರ್ಷ | | |
|---|---|---|---|---|---|---|---|---|---|---|---|---|---|
| | | M | F | T | M | F | T | M | F | T | M | F | T |
| 1. | ಬನ್ನಿಕಲ್ಲು | 32 | 33 | 65 | 2 | 1 | 3 | 13 | 9 | 22 | 17 | 23 | 40 |
| 2. | ಕಡಲಬಾಳು | 33 | 28 | 61 | 2 | 1 | 3 | 10 | 6 | 16 | 21 | 21 | 42 |
| 3. | ಮರಿಯಮ್ಮನಹಳ್ಳಿ | 30 | 26 | 56 | 1 | 1 | 2 | 8 | 10 | 18 | 21 | 15 | 36 |
| 4. | ಕಮಲಾಪುರ | 33 | 35 | 68 | 2 | 2 | 4 | 10 | 11 | 21 | 21 | 22 | 43 |
| 5. | ಹುಲಗಿ | 19 | 33 | 52 | 1 | 2 | 3 | 6 | 8 | 14 | 12 | 23 | 35 |
| 6. | ಗಿಣಿಗೇರಾ | 13 | 27 | 40 | 0 | 1 | 1 | 4 | 8 | 12 | 9 | 18 | 27 |
| 7. | ಹೇರೂರು | 22 | 30 | 52 | 1 | 2 | 3 | 4 | 14 | 18 | 17 | 14 | 31 |
| 8. | ಕನಕಗಿರಿ | 21 | 35 | 56 | 1 | 1 | 2 | 4 | 8 | 12 | 16 | 26 | 42 |
| | ಒಟ್ಟು | 203 | 247 | 450 | 10 | 11 | 21 | 59 | 74 | 133 | 134 | 162 | 296 |

*ಮೂಲ: ಪ್ರಾಥಮಿಕ ಅಂಕಿಅಂಶಗಳು*

ಕೋಷ್ಟಕ–4.6ರಲ್ಲಿ ಇರುವಂತೆ ಗ್ರಾಮವಾರು ಬಾಲಕಾರ್ಮಿಕರ ವಯೋಮಾನದ ಮಾದರಿ ಆಯ್ಕೆ ವಿವರಗಳನ್ನು ಅವಲೋಕಿಸಿದಾಗ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಬನ್ನಿಕಲ್ಲು ಗ್ರಾಮದ ಸುತ್ತಮುತ್ತಲಿನಲ್ಲಿ ಮಾದರಿ ಆಯ್ಕೆ ಮಾಡಿಕೊಂಡ ಒಟ್ಟು 65(100%) ಬಾಲಕಾರ್ಮಿಕರಲ್ಲಿ 32(49.23%) ಗಂಡು ಮಕ್ಕಳು ಹಾಗೂ 33(50.76%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಬನ್ನಿಕಲ್ಲು ಗ್ರಾಮದ ಒಟ್ಟು 65(100%) ಮಾದರಿ ಆಯ್ಕೆಯಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ 3(4.16%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 2(3.07%) ಗಂಡು ಮಕ್ಕಳು ಹಾಗೂ 1(1.53%) ಹೆಣ್ಮು ಮಕ್ಕಳು ಇರುವುದನ್ನು ಕಾಣಬಹುದು. 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ 22(33.84%) ಬಾಲಕಾರ್ಮಿಕರನ್ನು ಗುರುತಿಸಲಾಗಿದೆ. ಇವರಲ್ಲಿ 13(20%) ಗಂಡು ಮಕ್ಕಳು ಹಾಗೂ 9(13.84%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಬನ್ನಿಕಲ್ಲು ಗ್ರಾಮದ ಸುತ್ತಮುತ್ತಲಿನ ಪ್ರದೇಶದಲ್ಲಿ ಕೆಲಸ ಮಾಡುವ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ 40(61.53%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 17(26.15%) ಗಂಡು ಮಕ್ಕಳು ಹಾಗೂ 23(35.38%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು.

ಒಟ್ಟಾರೆ ಬನ್ನಿಕಲ್ಲು ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಒಟ್ಟು 65(100%) ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ

ಹಾಗೂ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಕೊನೆಯ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು.

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಇನ್ನೊಂದು ಗ್ರಾಮವಾದ ಕಡಲಬಾಳು ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಒಟ್ಟು 61 ಬಾಲಕಾಮಿಕರ ಮಾದರಿ ಆಯ್ಕೆಯನ್ನು ಮಾಡಿಕೊಳ್ಳಲಾಗಿದೆ. ಇವರಲ್ಲಿ 33(54.1%) ಗಂಡು ಮಕ್ಕಳು ಹಾಗೂ 28(45.9%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ 3(4.91%) ಬಾಲಕಾರ್ಮಿಕರು ಕಡಲಬಾಳು ಗ್ರಾಮದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಇರುವುದನ್ನು ಕಾಣಬಹುದು. ಇವರಲ್ಲಿ 2(3.27%) ಗಂಡು ಮಕ್ಕಳು ಹಾಗೂ 1(1.63%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಒಟ್ಟು 16(26.22%) ಮಕ್ಕಳು ಇರುವುದನ್ನು ಕಾಣಬಹುದು. ಇವರಲ್ಲಿ 10(16.4%) ಗಂಡು ಮಕ್ಕಳು ಹಾಗೂ 6(9.83%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಅದೇ ರೀತಿಯಾಗಿ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ 42(68.85%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 21(34.42%) ಗಂಡು ಮಕ್ಕಳು ಹಾಗೂ 21(34.42%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಕಡಲಬಾಳು ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಮಾದರಿ ಆಯ್ಕೆ ಮಾಡಿಕೊಂಡ 61(100%) ಬಾಲಕಾರ್ಮಿಕರಲ್ಲಿ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಹಾಗೂ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಕೊನೆಯ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು.

ಕೋಷ್ಟಕ–4.6ರಲ್ಲಿ ಇರುವಂತೆ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಒಟ್ಟು 56(100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ 30(53.57%) ಗಂಡು ಮಕ್ಕಳು ಹಾಗೂ 26(46.47%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಮರಿಯಮ್ಮನಹಳ್ಳಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಒಟ್ಟು 56(100%) ಮಾದರಿ ಆಯ್ಕೆಯಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ 2(3.57%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 1(1.78%) ಗಂಡು ಮಕ್ಕಳು ಹಾಗೂ 1(1.78%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ 18(32.14%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 8(14.28%) ಗಂಡು ಮಕ್ಕಳು ಹಾಗೂ 10(17.85%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ.

ಅದೇ ರೀತಿಯಾಗಿ ಈ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ 36(64.28%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 21(37.5%) ಗಂಡು ಮಕ್ಕಳು ಹಾಗೂ 15(26.78%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಮರಿಯಮ್ಮನಹಳ್ಳಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಒಟ್ಟು ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಹಾಗೂ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಕೊನೆಯ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಇನ್ನೊಂದು ಗ್ರಾಮವಾದ ಕಮಲಾಪುರ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಒಟ್ಟು 68(100%) ಬಾಲಕಾರ್ಮಿಕರ ಮಾದರಿ ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 33(48.52%) ಗಂಡು ಮಕ್ಕಳು ಹಾಗೂ 35(51.47%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ. ಇವರಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ 4(5.88%) ಬಾಲಕಾರ್ಮಿಕರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 2(2.94%) ಗಂಡು ಮಕ್ಕಳು ಹಾಗೂ 2(2.94%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ 21(30.88%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 10(14.7%) ಗಂಡು ಮಕ್ಕಳು ಹಾಗೂ 11(16.17%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಹಾಗೆಯೇ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ 43(63.23%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 21(30.88%) ಗಂಡು ಮಕ್ಕಳು ಹಾಗೂ 22(32.35%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಕಮಲಾಪುರ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಒಟ್ಟು 68(100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯ ಮಕ್ಕಳು 35(51.47%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಹಾಗೆಯೇ ಹೆಚ್ಚಿನ ಸಂಖ್ಯೆಯ ಮಕ್ಕಳು 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಹಾಗೂ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಕೊನೆಯ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು.

ಕೋಷ್ಟಕ–4.6ರಲ್ಲಿ ಇರುವಂತೆ ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲ್ಲೂಕಿನ ಹುಲಗಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಬಾಲಕಾರ್ಮಿಕರ ವಯೋಮಾನದ ಮಾದರಿ ಆಯ್ಕೆಯಲ್ಲಿ ಒಟ್ಟು 52(100%)

ಬಾಲಕಾರ್ಮಿಕರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 19(36.53%) ಗಂಡು ಮಕ್ಕಳು ಹಾಗೂ 33(63.46%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಹಾಗೆಯೇ 52(100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ 3(5.76%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 1(1.92%) ಗಂಡು ಮಕ್ಕಳು ಹಾಗೂ 2(3.84%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ 14(26.92%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 6(11.53%) ಗಂಡು ಮಕ್ಕಳು ಹಾಗೂ 8(15.38%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಅದೇ ರೀತಿಯಾಗಿ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ 35(67.3%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 12(23.07%) ಗಂಡು ಮಕ್ಕಳು ಹಾಗೂ 23(44.23%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಹುಲಗಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಒಟ್ಟು 52(100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಇವರ ವಯೋಮಾನದ ಅಂಕಿ ಅಂಶಗಳನ್ನು ವಿಶ್ಲೇಷಣೆ ಮಾಡಿದಾಗ ಹೆಚ್ಚಿನ ಸಂಖ್ಯೆಯಲ್ಲಿ 33(63.46%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಅದೇ ರೀತಿಯಾಗಿ ಹೆಚ್ಚಿನ ಸಂಖ್ಯೆಯ ಮಕ್ಕಳು 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಹಾಗೂ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಕೊನೆಯ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು.

ಕೊಪ್ಪಳ ಜಿಲ್ಲೆಯ ಹಾಗೂ ಇದೇ ತಾಲ್ಲೂಕಿನ ಇನ್ನೊಂದು ಗ್ರಾಮವಾದ ಗಿಣಿಗೇರಾ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಒಟ್ಟು 40(100%) ಬಾಲಕಾರ್ಮಿಕರ ಮಾದರಿ ಆಯ್ಕೆಯನ್ನು ಮಾಡಿಕೊಳ್ಳಲಾಗಿದೆ. ಇವರಲ್ಲಿ 13(32.5%) ಗಂಡು ಮಕ್ಕಳು ಹಾಗೂ 27(67.5%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಗಿಣಿಗೇರಾ ಹಾಗೂ ಸುತ್ತಮುತ್ತಲಿನ ಪ್ರದೇಶಗಳ 40(100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಇವರ ವಯೋಮಾನದ ವಿವರಗಳನ್ನು ನೋಡಿದಾಗ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ 1(2.5%) ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಇವರಲ್ಲಿ 0(0%) ಗಂಡು ಮಕ್ಕಳು ಹಾಗೂ 1(2.5%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ. 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ 12(30%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 4(10%) ಗಂಡು ಮಕ್ಕಳು ಹಾಗೂ 8(20%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ. ಅದೇ ರೀತಿಯಲ್ಲಿ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ 27(67.5%) ಬಾಲಕಾರ್ಮಿಕರಿದ್ದಾರೆ.

ಇವರಲ್ಲಿ 9(22.5%) ಗಂಡು ಮಕ್ಕಳು ಹಾಗೂ 18(45%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಕೊಪ್ಪಳ ತಾಲ್ಲೂಕಿನ ಗಿಣಿಗೇರಾ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿನ ಒಟ್ಟು 40 (100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯ ಮಕ್ಕಳು 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಹಾಗೂ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಕೊನೆಯ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು.

ಕೋಷ್ಟಕ–4.6ರಲ್ಲಿ ಇರುವಂತೆ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಹೇರೂರು ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದಗಳಲ್ಲಿ ಒಟ್ಟು 52(100%) ಬಾಲಕಾರ್ಮಿಕರ ಮಾದರಿ ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 22(42.3%) ಗಂಡು ಮಕ್ಕಳು ಹಾಗೂ 30(57.69%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ 3(5.76%) ಬಾಲಕಾರ್ಮಿಕರನ್ನು ಈ ಪ್ರದೇಶದಲ್ಲಿ ಇರುವುದನ್ನು ಕಾಣುತ್ತೇವೆ. ಇವರಲ್ಲಿ 1(1.92%)ಗಂಡು ಮಕ್ಕಳು ಹಾಗೂ 2(3.84%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ 18(34.61%) ಬಾಲಕಾರ್ಮಿಕರನ್ನು ಕಾಣುತ್ತೇವೆ. ಇವರಲ್ಲಿ 4(7.69%) ಗಂಡು ಮಕ್ಕಳು ಹಾಗೂ 14(26.92%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ. ಹಾಗೆಯೇ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ 31(59.61%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 17(32.69%) ಗಂಡು ಮಕ್ಕಳು ಹಾಗೂ 14(26.92%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಹೇರೂರು ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಬಾಲಕಾರ್ಮಿಕರ ಒಟ್ಟು 52(100%) ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಹಾಗೂ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಕೊನೆಯ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು.

ಕೋಷ್ಟಕ–4.6ರಲ್ಲಿ ಇರುವಂತೆ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಇನ್ನೊಂದು ಗ್ರಾಮವಾದ ಕನಕಗಿರಿ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಒಟ್ಟು 56(100%) ಬಾಲಕಾರ್ಮಿಕ ಮಾದರಿ ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 21(37.5%) ಗಂಡು ಮಕ್ಕಳು ಹಾಗೂ 35(62.5%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ. ಒಟ್ಟು ಬಾಲಕಾರ್ಮಿಕರಲ್ಲಿ 2(3.57%) ಮಕ್ಕಳು 6

ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಮಕ್ಕಳಾಗಿದ್ದಾರೆ. ಇವರಲ್ಲಿ 1(1.78%) ಗಂಡು ಮಕ್ಕಳು ಹಾಗೂ 1(1.78%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ 12(21.42%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 4(7.14%) ಗಂಡು ಮಕ್ಕಳು ಹಾಗೂ 8(14.28%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಹಾಗೆಯೇ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ 42(75%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 16(28.57.%) ಗಂಡು ಮಕ್ಕಳು ಹಾಗೂ 26(46.42%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ.

ಒಟ್ಟಾರೆಯಾಗಿ ಕನಕಗಿರಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಒಟ್ಟು ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆ ಬಾಲಕಾರ್ಮಿಕರು 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ ಹಾಗೂ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಕೊನೆಯ ಸ್ಥಾನದಲ್ಲಿ 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು.

ಕೋಷ್ಠಕ–4.6ರಲ್ಲಿ ಇರುವಂತೆ ಒಟ್ಟಾರೆಯಾಗಿ ಬಾಲಕಾರ್ಮಿಕರ 450(100%) ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳೇ ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು ಹಾಗೆಯೇ 21(4.66%) ಬಾಲಕಾರ್ಮಿಕರು 6 ರಿಂದ 9ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಇವರಲ್ಲಿಯೂ ಸಹ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳೇ ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಹಾಗೆಯೇ 10 ರಿಂದ 12 ವರ್ಷ ವಯೋಮಾನಕ್ಕೆ ಸೇರಿದ 133(29.55%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ 13 ರಿಂದ 14 ವರ್ಷ ವಯೋಮಾನಕ್ಕೆ ಸೇರಿದ ಬಾಲಕಾರ್ಮಿಕರು ಸಹ ಹೆಚ್ಚಿನ ಸಂಖ್ಯೆಯಲ್ಲಿ ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ.

ಬಾಲಕಾರ್ಮಿಕರ ಆರೋಗ್ಯ ಸಮಸ್ಯೆಯನ್ನು ಈ ಕೆಳಕಂಡ ಕೋಷ್ಟಕ–4.7ರಲ್ಲಿ ತಿಳಿಸಿದಂತೆ ಯಾವ ಮಕ್ಕಳು ಯಾವ ಕೆಲಸ ಮಾಡಿದರೆ ಯಾವ ರೋಗಗಳಿಗೆ ತುತ್ತಾಗುತ್ತಾರೆ ಎನ್ನುವುದನ್ನು ನೋಡಬಹುದು.

ಕೋಷ್ಟಕ – 4.7

ಬಾಲಕಾರ್ಮಿಕರ ಕೆಲಸ ಹಾಗೂ ಅದರಿಂದ ಬರುವ ರೋಗಗಳ ಪಟ್ಟಿ :

| ಕೆಲಸ/ವೃತ್ತಿ | ಬರುವ ರೋಗಗಳು |
|---|---|
| ಬೀಡಿ ಉದ್ದಿಮೆ. | ಕ್ಷಯ, ಶ್ವಾಸಕೋಶ ಸಂಬಂಧಿತ ರೋಗಗಳು, ಗಂಟಲು ರೋಗ. |
| ಕಟ್ಟಡ ನಿರ್ಮಾಣ. | ಅಪಘಾತಗಳು, ಬೆಳವಣಿಗೆಗೆ ಅಡ್ಡಿ. |
| ಚಿಂದಿ ಆಯುವುದು. | ಚರ್ಮವ್ಯಾಧಿಗಳು, ಸಾಂಕ್ರಾಮಿಕ ರೋಗಗಳು, ಧನುರ್ವಾಯು ಹಾಗೂ ಕೆಟ್ಟಚಟಗಳು. |
| ಗಣಿಗಾರಿಕೆ. | ಸಿಲಿಕೋಸಿಸ್ (ಶ್ವಾಸಕೋಶದ ಕಾಯಿಲೆ), ಕುಂಠಿತ ಬೆಳವಣಿಗೆ, ಕಣ್ಣುಬೇನೆ, ನಡುನೋವು, ಬೆನ್ನುಹುರಿಕಾಯಿಲೆ. |
| ಲೈಂಗಿಕ ಚಟುವಟಿಕೆಗಳು. | ಲೈಂಗಿಕ ರೋಗಗಳು, ಏಡ್ಸ್. |
| ವ್ಯವಸಾಯ. | ಕೀಟನಾಶಕಗಳು ಮತ್ತು ಫಾರ್ಮ್‌ಯಂತ್ರಗಳಿಂದ ಹಾನಿಗಳು, ಜ್ವರ, ಇತರೇ ಸಾಂಕ್ರಾಮಿಕ ರೋಗಗಳು. |
| ಮಂಡಕ್ಕಿ ಭಟ್ಟಿ | ಅಸ್ತಮಾ, ಶ್ವಾಸಕೋಶ ಸಂಬಂಧಿತ ರೋಗಗಳು, ಗಂಟಲುರೋಗ, ಕಣ್ಣುಬೇನೆ, ಚರ್ಮವ್ಯಾಧಿ, ಅಪಘಾತಗಳು. |
| ಮನೆಗೆಲಸ, ಅಂಗಡಿ ಮತ್ತು ಡಾಬಾಗಳಲ್ಲಿ ಕೆಲಸ. | ಮಿತಿಮೀರಿದ ದುಡಿಮೆ, ದೈಹಿಕ ಮತ್ತು ಲೈಂಗಿಕ ದುರಾಚಾರ, ಮತ್ತು ಬಿರಿಸುವ ವಸ್ತುಗಳು, ಪರಾಶ್ರಯ ಭಾವನೆ. |
| ಬಲೂನ್ ಕಾರ್ಖಾನೆಗಳು. | ನ್ಯೂಮೋನಿಯ, ಉಸಿರುಗಟ್ಟುವಿಕೆ, ಬ್ರೋಂಕೊ ನ್ಯೂಮೋನಿಯ, ಶ್ವಾಸಕೋಶ ಸಂಬಂಧಿ ಕಾಯಿಲೆಗಳು. |
| ಗಾಜಿನ ಕೈಗಾರಿಕೆ. | ಸಿಲಿಕೋಸಿಸ್ ಮತ್ತು ಸುಟ್ಟ ಗಾಯಗಳು, ಶಾಖ ಮತ್ತು ಧೂಳಿನಿಂದಾಗಿ ಜೀವನದ ಆಯುಷ್ಯದಲ್ಲಿ 1/3 ರಷ್ಟು ಕಡಿಮೆಗೊಳ್ಳುವ ಸಂಭವ. |

ಮೂಲ : ಕ್ಯಾತನಹಳ್ಳಿ ಬಸವರಾಜು –ಬಾಲಕಾರ್ಮಿಕರು

## 4.2. ಬಾಲಕಾರ್ಮಿಕರು ಮತ್ತು ಆರ್ಥಿಕತೆ

ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ದುಡಿಯುವ ಮಕ್ಕಳ ಆರ್ಥಿಕ ಪರಿಸ್ಥಿತಿ ತುಂಬಾ ಶೋಚನೀಯವಾಗಿದೆ. ಮಕ್ಕಳು ದುಡಿಮೆ ಮಾಡಲು ಬರುವುದು ಆರ್ಥಿಕ ಪರಿಸ್ಥಿತಿ ಸರಿಯಿಲ್ಲದ ಕಾರಣ ಮಕ್ಕಳು ಅನಿವಾರ್ಯವಾಗಿ ದುಡಿಯಲು ಹೋಗಬೇಕಾದ ಪರಿಸ್ಥಿತಿ ಉಂಟಾಗಿದೆ. ಇಲ್ಲಿ ದುಡಿಯುವ ಪ್ರತಿಯೊಬ್ಬ ಮಕ್ಕಳ ಆರ್ಥಿಕ ಸ್ಥಿತಿಗತಿ ತುಂಬಾ ಕೆಳಹಂತದಲ್ಲಿದೆ. ಮನೆಯಲ್ಲಿ ದೊಡ್ಡವರು , ಮಕ್ಕಳು ಸೇರಿ ಎಲ್ಲರೂ ದುಡಿದು ತಂದರೂ ಸಹ ಎರಡು ಹೊತ್ತಿನ ಊಟಕ್ಕೂ ಪರದಾಡ ಬೇಕಾದ ಪರಿಸ್ಥಿತಿ ಇದೆ. ಹೀಗಿರುವಾಗ ಇಲ್ಲಿ ಮಕ್ಕಳು ದುಡಿಮೆ ಮಾಡದೆ ಅನ್ಯ ಮಾರ್ಗವಿಲ್ಲವಾಗಿದೆ. ಮಕ್ಕಳ ದುಡಿಮೆಯಿಂದ ಕುಟುಂಬದ ಆರ್ಥಿಕ ಪರಿಸ್ಥಿತಿ ಸ್ವಲ್ಪ ಮಟ್ಟಿಗಾದರೂ ಸುಧಾರಿಸಿತು ಎಂಬ ಭರವಸೆ ಪೋಷಕರದ್ದು.

ಮಕ್ಕಳು ಸಾಮಾನ್ಯವಾಗಿ ಶಾಲೆಯಿಂದ ಹೊರಗಡೆ ಉಳಿದಿದ್ದಾರೆ ಎಂದರೆ ಅವರು ದುಡಿಮೆಯಲ್ಲಿ ತೊಡಗಿಕೊಂಡಿದ್ದಾರೆ ಎಂದು ಹೇಳಬಹುದು. ಇದಕ್ಕೆ ಪ್ರಮುಖ ಕಾರಣವಾಗಿ ಅವರ ಆರ್ಥಿಕ ಸ್ಥಿತಿ ಎಂದು ಹೇಳಬಹುದು. ಸರ್ಕಾರವು ಮಕ್ಕಳಿಗೆ 14 ವರ್ಷದವರೆಗೂ ಉಚಿತ ಹಾಗೂ

ಕಡ್ಡಾಯ ಶಿಕ್ಷಣವನ್ನು ಜಾರಿಗೊಳಿಸಿದ್ದರೂ ಇದನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ವಿಫಲವಾಗಿದೆ ಎಂದು ಹೇಳಬಹುದು. ಇದರ ಪರಿಣಾಮ ಇಂದು ಮಕ್ಕಳು ಶಾಲೆಯನ್ನು ಬಿಟ್ಟು ದುಡಿಮೆಗೆ ಹೋಗಬೇಕಾದ ಅನಿವಾರ್ಯತೆ ಉಂಟಾಗಿದೆ ಎಂದು ಹೇಳಬಹುದು.

ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಸುಮಾರು ಅರ್ಧಕ್ಕಿಂತ ಹೆಚ್ಚಿನ ಜನರು ಬಡತನ ರೇಖೆಗಿಂತ ಕೆಳಗಿದ್ದಾರೆ ಎಂದು ಹೇಳಬಹುದು. ಇಲ್ಲಿ ಶ್ರೀಮಂತಿಕೆ ಎನ್ನುವುದು ಕೆಲವು ವರ್ಗಗಳ ಸ್ವತ್ತಾಗಿದೆ ಎಂದು ಹೇಳಬಹುದು. ಬಡವರ ಮಕ್ಕಳೇ ಹೆಚ್ಚಾಗಿ ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಕೆಲ ಮಕ್ಕಳು ಶಾಲೆಗೆ ಹೋಗಿಬಂದ ನಂತರವೂ ದುಡಿಮೆಯಲ್ಲಿ ತೊಡಗಿ ಕೊಂಡಿರುವುದನ್ನು ನಾವು ಇಲ್ಲಿ ಕಾಣಬಹುದು. ಹಾಗೆಯೇ ಇಲ್ಲಿ ಸಂದರ್ಶನ ಮಾಡಿದ ಬಾಲಕಾರ್ಮಿಕರ ಉದ್ಯೋಗವಾರು ಮಾಹಿತಿಯನ್ನು ಈ ಕೆಳಗಿನ ಕೋಷ್ಟಕಗಳ ಮುಖಾಂತರ ವಿವರಣೆ ನೀಡಲಾಗಿದೆ. ಹಾಗೆಯೇ ಇಲ್ಲಿ ಸಂದರ್ಶನ ಮಾಡಿದ ಬಾಲಕಾರ್ಮಿಕರ ಉದ್ಯೋಗವಾರು ಮಾಹಿತಿಯನ್ನು ಈ ಕೆಳಗಿನ ಕೋಷ್ಟಕಗಳ ಮುಖಾಂತರ ವಿವರಣೆ ನೀಡಲಾಗಿದೆ.

**ಕೋಷ್ಟಕ–4.8**
**ಜಿಲ್ಲಾವಾರು ಬಾಲಕಾರ್ಮಿಕರ ಉದ್ಯೋಗದ ಮಾದರಿ ಆಯ್ಕೆ ವಿವರ.**

| ಕ್ರಸಂ. | ಜಿಲ್ಲೆ ಹೆಸರು | ಒಟ್ಟು ಮಾದರಿ ಆಯ್ಕೆ | | | ಕೃಷಿ | | | ವ್ಯಾಪಾರ | | | ಮನೆಗೆಲಸ | | | ಬಾರ್ ಮತ್ತು ಹೋಟೆಲ್ | | | ಇತರೆ | | |
|---|---|---|---|---|---|---|---|---|---|---|---|---|---|---|---|---|---|---|---|
| | | M | F | T | M | F | T | M | F | T | M | F | T | M | F | T | M | F | T |
| 1. | ಬಳ್ಳಾರಿ | 128 | 122 | 250 | 63 | 77 | 140 | 21 | 15 | 36 | 9 | 13 | 22 | 24 | 0 | 24 | 11 | 17 | 28 |
| 2. | ಕೊಪ್ಪಳ | 75 | 125 | 200 | 36 | 87 | 123 | 12 | 14 | 26 | 3 | 16 | 19 | 16 | 0 | 16 | 8 | 8 | 16 |
| | ಒಟ್ಟು | 203 | 247 | 450 | 99 | 164 | 263 | 33 | 29 | 62 | 12 | 29 | 41 | 40 | 0 | 40 | 19 | 25 | 44 |

*ಮೂಲ: ಪ್ರಾಥಮಿಕ ಅಂಕಿಅಂಶಗಳು*

ಕೋಷ್ಟಕ–4.8ರಲ್ಲಿರುವಂತೆ ಜಿಲ್ಲಾವಾರು ಬಾಲಕಾರ್ಮಿಕರ ಉದ್ಯೋಗದ ಮಾದರಿ ಆಯ್ಕೆ ವಿವರಗಳನ್ನು ಅವಲೋಕಿಸಿದಾಗ ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು 250(100%) ಬಾಲಕಾರ್ಮಿಕರನ್ನು ಸಂದರ್ಶನ ಮಾಡಿ ಅವರ ಉದ್ಯೋಗದ ಮಾಹಿತಿಯನ್ನು ಕೇಳಲಾಯಿತು. ಒಟ್ಟು 250(100%) ಬಾಲಕಾರ್ಮಿಕರಲ್ಲಿ 128(51.2%) ಗಂಡು ಮಕ್ಕಳು ಹಾಗೂ 122(48.8%) ಹೆಣ್ಣು ಮಕ್ಕಳನ್ನು ಸಂದರ್ಶನ ಮಾಡಿದಾಗ ಕೃಷಿಯನ್ನು ಉದ್ಯೋಗವನ್ನಾಗಿ ಮಾಡುವ 140(56.0%) ಮಕ್ಕಳು ಪತ್ತೆಯಾದರು. ಅವರಲ್ಲಿ 63(25.2%)ರಷ್ಟು ಗಂಡು ಮಕ್ಕಳು ಹಾಗೂ 77(30.8%)ರಷ್ಟು ಹೆಣ್ಣು ಮಕ್ಕಳು ಕೃಷಿಯನ್ನು ಉದ್ಯೋಗವನ್ನಾಗಿ ಮಾಡುವ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಅದೇ ರೀತಿಯಲ್ಲಿ

ಬಳ್ಳಾರಿ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ 250(100%) ಬಾಲಕಾರ್ಮಿಕರಲ್ಲಿ ವ್ಯಾಪಾರವನ್ನು ಉದ್ಯೋಗವನ್ನಾಗಿ ಮಾಡುವ ಒಟ್ಟು 36(14.4.4%) ಬಾಲಕಾರ್ಮಿಕರನ್ನು ಸಂದರ್ಶನ ಮಾಡಲಾಯಿತು. ಅವರಲ್ಲಿ 21(8.4%) ಗಂಡು ಮಕ್ಕಳು ಹಾಗೂ 15(6.0%) ಹೆಣ್ಣು ಮಕ್ಕಳು ವ್ಯಾಪಾರವನ್ನು ಉದ್ಯೋಗವನ್ನಾಗಿ ಮಾಡುವ ಮಕ್ಕಳಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ ಬಳ್ಳಾರಿ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಬಾಲಕಾರ್ಮಿಕರಲ್ಲಿ ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡುವ ಬಾಲಕಾರ್ಮಿಕರು ಕಾಣುತ್ತೇವೆ. ಒಟ್ಟು 22(8.8%) ಮಕ್ಕಳು ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡುವ ಬಾಲಕಾರ್ಮಿಕರನ್ನು ಕಾಣಬಹುದು. ಈ ಒಟ್ಟು ಮಕ್ಕಳಲ್ಲಿ 9(3.6%) ಗಂಡು ಮಕ್ಕಳು ಹಾಗೂ 13(5.2%) ಹೆಣ್ಣು ಮಕ್ಕಳು ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡುವ ಬಾಲಕಾರ್ಮಿಕರಾಗಿದ್ದಾರೆ. ಅದೇ ರೀತಿಯಲ್ಲಿ ಬಾರ್ ಮತ್ತು ಹೋಟೆಲ್‌ಗಳಲ್ಲಿ ಕೆಲಸ ಮಾಡುವ ಬಾಲಕಾರ್ಮಿಕರು 24(9.6%) ರಷ್ಟು ಪತ್ತೆಯಾಗಿರುವುದನ್ನು ಕಾಣಬಹುದು. ಇವರಲ್ಲಿ 24(9.6%) ಗಂಡು ಮಕ್ಕಳು ಹಾಗೂ 0(0%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಹಾಗೆಯೇ ಇತರೆ ಉದ್ಯೋಗಗಳಲ್ಲಿ ಕೆಲಸ ಮಾಡುವ 28(11.2%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 11(4.4%) ಗಂಡು ಮಕ್ಕಳು ಹಾಗೂ 17(6.8) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ವಿಶ್ಲೇಷಿಸಿದಾಗ ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು ಕೃಷಿಯನ್ನು ಉದ್ಯೋಗವನ್ನಾಗಿ ಮಾಡುವ ಹಾಗೂ ವ್ಯಾಪಾರವನ್ನು ಉದ್ಯೋಗವನ್ನಾಗಿ ಮಾಡುವ ಮಕ್ಕಳೇ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು. ಹಾಗೆಯೇ ನಂತರದ ಸ್ಥಾನಗಳಲ್ಲಿ ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡುವ ಮಕ್ಕಳು ಹಾಗೂ ಬಾರ್ ಮತ್ತು ಹೋಟೆಲ್‌ಗಳಲ್ಲಿ ಕೆಲಸ ಮಾಡುವ ಮಕ್ಕಳು ಮತ್ತು ಇತರೆ ಉದ್ಯೋಗವನ್ನು ಮಾಡುವ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು.

ಅದೇ ರೀತಿಯಲ್ಲಿ ಕೋಷ್ಟಕ–4.8ರಲ್ಲಿ ಇರುವಂತೆ ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ಬಾಲಕಾರ್ಮಿಕರಲ್ಲಿ 200(100%) ಬಾಲಕಾರ್ಮಿಕರನ್ನು ಮಾದರಿ ಆಯ್ಕೆ ಮಾಡಿ ಸಂದರ್ಶನ ಮಾಡಿದಾಗ ಅವರಲ್ಲಿ 75(37.5%) ಗಂಡುಮಕ್ಕಳು ಹಾಗೂ 125(62.5%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಅವರಲ್ಲಿ ಕೃಷಿಯನ್ನು ಉದ್ಯೋಗವನ್ನಾಗಿ ಮಾಡುವ 123(61.5%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 36(18%) ಗಂಡು ಮಕ್ಕಳು ಹಾಗೂ 87(43.5%) ಹೆಣ್ಣು ಮಕ್ಕಳು ಕೃಷಿಯನ್ನು ಉದ್ಯೋಗವನ್ನಾಗಿ ಮಾಡುವ ಬಾಲಕಾರ್ಮಿಕರಾಗಿದ್ದಾರೆ. ಅದೇ ರೀತಿಯಾಗಿ ಒಟ್ಟು 200(100%) ಬಾಲಕಾರ್ಮಿಕರಲ್ಲಿ ವ್ಯಾಪಾರವನ್ನು ಉದ್ಯೋಗವನ್ನಾಗಿ ಮಾಡುವ 26(13.0%) ಮಕ್ಕಳು ಕೊಪ್ಪಳ ಜಿಲ್ಲೆಯಲ್ಲಿ ಕಂಡುಬಂದಿದ್ದಾರೆ. ಇವರಲ್ಲಿ 12(6.0%) ಗಂಡು ಮಕ್ಕಳು ಹಾಗೂ

14(7.0%) ಹೆಣ್ಣು ಮಕ್ಕಳು ವ್ಯಾಪಾರವನ್ನು ಉದ್ಯೋಗವನ್ನಾಗಿ ಮಾಡುವ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡುವ 19(9.5%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಈ ಬಾಲಕಾರ್ಮಿಕರಲ್ಲಿ 3(1.5%) ಗಂಡುಮಕ್ಕಳು ಹಾಗೂ 16(8.0%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ಬಾರ್ ಮತ್ತು ಹೋಟೆಲ್‌ಗಳಲ್ಲಿ ಕೆಲಸ ಮಾಡುವ ಬಾಲಕಾರ್ಮಿಕರು 16(8.0%) ರಷ್ಟು ಪತ್ತೆಯಾಗಿರುವುದನ್ನು ಕಾಣಬಹುದು. ಇವರಲ್ಲಿ 16(8.0%) ಗಂಡು ಮಕ್ಕಳು ಹಾಗೂ 0(0%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಹಾಗೆಯೇ ಇತರೆ ಉದ್ಯೋಗಗಳಲ್ಲಿ ಕೆಲಸ ಮಾಡುವ 16(8.0%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 8(4.0%) ಗಂಡು ಮಕ್ಕಳು ಹಾಗೂ 8(8.0%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಕೊಪ್ಪಳ ಜಿಲ್ಲೆಯಲ್ಲಿ ಮಾದರಿ ಆಯ್ಕೆ ಮಾಡಿಕೊಂಡ 200(100%) ಬಾಲಕಾರ್ಮಿಕರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಬಾಲಕಾರ್ಮಿಕರು ಕೃಷಿಯನ್ನು ಉದ್ಯೋಗವನ್ನಾಗಿ ಮಾಡುವ ಹಾಗೂ ವ್ಯಾಪಾರವನ್ನು ಉದ್ಯೋಗವನ್ನಾಗಿ ಮಾಡುವ ಮಕ್ಕಳೇ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು. ಹಾಗೆಯೇ ನಂತರದ ಸ್ಥಾನಗಳಲ್ಲಿ ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡುವ ಮಕ್ಕಳು ಹಾಗೂ ಬಾರ್ ಮತ್ತು ಹೋಟೆಲ್‌ಗಳಲ್ಲಿ ಕೆಲಸ ಮಾಡುವ ಮಕ್ಕಳು ಮತ್ತು ಇತರೆ ಉದ್ಯೋಗವನ್ನು ಮಾಡುವ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಜಿಲ್ಲಾವಾರು ಮಾದರಿ ಆಯ್ಕೆಯನ್ನು ವಿಶ್ಲೇಷಣೆ ಮಾಡಿದಾಗ ಒಟ್ಟು 450(100%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಅವರಲ್ಲಿ 203(45.11%) ಗಂಡುಮಕ್ಕಳು ಹಾಗೂ 247(54.88%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣುತ್ತೇವೆ. ಹಾಗೆಯೇ ಅತೀ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು ಕೃಷಿಯನ್ನು ಉದ್ಯೋಗವನ್ನಾಗಿ ಮಾಡುವ ಹಾಗೂ ವ್ಯಾಪಾರವನ್ನು ಉದ್ಯೋಗವನ್ನಾಗಿ ಮಾಡುವ ಮಕ್ಕಳೇ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು. ಹಾಗೆಯೇ ನಂತರದ ಸ್ಥಾನಗಳಲ್ಲಿ ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡುವ ಮಕ್ಕಳು ಹಾಗೂ ಬಾರ್ ಮತ್ತು ಹೋಟೆಲ್‌ಗಳಲ್ಲಿ ಕೆಲಸ ಮಾಡುವ ಮಕ್ಕಳು ಮತ್ತು ಇತರೆ ಉದ್ಯೋಗವನ್ನು ಮಾಡುವ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಈ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

**ಕೋಷ್ಟಕ–4.9**

ತಾಲ್ಲೂಕುವಾರು ಬಾಲಕಾರ್ಮಿಕರ ಉದ್ಯೋಗದ ಮಾದರಿ ಆಯ್ಕೆ ವಿವರ.

| ಕ್ರಸಂ. | ತಾಲ್ಲೂಕು ಹೆಸರು | ಒಟ್ಟು ಮಾದರಿ ಆಯ್ಕೆ | | | ಕೃಷಿ | | | ವ್ಯಾಪಾರ | | | ಮನೆಗೆಲಸ | | | ಬಾರ್ ಮತ್ತು ಹೋಟೆಲ್ | | | ಇತರೆ | | |
|---|---|---|---|---|---|---|---|---|---|---|---|---|---|---|---|---|---|---|---|
| | | M | F | T | M | F | T | M | F | T | M | F | T | M | F | T | M | F | T |
| 1. | ಹಗರಿಬೊಮ್ಮನಹಳ್ಳಿ | 65 | 61 | 126 | 29 | 36 | 65 | 11 | 7 | 18 | 5 | 9 | 14 | 11 | 0 | 11 | 9 | 9 | 18 |
| 2. | ಹೊಸಪೇಟೆ | 63 | 61 | 124 | 34 | 41 | 75 | 10 | 8 | 18 | 4 | 4 | 8 | 13 | 0 | 13 | 2 | 8 | 10 |
| 3. | ಕೊಪ್ಪಳ | 32 | 60 | 92 | 17 | 43 | 65 | 6 | 8 | 14 | 1 | 9 | 10 | 8 | 0 | 8 | 0 | 0 | 0 |
| 4. | ಗಂಗಾವತಿ | 43 | 65 | 108 | 19 | 44 | 58 | 6 | 6 | 12 | 2 | 7 | 9 | 8 | 0 | 8 | 8 | 8 | 16 |
| | ಒಟ್ಟು | 203 | 247 | 450 | 99 | 164 | 263 | 33 | 29 | 62 | 12 | 29 | 41 | 40 | 0 | 40 | 19 | 25 | 44 |

*ಮೂಲ: ಪ್ರಾಥಮಿಕ ಅಂಕಿಅಂಶಗಳು*

ಕೋಷ್ಟಕ–4.9ರಲ್ಲಿ ಇರುವಂತೆ ತಾಲ್ಲೂಕುವಾರು ಬಾಲಕಾರ್ಮಿಕರ ಉದ್ಯೋಗದ ಮಾದರಿ ಆಯ್ಕೆ ವಿವರಗಳನ್ನು ಕಾಣಬಹುದು. ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ಹಾಗೂ ಹೊಸಪೇಟೆ ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯ ಒಟ್ಟು 250(100%) ಮಾದರಿ ಆಯ್ಕೆಯಲ್ಲಿ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ 126 ಬಾಲಕಾರ್ಮಿಕರನ್ನು ಹಾಗೂ ಹೊಸಪೇಟೆ ತಾಲ್ಲೂಕಿನ 124 ಬಾಲಕಾರ್ಮಿಕರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಒಟ್ಟು 126(100%) ಮಾದರಿ ಆಯ್ಕೆಯಲ್ಲಿ 65(51.58%) ಗಂಡು ಮಕ್ಕಳು ಹಾಗೂ 61(48.42%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಒಟ್ಟು ಮಾದರಿ ಆಯ್ಕೆಯಲ್ಲಿ ಕೃಷಿಯನ್ನು ಉದ್ಯೋಗವನ್ನಾಗಿ ಮಾಡುವ 65(51.58%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 29(23.01%) ಗಂಡು ಮಕ್ಕಳು ಹಾಗೂ 36(28.57%) ಹೆಣ್ಣು ಮಕ್ಕಳು ಕೃಷಿಯನ್ನು ಉದ್ಯೋಗವನ್ನಾಗಿ ಮಾಡುವ ಬಾಲಕಾರ್ಮಿಕರಾಗಿದ್ದಾರೆ. ಅದೇ ರೀತಿಯಾಗಿ ಒಟ್ಟು 126(100%) ಬಾಲಕಾರ್ಮಿಕರಲ್ಲಿ ವ್ಯಾಪಾರವನ್ನು ಉದ್ಯೋಗವನ್ನಾಗಿ ಮಾಡುವ 18(14.28%) ಮಕ್ಕಳು ಕಂಡುಬಂದಿದ್ದಾರೆ. ಇವರಲ್ಲಿ 11(8.73%) ಗಂಡು ಮಕ್ಕಳು ಹಾಗೂ 7(5.55%) ಹೆಣ್ಣು ಮಕ್ಕಳು ವ್ಯಾಪಾರವನ್ನು ಉದ್ಯೋಗವನ್ನಾಗಿ ಮಾಡುವ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡುವ 14(11.11%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಈ ಬಾಲಕಾರ್ಮಿಕರಲ್ಲಿ 5(3.96%) ಗಂಡುಮಕ್ಕಳು ಹಾಗೂ 9(7.14%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ಬಾರ್ ಮತ್ತು ಹೋಟೆಲ್‌ಗಳಲ್ಲಿ ಕೆಲಸ ಮಾಡುವ ಬಾಲಕಾರ್ಮಿಕರು 11(8.73%) ರಷ್ಟು ಪತ್ತೆಯಾಗಿರುವುದನ್ನು ಕಾಣಬಹುದು. ಇವರಲ್ಲಿ 11(8.73%) ಗಂಡು ಮಕ್ಕಳು ಹಾಗೂ 0(0%) ಹೆಣ್ಣು ಮಕ್ಕಳು

ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಹಾಗೆಯೇ ಇತರೆ ಉದ್ಯೋಗಗಳಲ್ಲಿ ಕೆಲಸ ಮಾಡುವ 18(14.28%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 9(7.14%) ಗಂಡು ಮಕ್ಕಳು ಹಾಗೂ 9(7.14%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಒಟ್ಟು 126 ಬಾಲಕಾರ್ಮಿಕರನ್ನು ಮಾದರಿ ಆಯ್ಕೆ ಮಾಡಿಕೊಂಡಿದ್ದೇನೆ. ಇವರಲ್ಲಿ 65(51.58%) ಗಂಡು ಮಕ್ಕಳು ಹಾಗೂ 61(48.42%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಈ ಅಂಕಿ ಅಂಶಗಳಿಂದ ಬಾಲಕಾರ್ಮಿಕರು ಗಂಡು ಹಾಗೂ ಹೆಣ್ಣು ಮಕ್ಕಳು ಸಮಾನವಾಗಿರುವುದನ್ನು ಕಾಣುತ್ತೇವೆ. ಹಾಗೆಯೇ ಹೆಚ್ಚಿನ ಬಾಲಕಾರ್ಮಿಕರು ಕೃಷಿಯನ್ನು ಉದ್ಯೋಗವನ್ನಾಗಿ ಮಾಡುವ ಹಾಗೂ ವ್ಯಾಪಾರವನ್ನು ಉದ್ಯೋಗವನ್ನಾಗಿ ಮಾಡುವ ಮಕ್ಕಳೇ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು. ಹಾಗೆಯೇ ನಂತರದ ಸ್ಥಾನಗಳಲ್ಲಿ ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡುವ ಮಕ್ಕಳು ಹಾಗೂ ಬಾರ್ ಮತ್ತು ಹೋಟೆಲ್‌ಗಳಲ್ಲಿ ಕೆಲಸ ಮಾಡುವ ಮಕ್ಕಳು ಮತ್ತು ಇತರೆ ಉದ್ಯೋಗವನ್ನು ಮಾಡುವ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಈ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

ಹಾಗೆಯೇ ಕೋಷ್ಟಕ–4.9ರಲ್ಲಿ ಇರುವಂತೆ ತಾಲ್ಲೂಕುವಾರು ಬಾಲಕಾರ್ಮಿಕರ ಉದ್ಯೋಗದ ಮಾದರಿ ಆಯ್ಕೆಯಲ್ಲಿ ಹೊಸಪೇಟೆ ತಾಲ್ಲೂಕಿನ ಒಟ್ಟು 124(100%) ಬಾಲಕಾರ್ಮಿಕರನ್ನು ಉದ್ಯೋಗವಾರು ಸಮೀಕ್ಷೆ ಮಾಡಲಾಯಿತು. ಇವರಲ್ಲಿ 63(50.81%) ಗಂಡು ಮಕ್ಕಳು ಹಾಗೂ 61(49.19%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಹೊಸಪೇಟೆ ತಾಲ್ಲೂಕಿನ ಒಟ್ಟು 124(100%) ಮಾದರಿ ಆಯ್ಕೆಯಲ್ಲಿ ಕೃಷಿಯನ್ನು ಉದ್ಯೋಗವನ್ನಾಗಿ ಮಾಡುವ 75(60.48%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 34(27.41%) ಗಂಡು ಮಕ್ಕಳು ಹಾಗೂ 41(33.06%) ಹೆಣ್ಣು ಮಕ್ಕಳು ಕೃಷಿಯನ್ನು ಉದ್ಯೋಗವನ್ನಾಗಿ ಮಾಡುವ ಬಾಲಕಾರ್ಮಿಕರಾಗಿದ್ದಾರೆ. ಅದೇ ರೀತಿಯಾಗಿ ಒಟ್ಟು 124(100%) ಬಾಲಕಾರ್ಮಿಕರಲ್ಲಿ ವ್ಯಾಪಾರವನ್ನು ಉದ್ಯೋಗವನ್ನಾಗಿ ಮಾಡುವ 18(14.51%) ಮಕ್ಕಳು ಕಂಡುಬಂದಿದ್ದಾರೆ. ಇವರಲ್ಲಿ 10(8.06%) ಗಂಡು ಮಕ್ಕಳು ಹಾಗೂ 8(6.45%) ಹೆಣ್ಣು ಮಕ್ಕಳು ವ್ಯಾಪಾರವನ್ನು ಉದ್ಯೋಗವನ್ನಾಗಿ ಮಾಡುವ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡುವ 8(6.45%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಈ ಬಾಲಕಾರ್ಮಿಕರಲ್ಲಿ 4(3.22%) ಗಂಡುಮಕ್ಕಳು ಹಾಗೂ 4(3.22%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ಬಾರ್ ಮತ್ತು ಹೋಟೆಲ್‌ಗಳಲ್ಲಿ ಕೆಲಸ ಮಾಡುವ ಬಾಲಕಾರ್ಮಿಕರು 13(10.48%) ರಷ್ಟು ಪತ್ತೆಯಾಗಿರುವುದನ್ನು ಕಾಣಬಹುದು. ಇವರಲ್ಲಿ 13(10.48%) ಗಂಡು ಮಕ್ಕಳು ಹಾಗೂ 0(0%) ಹೆಣ್ಣು ಮಕ್ಕಳು

ಕಾಣುತ್ತೇವೆ. ಹಾಗೆಯೇ ರೂ.4000ಕ್ಕಿಂತ ಹೆಚ್ಚು ತಿಂಗಳ ವರಮಾನ ಇರುವ 0(0%) ಬಾಲಕಾರ್ಮಿಕರನ್ನು ಇಲ್ಲಿ ಕಾಣಬಹುದು.

ಒಟ್ಟಾರೆಯಾಗಿ ಕೊಪ್ಪಳ ತಾಲ್ಲೂಕಿನ ಗಿಣಿಗೇರಾ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿನ ಒಟ್ಟು 40 (100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು ರೂ.1000 ದಿಂದ ರೂ.2000 ತಿಂಗಳ ವರಮಾನ ಇರುವ ಹಾಗೂ ರೂ.1000 ಕ್ಕಿಂತ ಕಡಿಮೆ ತಿಂಗಳ ವರಮಾನ ಇರುವ ಮಕ್ಕಳೇ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು. ಹಾಗೆಯೇ ನಂತರದ ಸ್ಥಾನಗಳಲ್ಲಿ ರೂ.2000 ದಿಂದ ರೂ.3000 ತಿಂಗಳ ವರಮಾನ ಇರುವ ಮಕ್ಕಳು ಹಾಗೂ ರೂ.3000 ದಿಂದ ರೂ.4000 ತಿಂಗಳ ವರಮಾನ ಇರುವ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಹಾಗೆಯೇ ರೂ.4000 ಕ್ಕಿಂತ ಹೆಚ್ಚು ತಿಂಗಳ ವರಮಾನ ಇರುವ ಮಕ್ಕಳ ಸಂಖ್ಯೆ ಅತ್ಯಂತ ಕಡಿಮೆ ಪ್ರಮಾಣದಲ್ಲಿರುವುದನ್ನು ಈ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

ಕೋಷ್ಟಕ–4.13ರಲ್ಲಿ ಇರುವಂತೆ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಹೇರೂರು ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದಗಳಲ್ಲಿ ಒಟ್ಟು 52(100%) ಬಾಲಕಾರ್ಮಿಕರ ಮಾದರಿ ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 22(42.3%) ಗಂಡು ಮಕ್ಕಳು ಹಾಗೂ 30(57.69%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ರೂ.1000 ಕ್ಕಿಂತ ಕಡಿಮೆ ತಿಂಗಳ ವರಮಾನ ಇರುವ ಒಟ್ಟು 9(17.3%) ಮಕ್ಕಳು ಇರುವುದನ್ನು ಕಾಣಬಹುದು. ಅವರಲ್ಲಿ 3(5.76%)ರಷ್ಟು ಗಂಡು ಮಕ್ಕಳು ಹಾಗೂ 6(11.53%) ಹೆಣ್ಣು ಮಕ್ಕಳು ರೂ.1000 ಕ್ಕಿಂತ ಕಡಿಮೆ ತಿಂಗಳ ವರಮಾನ ಇರುವ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಅದೇ ರೀತಿಯಲ್ಲಿ ಹೇರೂರು ಗ್ರಾಮದಲ್ಲಿ ಸಂದರ್ಶನ ಮಾಡಿದ 52(100%) ಬಾಲಕಾರ್ಮಿಕರಲ್ಲಿ ರೂ.1000 ದಿಂದ ರೂ.2000 ತಿಂಗಳ ವರಮಾನ ಇರುವ ಒಟ್ಟು 31(59.61%) ಬಾಲಕಾರ್ಮಿಕರನ್ನು ಸಂದರ್ಶನ ಮಾಡಲಾಯಿತು. ಇವರಲ್ಲಿ 15(28.84%) ಗಂಡು ಮಕ್ಕಳು ಹಾಗೂ 16(30.76%) ಹೆಣ್ಣು ಮಕ್ಕಳು ರೂ.1000 ದಿಂದ ರೂ.2000 ತಿಂಗಳ ವರಮಾನ ಇರುವ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ ಹೇರೂರು ಗ್ರಾಮದಲ್ಲಿ ಸಂದರ್ಶನ ಮಾಡಿದ ಬಾಲಕಾರ್ಮಿಕರಲ್ಲಿ ರೂ.2000 ದಿಂದ ರೂ.3000 ತಿಂಗಳ ವರಮಾನ ಇರುವ ಬಾಲಕಾರ್ಮಿಕರು ಒಟ್ಟು 7(13.46%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಈ ಮಕ್ಕಳಲ್ಲಿ 1(1.92%) ಗಂಡು ಮಕ್ಕಳು ಹಾಗೂ 6(11.53%) ಹೆಣ್ಣು ಮಕ್ಕಳು ರೂ.2000 ದಿಂದ ರೂ.3000 ತಿಂಗಳ ವರಮಾನ ಇರುವ ಬಾಲಕಾರ್ಮಿಕರಾಗಿದ್ದಾರೆ. ಅದೇ ರೀತಿಯಲ್ಲಿ ರೂ.3000 ದಿಂದ ರೂ.4000 ತಿಂಗಳ ವರಮಾನ ಇರುವ 3(5.76%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 2(3.84%) ಗಂಡು ಮಕ್ಕಳು ಹಾಗೂ 1(1.92%) ಹೆಣ್ಣು ಮಕ್ಕಳು

ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಹಾಗೆಯೇ ರೂ.4000ಕ್ಕಿಂತ ಹೆಚ್ಚು ತಿಂಗಳ ವರಮಾನ ಇರುವ 2(3.84%) ಬಾಲಕಾರ್ಮಿಕರನ್ನು ಇಲ್ಲಿ ಕಾಣಬಹುದು. ಇವರಲ್ಲಿ 1(1.92%) ಗಂಡು ಮಕ್ಕಳು ಹಾಗೂ 1(1.92%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಹೇರೂರು ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಬಾಲಕಾರ್ಮಿಕರ ಒಟ್ಟು 52(100%) ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು ರೂ.1000 ದಿಂದ ರೂ.2000 ತಿಂಗಳ ವರಮಾನ ಇರುವ ಹಾಗೂ ರೂ.1000 ಕ್ಕಿಂತ ಕಡಿಮೆ ತಿಂಗಳ ವರಮಾನ ಇರುವ ಮಕ್ಕಳೇ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು. ಹಾಗೆಯೇ ನಂತರದ ಸ್ಥಾನಗಳಲ್ಲಿ ರೂ.2000 ದಿಂದ ರೂ.3000 ತಿಂಗಳ ವರಮಾನ ಇರುವ ಮಕ್ಕಳು ಹಾಗೂ ರೂ.3000 ದಿಂದ ರೂ.4000 ತಿಂಗಳ ವರಮಾನ ಇರುವ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಹಾಗೆಯೇ ರೂ.4000 ಕ್ಕಿಂತ ಹೆಚ್ಚು ತಿಂಗಳ ವರಮಾನ ಇರುವ ಮಕ್ಕಳ ಸಂಖ್ಯೆ ಅತ್ಯಂತ ಕಡಿಮೆ ಪ್ರಮಾಣದಲ್ಲಿರುವುದನ್ನು ಈ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

ಕೋಷ್ಟಕ–4.13ರಲ್ಲಿ ಇರುವಂತೆ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಇನ್ನೊಂದು ಗ್ರಾಮವಾದ ಕನಕಗಿರಿ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಒಟ್ಟು 56(100%) ಬಾಲಕಾರ್ಮಿಕ ಮಾದರಿ ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 21(37.5%) ಗಂಡು ಮಕ್ಕಳು ಹಾಗೂ 35(62.5%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ. ಒಟ್ಟು ಬಾಲಕಾರ್ಮಿಕರಲ್ಲಿ ರೂ.1000 ಕ್ಕಿಂತ ಕಡಿಮೆ ತಿಂಗಳ ವರಮಾನ ಇರುವ ಒಟ್ಟು 8(14.28%) ಮಕ್ಕಳು ಇರುವುದನ್ನು ಕಾಣಬಹುದು. ಅವರಲ್ಲಿ 3(5.35%)ರಷ್ಟು ಗಂಡು ಮಕ್ಕಳು ಹಾಗೂ 5(8.92%) ಹೆಣ್ಣು ಮಕ್ಕಳು ರೂ.1000 ಕ್ಕಿಂತ ಕಡಿಮೆ ತಿಂಗಳ ವರಮಾನ ಇರುವ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಅದೇ ರೀತಿಯಲ್ಲಿ ಕನಕಗಿರಿ ಗ್ರಾಮದಲ್ಲಿ ಸಂದರ್ಶನ ಮಾಡಿದ 56(100%) ಬಾಲಕಾರ್ಮಿಕರಲ್ಲಿ ರೂ.1000 ದಿಂದ ರೂ.2000 ತಿಂಗಳ ವರಮಾನ ಇರುವ ಒಟ್ಟು 38(62.5%) ಬಾಲಕಾರ್ಮಿಕರನ್ನು ಸಂದರ್ಶನ ಮಾಡಲಾಯಿತು. ಇವರಲ್ಲಿ 17(30.35%) ಗಂಡು ಮಕ್ಕಳು ಹಾಗೂ 21(37.5%) ಹೆಣ್ಣು ಮಕ್ಕಳು ರೂ.1000 ದಿಂದ ರೂ.2000 ತಿಂಗಳ ವರಮಾನ ಇರುವ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ ಕನಕಗಿರಿ ಗ್ರಾಮದಲ್ಲಿ ಸಂದರ್ಶನ ಮಾಡಿದ ಬಾಲಕಾರ್ಮಿಕರಲ್ಲಿ ರೂ.2000 ದಿಂದ ರೂ.3000 ತಿಂಗಳ ವರಮಾನ ಇರುವ ಬಾಲಕಾರ್ಮಿಕರು ಒಟ್ಟು 8(14.28%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಈ ಮಕ್ಕಳಲ್ಲಿ 1(1.78%) ಗಂಡು ಮಕ್ಕಳು ಹಾಗೂ 7(12.5%) ಹೆಣ್ಣು ಮಕ್ಕಳು ರೂ.2000 ದಿಂದ ರೂ.3000 ತಿಂಗಳ ವರಮಾನ ಇರುವ ಬಾಲಕಾರ್ಮಿಕರಾಗಿದ್ದಾರೆ. ಅದೇ ರೀತಿಯಲ್ಲಿ ರೂ.3000 ದಿಂದ ರೂ.4000 ತಿಂಗಳ ವರಮಾನ ಇರುವ 2(3.57%) ಬಾಲಕಾರ್ಮಿಕರು ಇರುವುದನ್ನು

ಕಾಣಬಹುದು. ಇವರಲ್ಲಿ 0(0%) ಗಂಡು ಮಕ್ಕಳು ಹಾಗೂ 2(3.57%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಹಾಗೆಯೇ ರೂ.4000ಕ್ಕಿಂತ ಹೆಚ್ಚು ತಿಂಗಳ ವರಮಾನ ಇರುವ 0(0%) ಬಾಲಕಾರ್ಮಿಕರನ್ನು ಇಲ್ಲಿ ಕಾಣಬಹುದು.

ಒಟ್ಟಾರೆಯಾಗಿ ಕನಕಗಿರಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಒಟ್ಟು ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು ರೂ.1000 ದಿಂದ ರೂ.2000 ತಿಂಗಳ ವರಮಾನ ಇರುವ ಹಾಗೂ ರೂ.1000 ಕ್ಕಿಂತ ಕಡಿಮೆ ತಿಂಗಳ ವರಮಾನ ಇರುವ ಮಕ್ಕಳೇ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು. ಹಾಗೆಯೇ ನಂತರದ ಸ್ಥಾನಗಳಲ್ಲಿ ರೂ.2000 ದಿಂದ ರೂ.3000 ತಿಂಗಳ ವರಮಾನ ಇರುವ ಮಕ್ಕಳು ಹಾಗೂ ರೂ.3000 ದಿಂದ ರೂ.4000 ತಿಂಗಳ ವರಮಾನ ಇರುವ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಹಾಗೆಯೇ ರೂ.4000 ಕ್ಕಿಂತ ಹೆಚ್ಚು ತಿಂಗಳ ವರಮಾನ ಇರುವ ಮಕ್ಕಳ ಸಂಖ್ಯೆ ಅತ್ಯಂತ ಕಡಿಮೆ ಪ್ರಮಾಣದಲ್ಲಿರುವುದನ್ನು ಕಾಣಬಹುದು.

ಕೋಷ್ಟಕ–4.13ರಲ್ಲಿ ಇರುವಂತೆ ಒಟ್ಟಾರೆಯಾಗಿ ಬಾಲಕಾರ್ಮಿಕರ 450(100%) ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳೇ ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು ಹಾಗೆಯೇ 265(58.88%) ಬಾಲಕಾರ್ಮಿಕರು ರೂ.1000 ದಿಂದ ರೂ.2000 ತಿಂಗಳ ವರಮಾನ ಇರುವ ಹಾಗೂ ರೂ.1000 ಕ್ಕಿಂತ ಕಡಿಮೆ ತಿಂಗಳ ವರಮಾನ ಇರುವ ಮಕ್ಕಳೇ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು. ಹಾಗೆಯೇ ನಂತರದ ಸ್ಥಾನಗಳಲ್ಲಿ ರೂ.2000 ದಿಂದ ರೂ.3000 ತಿಂಗಳ ವರಮಾನ ಇರುವ ಮಕ್ಕಳು ಹಾಗೂ ರೂ.3000 ದಿಂದ ರೂ.4000 ತಿಂಗಳ ವರಮಾನ ಇರುವ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಹಾಗೆಯೇ ರೂ.4000 ಕ್ಕಿಂತ ಹೆಚ್ಚು ತಿಂಗಳ ವರಮಾನ ಇರುವ ಮಕ್ಕಳ ಸಂಖ್ಯೆ ಅತ್ಯಂತ ಕಡಿಮೆ ಪ್ರಮಾಣದಲ್ಲಿರುವುದನ್ನು ಈ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

### 4.3. ಬಾಲಕಾರ್ಮಿಕರು ಮತ್ತು ಶಿಕ್ಷಣ

ಇಂದು ಮಕ್ಕಳ ದುಡಿಮೆಯಿಂದ ಉಂಟಾಗುತ್ತಿರುವ ಅತ್ಯಂತ ಪ್ರಮುಖ ಸಮಸ್ಯೆಯೆಂದರೆ ಶೈಕ್ಷಣಿಕ ಸಮಸ್ಯೆಯಾಗಿದೆ. ಶೈಕ್ಷಣಿಕ ಸಮಸ್ಯೆ ಎಂದರೆ ಮಕ್ಕಳು ಶಾಲೆಯನ್ನು ಬಿಟ್ಟು ದುಡಿತಕ್ಕೆ ಹೋಗುವುದೇ ಆಗಿದೆ. ಇದರಿಂದ ಮಕ್ಕಳು ಅನಕ್ಷರಸ್ಥರಾಗಿ ಅವರ ಭವಿಷ್ಯವನ್ನು ಮಕ್ಕಳೇ ಹಾಳು ಮಾಡಿಕೊಳ್ಳುತ್ತಿದ್ದಾರೆ. ಇದಕ್ಕೆ ಪೋಷಕರ ಸಹಕಾರವೂ ಸಿಗುವುದರಿಂದ ಇಂದು ಅನೇಕ ಮಕ್ಕಳು ಶಾಲೆಯನ್ನು ಬಿಟ್ಟು ದುಡಿಯ ಬೇಕಾದ ಪರಿಸ್ಥಿತಿ ಎದುರಾಗಿದೆ.

ಈ ವಯಸ್ಸಿನಲ್ಲಿ ಓದಿ ವಿದ್ಯಾವಂತರಾಗ ಬೇಕಾದ ಮಕ್ಕಳು ಇಂದು ದುಡಿತವನ್ನು ಮಾಡಬೇಕಾದ ಪರಿಸ್ಥಿತಿ ಎದುರಾಗಿದೆ. ನಗರ ಪ್ರದೇಶ ಹಾಗೂ ಗ್ರಾಮೀಣ ಪ್ರದೇಶಗಳ ಮಕ್ಕಳ ನಡುವೆ ಹಾಗೂ ಹೆಣ್ಣು ಮತ್ತು ಗಂಡು ಮಕ್ಕಳ ನಡುವೆ ಸಾಕ್ಷರತೆಯ ಮಟ್ಟದಲ್ಲಿ ಸಾಕಷ್ಟು ಅಂತರವಿದೆ. ನಗರ ಪ್ರದೇಶದ ಮಕ್ಕಳಲ್ಲಿ 2/3 ಭಾಗ ಮಕ್ಕಳು ಸಾಕ್ಷರಸ್ಥರಿದ್ದರೆ ಗ್ರಾಮೀಣ ಪ್ರದೇಶಗಳಲ್ಲಿ ಕೇವಲ 1/3 ರಷ್ಟು ಮಾತ್ರ ಸಾಕ್ಷರಸ್ಥರನ್ನು ಕಾಣಬಹುದಾಗಿದೆ. ಅದರಲ್ಲಿಯೂ ಗ್ರಾಮೀಣ ಪ್ರದೇಶಗಳಲ್ಲಿ ಹೆಣ್ಣು ಮಕ್ಕಳ ಸಾಕ್ಷರತೆ ಇದರಲ್ಲಿ ಅರ್ಧದಷ್ಟು ಮಾತ್ರ ಎಂದು ಹೇಳಬಹುದು.

ಆದ್ದರಿಂದ 5 – 14 ವಯೋಗುಂಪಿನ ಗಂಡು ಮತ್ತು ಹೆಣ್ಣು ಮಕ್ಕಳಿಗೆ ಕಡ್ಡಾಯ ಶಿಕ್ಷಣವನ್ನು ಒದಗಿಸುವ ದಿಸೆಯಲ್ಲಿನ ಸೀಮಿತ ಯಶಸ್ಸು ಮಕ್ಕಳ ದುಡಿಮೆಗೆ ಮತ್ತೊಂದು ಕಾರಣವೆನಿಸಿದೆ ಎನ್ನಬಹುದು. ಶಾಲೆಗೆ ಒಂದು ಮಗುವನ್ನು ಸೇರಿಸುವುದು ಎಂದರೆ ಒಂದು ಮಗುವನ್ನು ಶೋಷಣೆಯಿಂದ ಅರ್ಥಾತ್ ಮಕ್ಕಳ ದುಡಿಮೆಯಿಂದ ರಕ್ಷಿಸಿದಂತೆಯೇ ಸರಿ. ಆದಾಗ್ಯೂ ಇಂದಿನ ಶಿಕ್ಷಣ ವ್ಯವಸ್ಥೆ ಮತ್ತು ಸಾಮಾಜಿಕ ಪರಿಸ್ಥಿತಿ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಬಡ ತಂದೆ ತಾಯಿರನ್ನು ಪ್ರಚೋದಿಸುವಲ್ಲಿ ವಿಫಲವಾಗಿದೆ.

ಉದ್ಯೋಗಗಳನ್ನು ಹುಡುಕಿಕೊಂಡು ನಗರ ಪ್ರದೇಶಗಳಿಗೆ ವಲಸೆ ಬರುವ ಅನೇಕ ಕುಟುಂಬಗಳು ನಗರಗಳಲ್ಲಿನ ಅನಿಶ್ಚಯ ಹಾಗೂ ಅಲ್ಪ ಆದಾಯದ ಉದ್ಯೋಗ ಅವಕಾಶಗಳಿಂದ ಬೇಸತ್ತು ಮಕ್ಕಳನ್ನು ದುಡಿಮೆಗೆ ದೂಡುತ್ತಾರೆ. ಇದರಿಂದಾಗಿ ಅವರ ಕುಟುಂಬದ ಆರ್ಥಿಕ ಪರಿಸ್ಥಿತಿ ಸ್ವಲ್ಪ ಮಟ್ಟಿಗಾದರೂ ಸುಧಾರಿಸೀತು ಎಂಬ ಆಸೆ ಪೋಷಕರದ್ದು.

ತಾತ್ಪುರ್ತಿಕ ದುಡಿಮೆಯಿಂದ ದುಡ್ಡಿನ ಮೋಹಕ್ಕೆ ಒಳಗಾಗಿ ಚಿಕ್ಕ ವಯಸ್ಸಿನಲ್ಲಿ ದುಡಿಮೆಗೆ ಒಳಗಾಗುವುದಕ್ಕೆ ಅಜ್ಞಾನವೇ ಕಾರಣವಾಗಿದೆ. ಕೆಲವೊಮ್ಮೆ ಮಕ್ಕಳ ದುಡಿಮೆಗೆ ಅವರೇ ಕಾರಣರು, ಸ್ವತಂತ್ರವಾಗಿ ದುಡಿಯಬೇಕು, ನಾವು ದುಡಿಯುವವನಾಗಬೇಕೆಂಬ ಅಕಾಲಿಕ ಬಯಕೆಯಿಂದ ಶೋಷಣೆಗೆ ಒಳಗಾಗುತ್ತಿದ್ದಾರೆ. ಅಜ್ಞಾನಿಗಳಾದ ತಂದೆ ತಾಯಿಗಳು ಹಣಕೋಸ್ಕರ ಮಕ್ಕಳನ್ನು ದುಡಿಮೆಗೆ ಹಚ್ಚುವರು. ಶಾಲೆಗೆ ಕಳುಹಿಸುವುದು ನಷ್ಟವೆಂದು ಭಾವಿಸಿ ಕೆಲಸಕ್ಕೆ ಹಚ್ಚಿ ದುಡಿದು ತಂದ ಹಣದಿಂದ ಸಂಸಾರ ನಿಭಾಯಿಸಲಿಕ್ಕೆ ಸಹಾಯ ಎಂದು ಪರಿಗಣಿಸುವರು. ಅನಕ್ಷರತೆ ಮತ್ತು ಅಜ್ಞಾನವೇ ಮಕ್ಕಳನ್ನು ದುಡಿಮೆಗೆ ತಳ್ಳಲು ಪ್ರಮುಖ ಕಾರಣವಾಗಿದೆ.

ಅಧ್ಯಯನ ಕೈಗೊಂಡ ಬಳ್ಳಾರಿ ಜಿಲ್ಲೆ ಹಾಗೂ ಕೊಪ್ಪಳ ಜಿಲ್ಲೆಯ ಸುತ್ತಮುತ್ತಲಿನ ಗ್ರಾಮೀಣ ಪ್ರದೇಶಗಳಲ್ಲಿ ನಾವು ಅನೇಕ ಅನಕ್ಷರಸ್ಥ ಬಡ ಕುಟುಂಬಗಳನ್ನು ಕಾಣಬಹುದು. ಶಾಲೆಗೆ ಮಕ್ಕಳನ್ನು ಕಳುಹಿಸಿದರೆ ಅದರಿಂದ ಯಾವುದೇ ಪ್ರಯೋಜನವಿಲ್ಲ, ವಿದ್ಯಾವಂತನಾಗಿ ಮುಂದೊಂದು ದಿನ ನಿರುದ್ಯೋಗಿ ಆಗುವುದಕ್ಕಿಂತ ಈಗಿನಿಂದಲೇ ಅವನು ತನ್ನ ಕಾಲಮೇಲೆ ತಾನು ನಿಂತು

ಕೊಳ್ಳುವವನಾಗಲಿ ಎಂಬ ಪೋಷಕರ ಅಜ್ಞಾನವೂ ಸಹ ಇಂದು ಬಾಲಕಾರ್ಮಿಕ ಪದ್ಧತಿಗೆ ಕಾರಣವಾಗಿದೆ ಎಂದು ಹೇಳಬಹುದು. ಹಾಗೆಯೇ ಬಳ್ಳಾರಿ ಜಿಲ್ಲೆ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಸಂದರ್ಶನ ಮಾಡಿದ ಒಟ್ಟು 450 ಬಾಲಕಾರ್ಮಿಕರ ಶೈಕ್ಷಣಿಕ (ವಿದ್ಯಾಭ್ಯಾಸ) ಮಾಹಿತಿಯನ್ನು ಈ ಕೆಳಕಂಡ ಕೋಷ್ಟಕಗಳ ಮೂಲಕ ವಿವರಣೆ ಮಾಡಲಾಗಿದೆ.

**ಕೋಷ್ಟಕ–4.14**

**ಜಿಲ್ಲಾವಾರು ಬಾಲಕಾರ್ಮಿಕರ ವಿದ್ಯಾಭ್ಯಾಸ ಮಾದರಿ ಆಯ್ಕೆ ವಿವರ.**

| ಕ್ರಸಂ. | ಜಿಲ್ಲೆ ಹೆಸರು | ಒಟ್ಟು ಮಾದರಿ ಆಯ್ಕೆ | | | ಅನಕ್ಷರಸ್ಥರು | | | 1–4ನೇ ತರಗತಿ | | | 5–7ನೇ ತರಗತಿ | | | 8ನೇ ತರಗತಿ ಗಿಂತ ಹೆಚ್ಚು | | |
|---|---|---|---|---|---|---|---|---|---|---|---|---|---|---|---|---|
| | | M | F | T | M | F | T | M | F | T | M | F | T | M | F | T |
| 1. | ಬಳ್ಳಾರಿ | 128 | 122 | 250 | 28 | 33 | 61 | 42 | 45 | 87 | 34 | 28 | 62 | 24 | 16 | 40 |
| 2. | ಕೊಪ್ಪಳ | 75 | 125 | 200 | 10 | 19 | 29 | 33 | 55 | 88 | 20 | 41 | 61 | 12 | 10 | 22 |
| | ಒಟ್ಟು | 203 | 247 | 450 | 38 | 52 | 90 | 75 | 100 | 175 | 64 | 69 | 123 | 36 | 26 | 62 |

*ಮೂಲ: ಪ್ರಾಥಮಿಕ ಅಂಕಿಅಂಶಗಳು*

ಕೋಷ್ಟಕ–4.14ರಲ್ಲಿರವಂತೆ ಜಿಲ್ಲಾವಾರು ಬಾಲಕಾರ್ಮಿಕರ ವಿದ್ಯಾಭ್ಯಾಸ ಮಾದರಿ ಆಯ್ಕೆ ವಿವರಗಳನ್ನು ಅವಲೋಕಿಸಿದಾಗ ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು 250(100%) ಬಾಲಕಾರ್ಮಿಕರನ್ನು ಸಂದರ್ಶನ ಮಾಡಿ ಅವರ ಶಿಕ್ಷಣದ ಬಗ್ಗೆ ಮಾಹಿತಿಯನ್ನು ಕೇಳಲಾಯಿತು. ಒಟ್ಟು 250(100%) ಬಾಲಕಾರ್ಮಿಕರಲ್ಲಿ 128(51.2%) ಗಂಡು ಮಕ್ಕಳು ಹಾಗೂ 122(48.8%) ಹೆಣ್ಣು ಮಕ್ಕಳನ್ನು ಸಂದರ್ಶನ ಮಾಡಿದಾಗ 61(24.4%) ಮಕ್ಕಳು ಅನಕ್ಷರಸ್ಥರಾಗಿರುವುದನ್ನು ಕಾಣಬಹುದು. ಅವರಲ್ಲಿ 28(11.2%)ರಷ್ಟು ಗಂಡು ಮಕ್ಕಳು ಹಾಗೂ 33(13.2%)ರಷ್ಟು ಹೆಣ್ಣು ಮಕ್ಕಳು ಅನಕ್ಷರಸ್ಥರಾಗಿದ್ದಾರೆ ಎಂದು ಹೇಳಬಹುದು. ಅದೇ ರೀತಿಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ 250(100%) ಬಾಲಕಾರ್ಮಿಕರಲ್ಲಿ 1–4ನೇ ತರಗತಿವರೆಗೂ ಶಿಕ್ಷಣವನ್ನು ಪಡೆದ ಒಟ್ಟು 87(34.8%) ಬಾಲಕಾರ್ಮಿಕರನ್ನು ಸಂದರ್ಶನ ಮಾಡಲಾಯಿತು. ಅವರಲ್ಲಿ 42(16.8%) ಗಂಡು ಮಕ್ಕಳು ಹಾಗೂ 45(18.0%) ಹೆಣ್ಣು ಮಕ್ಕಳು 1–4ನೇ ತರಗತಿವರೆಗೂ ಶಿಕ್ಷಣವನ್ನು ಪಡೆದ ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ ಬಳ್ಳಾರಿ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಬಾಲಕಾರ್ಮಿಕರಲ್ಲಿ 5–7ನೇ ತರಗತಿಯವರೆಗೂ ಶಿಕ್ಷಣ ಪಡೆದ ಒಟ್ಟು 62(24.8%) ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಈ ಒಟ್ಟು ಮಕ್ಕಳಲ್ಲಿ 34(13.6%) ಗಂಡು ಮಕ್ಕಳು ಹಾಗೂ 28(11.2%) ಹೆಣ್ಣು ಮಕ್ಕಳು 5–7ನೇ ತರಗತಿಯವರೆಗೂ ಶಿಕ್ಷಣ ಪಡೆದ ಬಾಲಕಾರ್ಮಿಕರಾಗಿದ್ದಾರೆ. ಅದೇ ರೀತಿಯಲ್ಲಿ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಬಾಲಕಾರ್ಮಿಕರು 40(16.0%) ರಷ್ಟು ಇರುವುದನ್ನು ಕಾಣಬಹುದು. ಇವರಲ್ಲಿ 24(9.6%) ಗಂಡು

ಮಕ್ಕಳು ಹಾಗೂ 16(6.4%) ಹೆಣ್ಣು ಮಕ್ಕಳು 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ವಿಶ್ಲೇಷಿಸಿದಾಗ ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು 1–4ನೇ ತರಗತಿವರೆಗೂ ಶಿಕ್ಷಣವನ್ನು ಪಡೆದ ಮಕ್ಕಳೇ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು. ಹಾಗೆಯೇ ನಂತರದ ಸ್ಥಾನಗಳಲ್ಲಿ ಅನಕ್ಷರಸ್ಥ ಮಕ್ಕಳು, 5–7ನೇ ತರಗತಿಯವರೆಗೂ ಶಿಕ್ಷಣ ಪಡೆದ ಮಕ್ಕಳು ಹಾಗೂ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಮಕ್ಕಳು ಸಹ ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಈ ಅಂಶಗಳನ್ನು ನೋಡಿದಾಗ ಮಕ್ಕಳು ತಮ್ಮ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿರುವುದನ್ನು ಕಾಣಬಹುದು.

ಅದೇ ರೀತಿಯಲ್ಲಿ ಕೋಷ್ಟಕ–4.14ರಲ್ಲಿ ಇರುವಂತೆ ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ಬಾಲಕಾರ್ಮಿಕರಲ್ಲಿ 200(100%) ಬಾಲಕಾರ್ಮಿಕರನ್ನು ಮಾದರಿ ಆಯ್ಕೆ ಮಾಡಿ ಸಂದರ್ಶನ ಮಾಡಿದಾಗ ಅವರಲ್ಲಿ 75(37.5%) ಗಂಡುಮಕ್ಕಳು ಹಾಗೂ 125(62.5%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಅವರಲ್ಲಿ ಅನಕ್ಷರಸ್ಥ ಒಟ್ಟು 29(14.5%) ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣುತ್ತೇವೆ. ಇವರಲ್ಲಿ 10(5.0%) ಗಂಡು ಮಕ್ಕಳು ಹಾಗೂ 19(9.5%) ಹೆಣ್ಣು ಮಕ್ಕಳು ಅನಕ್ಷರಸ್ಥರಾಗಿರುವುದನ್ನು ಕಾಣಬಹುದು. ಅದೇ ರೀತಿಯಾಗಿ ಒಟ್ಟು 200(100%) ಬಾಲಕಾರ್ಮಿಕರಲ್ಲಿ 1–4ನೇ ತರಗತಿವರೆಗೂ ಶಿಕ್ಷಣ ಪಡೆದ ಒಟ್ಟು 88(44.0%) ಮಕ್ಕಳು ಕೊಪ್ಪಳ ಜಿಲ್ಲೆಯಲ್ಲಿ ಕಂಡುಬಂದಿದ್ದಾರೆ. ಇವರಲ್ಲಿ 33(16.5%) ಗಂಡು ಮಕ್ಕಳು ಹಾಗೂ 55(27.5%) ಹೆಣ್ಣು ಮಕ್ಕಳು 1–4ನೇ ತರಗತಿವರೆಗೂ ಶಿಕ್ಷಣ ಪಡೆದ ಮಕ್ಕಳಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ 5–7ನೇ ತರಗತಿವರೆಗೂ ಶಿಕ್ಷಣ ಪಡೆದ ಒಟ್ಟು 61(30.5%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಈ ಬಾಲಕಾರ್ಮಿಕರಲ್ಲಿ 20(10.0%) ಗಂಡುಮಕ್ಕಳು ಹಾಗೂ 41(20.5%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಹಾಗೆಯೇ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಒಟ್ಟು 22(11.0%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 12(6.0%) ಗಂಡುಮಕ್ಕಳು ಹಾಗೂ 10(5.0%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಕೊಪ್ಪಳ ಜಿಲ್ಲೆಯಲ್ಲಿ ಮಾದರಿ ಆಯ್ಕೆ ಮಾಡಿಕೊಂಡ 200(100%) ಬಾಲಕಾರ್ಮಿಕರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳು 125(62.5%) ಇರುವುದನ್ನು ಕಾಣುತ್ತೇವೆ. ಹಾಗೆಯೇ 1–4ನೇ ತರಗತಿವರೆಗೂ ಶಿಕ್ಷಣ ಪಡೆದ ಹಾಗೂ 5–7ನೇ ತರಗತಿವರೆಗೂ ಶಿಕ್ಷಣ ಪಡೆದ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ನಂತರದ ಸ್ಥಾನಗಳಲ್ಲಿ ಅನಕ್ಷರಸ್ಥ

ಹಾಗೂ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಜಿಲ್ಲಾವಾರು ಮಾದರಿ ಆಯ್ಕೆಯನ್ನು ವಿಶ್ಲೇಷಣೆ ಮಾಡಿದಾಗ ಒಟ್ಟು 450(100%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಅವರಲ್ಲಿ 203(45.11%) ಗಂಡುಮಕ್ಕಳು ಹಾಗೂ 247(54.88%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣುತ್ತೇವೆ. ಹಾಗೆಯೇ ಅತೀ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಹಾಗೂ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಬಾಲಕಾರ್ಮಿಕರೇ ಅತೀ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ನಂತರದ ಸ್ಥಾನದಲ್ಲಿ ಅನಕ್ಷರಸ್ಥ ಹಾಗೂ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಬಾಲಕಾರ್ಮಿಕರು ಇರುವುದನ್ನು ಈ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

**ಕೋಷ್ಟಕ–4.15**

ತಾಲ್ಲೂಕುವಾರು ಬಾಲಕಾರ್ಮಿಕರ ವಿದ್ಯಾಭ್ಯಾಸ ಮಾದರಿ ಆಯ್ಕೆ ವಿವರ.

| ಕ್ರಸಂ. | ತಾಲ್ಲೂಕು ಹೆಸರು | ಒಟ್ಟು ಮಾದರಿ ಆಯ್ಕೆ | | | ಅನಕ್ಷರಸ್ಥರು | | | 1–4ನೇ ತರಗತಿ | | | 5–7ನೇ ತರಗತಿ | | | 8ನೇ ತರಗತಿ ಗಿಂತ ಹೆಚ್ಚು | | |
|---|---|---|---|---|---|---|---|---|---|---|---|---|---|---|---|---|
| | | M | F | T | M | F | T | M | F | T | M | F | T | M | F | T |
| 1. | ಹಗರಿಬೊಮ್ಮನಹಳ್ಳಿ | 65 | 61 | 126 | 15 | 19 | 34 | 22 | 24 | 46 | 20 | 12 | 32 | 8 | 6 | 14 |
| 2. | ಹೊಸಪೇಟೆ | 63 | 61 | 124 | 13 | 14 | 27 | 20 | 21 | 41 | 14 | 16 | 30 | 16 | 10 | 26 |
| 3. | ಕೊಪ್ಪಳ | 32 | 60 | 92 | 4 | 8 | 12 | 14 | 30 | 44 | 10 | 20 | 30 | 4 | 2 | 6 |
| 4. | ಗಂಗಾವತಿ | 43 | 65 | 108 | 6 | 11 | 17 | 19 | 25 | 44 | 10 | 21 | 31 | 8 | 8 | 16 |
| | ಒಟ್ಟು | 203 | 247 | 450 | 38 | 52 | 90 | 75 | 100 | 175 | 54 | 69 | 123 | 36 | 26 | 62 |

*ಮೂಲ:ಪ್ರಾಥಮಿಕ ಅಂಕಿಅಂಶಗಳು*

ಕೋಷ್ಟಕ–4.15ರಲ್ಲಿ ಇರುವಂತೆ ತಾಲ್ಲೂಕುವಾರು ಬಾಲಕಾರ್ಮಿಕರ ವಿದ್ಯಾಭ್ಯಾಸ ಮಾದರಿ ಆಯ್ಕೆ ವಿವರಗಳನ್ನು ಅವಲೋಕಿಸಿದಾಗ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ಹಾಗೂ ಹೊಸಪೇಟೆ ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯ ಒಟ್ಟು 250(100%) ಮಾದರಿ ಆಯ್ಕೆಯಲ್ಲಿ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ 126 ಬಾಲಕಾರ್ಮಿಕರನ್ನು ಹಾಗೂ ಹೊಸಪೇಟೆ ತಾಲ್ಲೂಕಿನ 124 ಬಾಲಕಾರ್ಮಿಕರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಒಟ್ಟು 126(100%) ಮಾದರಿ ಆಯ್ಕೆಯಲ್ಲಿ 65(51.58%) ಗಂಡು ಮಕ್ಕಳು ಹಾಗೂ 61(48.42%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಒಟ್ಟು ಮಾದರಿ ಆಯ್ಕೆಯಲ್ಲಿ ಅನಕ್ಷರಸ್ಥ ಒಟ್ಟು 34(26.98%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 15(11.9%) ಗಂಡು ಮಕ್ಕಳು ಹಾಗೂ 19(15.07%) ಹೆಣ್ಣು ಮಕ್ಕಳು ಅನಕ್ಷರಸ್ಥ

ಬಾಲಕಾರ್ಮಿಕರಾಗಿದ್ದಾರೆ ಎಂದು ಹೇಳಬಹುದು. ಹಾಗೆಯೇ 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಒಟ್ಟು 46(36.50%) ಬಾಲಕಾರ್ಮಿಕರು ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿದ್ದಾರೆ. ಇವರಲ್ಲಿ 22(17.46%) ಗಂಡು ಮಕ್ಕಳು ಹಾಗೂ 24(19.04%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಒಟ್ಟು 32(25.39%) ಮಕ್ಕಳು ಬಾಲಕಾರ್ಮಿಕರಾಗಿದ್ದಾರೆ. ಇವರಲ್ಲಿ 20(15.87%) ಗಂಡು ಮಕ್ಕಳು ಹಾಗೂ 12(9.52%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಅದೇ ರೀತಿಯಾಗಿ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಒಟ್ಟು 14(11.11%) ಬಾಲ ಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 8(6.34%) ಗಂಡು ಮಕ್ಕಳು ಹಾಗೂ 6(4.76%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಒಟ್ಟು 126 ಬಾಲಕಾರ್ಮಿಕರನ್ನು ಮಾದರಿ ಆಯ್ಕೆ ಮಾಡಿಕೊಂಡಿದ್ದೇನೆ. ಇವರಲ್ಲಿ 65(51.58%) ಗಂಡು ಮಕ್ಕಳು ಹಾಗೂ 61(48.42%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಈ ಅಂಕಿ ಅಂಶಗಳಿಂದ ಬಾಲಕಾರ್ಮಿಕರು ಗಂಡು ಹಾಗೂ ಹೆಣ್ಣು ಮಕ್ಕಳು ಸಮಾನವಾಗಿರುವುದನ್ನು ಕಾಣುತ್ತೇವೆ. ಹಾಗೆಯೇ ಹೆಚ್ಚಿನ ಬಾಲಕಾರ್ಮಿಕರು 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಹಾಗೂ ಅನಕ್ಷರಸ್ಥ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ನಂತರದ ಸ್ಥಾನದಲ್ಲಿ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಬಾಲಕಾರ್ಮಿಕರಿದ್ದಾರೆ. ಹಾಗೂ ನಂತರದ ಸ್ಥಾನದಲ್ಲಿ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು.

ಹಾಗೆಯೇ ಕೋಷ್ಟಕ–4.15ರಲ್ಲಿ ಇರುವಂತೆ ತಾಲ್ಲೂಕುವಾರು ಬಾಲಕಾರ್ಮಿಕರ ವಿದ್ಯಾಭ್ಯಾಸ ಮಾದರಿ ಆಯ್ಕೆ ವಿವರಗಳನ್ನು ಅವಲೋಕಿಸಿದಾಗ ಹೊಸಪೇಟೆ ತಾಲ್ಲೂಕಿನ ಒಟ್ಟು 124(100%) ಬಾಲಕಾರ್ಮಿಕರನ್ನು ಸಮೀಕ್ಷೆ ಮಾಡಲಾಯಿತು. ಇವರಲ್ಲಿ 63(50.81%) ಗಂಡು ಮಕ್ಕಳು ಹಾಗೂ 61(49.19%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಹೊಸಪೇಟೆ ತಾಲ್ಲೂಕಿನ ಒಟ್ಟು 124(100%) ಮಾದರಿ ಆಯ್ಕೆಯಲ್ಲಿ 27(21.77%) ಮಕ್ಕಳು ಅನಕ್ಷರಸ್ಥರಾಗಿರುವುದನ್ನು ಕಾಣಬಹುದು. ಇವರಲ್ಲಿ 13(10.48%) ಗಂಡು ಮಕ್ಕಳು ಹಾಗೂ 14(11.29%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಹೊಸಪೇಟೆ ತಾಲ್ಲೂಕಿನ ಒಟ್ಟು 124(100%) ಬಾಲಕಾರ್ಮಿಕರಲ್ಲಿ 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಒಟ್ಟು 41(33.06%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 20(16.12%) ಗಂಡು ಮಕ್ಕಳು ಹಾಗೂ 21(16.93%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಹಾಗೆಯೇ ಈ ತಾಲ್ಲೂಕಿನಲ್ಲಿ ಮಾದರಿ ಆಯ್ಕೆ ಮಾಡಿಕೊಂಡ ಒಟ್ಟು

124(100%) ಬಾಲಕಾರ್ಮಿಕರಲ್ಲಿ 30(24.19%) ಮಕ್ಕಳು 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಇವರಲ್ಲಿ 14(11.29%) ಗಂಡು ಮಕ್ಕಳು ಹಾಗೂ 16(12.9%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಒಟ್ಟು 26(20.96%) ಬಾಲಕಾರ್ಮಿಕರು ಹೊಸಪೇಟೆ ತಾಲ್ಲೂಕಿನಲ್ಲಿ ಕಂಡುಬಂದಿದ್ದಾರೆ. ಇವರಲ್ಲಿ 16(12.9%) ಗಂಡು ಮಕ್ಕಳು ಹಾಗೂ 10(8.06%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಹೊಸಪೇಟೆ ತಾಲ್ಲೂಕಿನಲ್ಲಿ ಆಯ್ಕೆ ಮಾಡಿಕೊಂಡ ಮಾದರಿ ಆಯ್ಕೆಯಲ್ಲಿ 124(100%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 63(50.81%) ಗಂಡು ಮಕ್ಕಳು ಹಾಗೂ 61(49.19%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಈ ಎಲ್ಲಾ ಅಂಕಿಅಂಶಗಳನ್ನು ವಿಶ್ಲೇಷಿಸಿದಾಗ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಹಾಗೂ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಬಾಲಕಾರ್ಮಿಕರು ಅತೀ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ನಂತರದ ಸ್ಥಾನದಲ್ಲಿ ಅನಕ್ಷರಸ್ಥ ಹಾಗೂ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಕೋಷ್ಟಕದ ಅಂಕಿ ಅಂಶಗಳನ್ನು ಗಮನಿಸಿದಾಗ ಗಂಡು ಹಾಗೂ ಹೆಣ್ಣು ಮಕ್ಕಳು ಸಮಾನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಕೋಷ್ಟಕ–4.15ರಲ್ಲಿ ಇರುವಂತೆ ತಾಲ್ಲೂಕುವಾರು ಬಾಲಕಾರ್ಮಿಕರ ವಿದ್ಯಾಭ್ಯಾಸ ಮಾದರಿ ಆಯ್ಕೆ ವಿವರಗಳನ್ನು ಅವಲೋಕಿಸಿದಾಗ ಕೊಪ್ಪಳ ತಾಲ್ಲೂಕಿನಲ್ಲಿ ಒಟ್ಟು 92(100%) ಬಾಲಕಾರ್ಮಿಕರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 32(34.78%) ಗಂಡು ಮಕ್ಕಳು ಹಾಗೂ 60(65.21%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ತಾಲ್ಲೂಕುವಾರು ಬಾಲಕಾರ್ಮಿಕರನ್ನು ವಿದ್ಯಾಭ್ಯಾಸ ಮಾದರಿ ಆಯ್ಕೆಯಲ್ಲಿ ನೋಡಿದಾಗ ಒಟ್ಟು 92(100%) ಬಾಲಕಾರ್ಮಿಕರರಲ್ಲಿ ಅನಕ್ಷರಸ್ಥ 12(9.67%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 4(3.22%) ಗಂಡು ಮಕ್ಕಳು ಹಾಗೂ 8(6.45%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಕೊಪ್ಪಳ ತಾಲ್ಲೂಕುವಾರು ಮಾದರಿ ಆಯ್ಕೆಯ ಒಟ್ಟು 92(100%) ಬಾಲಕಾರ್ಮಿಕರಲ್ಲಿ 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಒಟ್ಟು 44(35.48%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 14(11.29%) ಗಂಡು ಮಕ್ಕಳು ಹಾಗೂ 30(24.19%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಹಾಗೆಯೇ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಒಟ್ಟು 30(24.19%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 10(8.06%) ಗಂಡು ಮಕ್ಕಳು ಹಾಗೂ 20(16.12%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣುತ್ತೇವೆ. ಅದೇ

ರೀತಿಯಲ್ಲಿ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಒಟ್ಟು 6(4.83%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 4(3.22%) ಗಂಡು ಮಕ್ಕಳು ಹಾಗೂ 2(1.61%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಕೊಪ್ಪಳ ತಾಲ್ಲೂಕುವಾರು ಮಾದರಿ ಆಯ್ಕೆಯಲ್ಲಿ ಒಟ್ಟು 92(100%) ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಇವರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳು 60(65.21%) ಬಾಲಕಾರ್ಮಿಕರು ಇದ್ದಾರೆ. ಹಾಗೆಯೇ 32(34.75%) ಗಂಡು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಒಟ್ಟು 92(100%) ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಹಾಗೂ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ಹಾಗೆಯೇ ನಂತರದ ಸ್ಥಾನದಲ್ಲಿ ಅನಕ್ಷರಸ್ಥ ಬಾಲಕಾರ್ಮಿಕರು ಹಾಗೂ ಕೊನೆ ಸ್ಥಾನದಲ್ಲಿ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಬಾಲಕಾರ್ಮಿಕರು ಕೊಪ್ಪಳ ತಾಲ್ಲೂಕಿನಲ್ಲಿ ಇರುವುದನ್ನು ಕಾಣಬಹುದು.

ಕೋಷ್ಟಕ–4.15ರಲ್ಲಿ ಇರುವಂತೆ ಗಂಗಾವತಿ ತಾಲ್ಲೂಕುವಾರು ಬಾಲಕಾರ್ಮಿಕರ ವಿದ್ಯಾಭ್ಯಾಸ ಮಾದರಿ ಆಯ್ಕೆ ವಿವರಗಳನ್ನು ವಿಶ್ಲೇಷಿಸಿದಾಗ ಗಂಗಾವತಿ ತಾಲ್ಲೂಕಿನಲ್ಲಿ ಒಟ್ಟು 108(100%) ಬಾಲಕಾರ್ಮಿಕರ ಮಾದರಿ ಆಯ್ಕೆಯನ್ನು ಮಾಡಲಾಗಿದೆ. ಇವರಲ್ಲಿ 43(39.81%) ಗಂಡು ಮಕ್ಕಳು ಹಾಗೂ 65(60.19%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಗಂಗಾವತಿ ತಾಲ್ಲೂಕಿನ ಒಟ್ಟು 108(100%) ಬಾಲಕಾರ್ಮಿಕರಲ್ಲಿ ಅನಕ್ಷರಸ್ಥ ಒಟ್ಟು 17(13.7%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 6(4.83%) ಗಂಡು ಮಕ್ಕಳು ಹಾಗೂ 11(8.87%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಹಾಗೆಯೇ 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಒಟ್ಟು 44(40.48%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 19(15.32%) ಗಂಡು ಮಕ್ಕಳು ಹಾಗೂ 25(20.16%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಒಟ್ಟು 31(25.0%) ಬಾಲಕಾರ್ಮಿಕರನ್ನು ಕಾಣುತ್ತೇವೆ. ಇವರಲ್ಲಿ 10(8.06%) ಗಂಡು ಮಕ್ಕಳು ಹಾಗೂ 21(16.93%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ಇರುವುದನ್ನು ಕಾಣಬಹುದು. ಹಾಗೆಯೇ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಒಟ್ಟು 16(12.9%) ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಇವರಲ್ಲಿ 8(6.45%) ಗಂಡು ಮಕ್ಕಳು ಹಾಗೂ 8(6.45%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು.

ಗಂಗಾವತಿ ತಾಲ್ಲೂಕಿನ ಒಟ್ಟಾರೆ ಬಾಲಕಾರ್ಮಿಕರ ಮಾದರಿ ಆಯ್ಕೆಯ ಅಂಕಿ ಅಂಶಗಳನ್ನು ವಿಶ್ಲೇಷಿಸಿದಾಗ ಒಟ್ಟು 108(100%) ಬಾಲಕಾರ್ಮಿಕರಿದ್ದು ಅವರಲ್ಲಿ 43(39.81%) ಗಂಡು ಮಕ್ಕಳು ಹಾಗೂ 65(60.19%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಗಂಗಾವತಿ ತಾಲ್ಲೂಕಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿಕೊಂಡಿರುವುದನ್ನು ಕಾಣಬಹುದು. ಹಾಗೂ 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಹಾಗೂ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಹೆಚ್ಚಿನ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿಕೊಂಡಿರುವುದನ್ನು ಕಾಣಬಹುದು. ನಂತರದ ಸ್ಥಾನಗಳಲ್ಲಿ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಮಕ್ಕಳು ಹಾಗೂ ಅನಕ್ಷರಸ್ಥ ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಕೋಷ್ಟಕ–4.15ರಲ್ಲಿ ಇರುವಂತೆ ತಾಲ್ಲೂಕುವಾರು ಬಾಲಕಾರ್ಮಿಕರ ವಿದ್ಯಾಭ್ಯಾಸ ಮಾದರಿ ಆಯ್ಕೆಯ ವಿವರಗಳನ್ನು ಅವಲೋಕಿಸಿದಾಗ ಒಟ್ಟು 450(100%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 203(45.11%) ಗಂಡು ಮಕ್ಕಳು ಹಾಗೂ 247(54.88%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಮಕ್ಕಳು ನಂತರದ ಸ್ಥಾನದಲ್ಲಿ ಹಾಗೂ ಅನಕ್ಷರಸ್ಥ ಮಕ್ಕಳು ಹಾಗೆಯೇ ಕೊನೆಯ ಸ್ಥಾನದಲ್ಲಿ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ.

**ಕೋಷ್ಟಕ–4.16**

ಗ್ರಾಮವಾರು ಬಾಲಕಾರ್ಮಿಕರ ವಿದ್ಯಾಭ್ಯಾಸ ಮಾದರಿ ಆಯ್ಕೆ ವಿವರ.

| ಕ್ರಸಂ. | ಗ್ರಾಮಗಳ ಹೆಸರು | ಒಟ್ಟು ಮಾದರಿ ಆಯ್ಕೆ | | | ಅನಕ್ಷರಸ್ಥರು | | | 1–4ನೇ ತರಗತಿ | | | 5–7ನೇ ತರಗತಿ | | | 8ನೇ ತರಗತಿಗಿಂತ ಹೆಚ್ಚು | | |
|---|---|---|---|---|---|---|---|---|---|---|---|---|---|---|---|---|
| | | M | F | T | M | F | T | M | F | T | M | F | T | M | F | T |
| 1. | ಬನ್ನಿಕಲ್ಲು | 32 | 33 | 65 | 7 | 9 | 16 | 10 | 14 | 24 | 11 | 7 | 18 | 4 | 3 | 7 |
| 2. | ಕಡಲಬಾಳು | 33 | 28 | 61 | 6 | 9 | 15 | 11 | 12 | 23 | 12 | 5 | 17 | 4 | 2 | 6 |
| 3. | ಮರಿಯಮ್ಮನಹಳ್ಳಿ | 30 | 26 | 56 | 7 | 6 | 13 | 8 | 9 | 17 | 9 | 6 | 15 | 6 | 5 | 11 |
| 4. | ಕಮಲಾಪುರ | 33 | 35 | 68 | 8 | 9 | 17 | 12 | 10 | 22 | 6 | 10 | 16 | 7 | 6 | 13 |
| 5. | ಹುಲಗಿ | 19 | 33 | 52 | 3 | 5 | 8 | 8 | 15 | 23 | 6 | 12 | 18 | 2 | 1 | 3 |
| 6. | ಗಿಣಿಗೇರಾ | 13 | 27 | 40 | 2 | 3 | 5 | 6 | 12 | 18 | 4 | 11 | 15 | 1 | 1 | 2 |
| 7. | ಹೇರೂರು | 22 | 30 | 52 | 3 | 6 | 9 | 9 | 14 | 23 | 5 | 7 | 12 | 5 | 4 | 9 |
| 8. | ಕನಕಗಿರಿ | 21 | 35 | 56 | 2 | 5 | 7 | 11 | 14 | 25 | 1 | 11 | 12 | 7 | 4 | 11 |
| | ಒಟ್ಟು | 203 | 247 | 450 | 38 | 52 | 90 | 75 | 100 | 175 | 54 | 69 | 123 | 36 | 26 | 62 |

*ಮೂಲ: ಪ್ರಾಥಮಿಕ ಅಂಕಿಅಂಶಗಳು*

ಕೋಷ್ಟಕ-4.16ರಲ್ಲಿ ಇರುವಂತೆ ಗ್ರಾಮವಾರು ಬಾಲಕಾರ್ಮಿಕರ ವಿದ್ಯಾಭ್ಯಾಸ ಮಾದರಿ ಆಯ್ಕೆ ವಿವರಗಳನ್ನು ಅವಲೋಕಿಸಿದಾಗ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಬನ್ನಿಕಲ್ಲು ಗ್ರಾಮದ ಸುತ್ತಮುತ್ತಲಿನಲ್ಲಿ ಮಾದರಿ ಆಯ್ಕೆ ಮಾಡಿಕೊಂಡ ಒಟ್ಟು 65 ಬಾಲಕಾರ್ಮಿಕರ ವಿವರಗಳನ್ನು ನೋಡಿದಾಗ ಇವರಲ್ಲಿ 32(49.23%) ಗಂಡು ಮಕ್ಕಳು ಹಾಗೂ 33(50.76%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಒಟ್ಟು ಬನ್ನಿಕಲ್ಲು ಗ್ರಾಮದ ಒಟ್ಟು 65(100%) ಮಾದರಿ ಆಯ್ಕೆಯಲ್ಲಿ ಅನಕ್ಷರಸ್ಥ ಒಟ್ಟು 16(24.61%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 7(10.76%) ಗಂಡು ಮಕ್ಕಳು ಹಾಗೂ 9(13.84%) ಹೆಣ್ಮು ಮಕ್ಕಳು ಇರುವುದನ್ನು ಕಾಣಬಹುದು. 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಒಟ್ಟು 24(36.92%) ಬಾಲಕಾರ್ಮಿಕರನ್ನು ಗುರುತಿಸಲಾಗಿದೆ. ಇವರಲ್ಲಿ 10(15.38%) ಗಂಡು ಮಕ್ಕಳು ಹಾಗೂ 14(21.53%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಬನ್ನಿಕಲ್ಲು ಗ್ರಾಮದ ಸುತ್ತಮುತ್ತಲಿನ ಪ್ರದೇಶದಲ್ಲಿ ಕೆಲಸ ಮಾಡುವ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಒಟ್ಟು 18(27.69%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 11(16.92%) ಗಂಡು ಮಕ್ಕಳು ಹಾಗೂ 7(10.76%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಒಟ್ಟು 7(10.76%) ಬಾಲಕಾರ್ಮಿಕರನ್ನು ಬನ್ನಿಕಲ್ಲು ಗ್ರಾಮದ ಸುತ್ತಮುತ್ತಲಿನ ಪ್ರದೇಶದಲ್ಲಿ ಕಾಣಬಹುದು. ಇವರಲ್ಲಿ 4(6.15%) ಗಂಡು ಮಕ್ಕಳು ಹಾಗೂ 3(4.61%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು.

ಒಟ್ಟಾರೆ ಬನ್ನಿಕಲ್ಲು ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಒಟ್ಟು 65(100%) ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ನಂತರದ ಸ್ಥಾನದಲ್ಲಿ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಬಾಲಕಾರ್ಮಿಕರು ಹಾಗೂ ಮೂರನೇ ಸ್ಥಾನದಲ್ಲಿ ಅನಕ್ಷರಸ್ಥ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಕೊನೆಯ ಸ್ಥಾನದಲ್ಲಿ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದು.

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಇನ್ನೊಂದು ಗ್ರಾಮವಾದ ಕಡಲಬಾಳು ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಒಟ್ಟು 61 ಬಾಲಕಾಮಿಕರ ಮಾದರಿ ಆಯ್ಕೆಯನ್ನು ಮಾಡಿಕೊಳ್ಳಲಾಗಿದೆ. ಇವರಲ್ಲಿ 33(54.1%) ಗಂಡು ಮಕ್ಕಳು ಹಾಗೂ 28(45.9%) ಹೆಮ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಅನಕ್ಷರಸ್ಥ ಒಟ್ಟು 15(23.07%) ಬಾಲಕಾರ್ಮಿಕರು ಕಡಲಬಾಳು ಗ್ರಾಮದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಇರುವುದನ್ನು ಕಾಣಬಹುದು. ಇವರಲ್ಲಿ 6(9.83%) ಗಂಡು ಮಕ್ಕಳು ಹಾಗೂ 9(14.75%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. 1 ರಿಂದ 4ನೇ ತರಗತಿವರೆಗೂ

ಶಿಕ್ಷಣ ಪಡೆದ ಒಟ್ಟು 23(37.7%) ಮಕ್ಕಳು ಇರುವುದನ್ನು ಕಾಣಬಹುದು. ಇವರಲ್ಲಿ 11(18.03%) ಗಂಡು ಮಕ್ಕಳು ಹಾಗೂ 12(19.67%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಅದೇ ರೀತಿಯಾಗಿ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ 17(27.86%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 12(19.67%) ಗಂಡು ಮಕ್ಕಳು ಹಾಗೂ 5(8.19%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಹಾಗೆಯೇ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ 6(9.83%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 4(6.55%) ಗಂಡು ಮಕ್ಕಳು ಹಾಗೂ 2(3.27%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಕಡಲಬಾಳು ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಮಾದರಿ ಆಯ್ಕೆ ಮಾಡಿಕೊಂಡ 61(100%) ಬಾಲಕಾರ್ಮಿಕರಲ್ಲಿ 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಹಾಗೂ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ಅನಕ್ಷರಸ್ಥ ಬಾಲಕಾರ್ಮಿಕರು ನಂತರದ ಸ್ಥಾನದಲ್ಲಿರುವುದನ್ನು ಕಾಣಬಹುದು. ಕೊನೆ ಸ್ಥಾನದಲ್ಲಿ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ.

ಕೋಷ್ಟಕ–4.16ರಲ್ಲಿ ಇರುವಂತೆ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಒಟ್ಟು 56(100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ 30(53.57%) ಗಂಡು ಮಕ್ಕಳು ಹಾಗೂ 26(46.47%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಮರಿಯಮ್ಮನಹಳ್ಳಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಒಟ್ಟು 56(100%) ಮಾದರಿ ಆಯ್ಕೆಯಲ್ಲಿ ಅನಕ್ಷರಸ್ಥ 13(23.21%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 7(12.5%) ಗಂಡು ಮಕ್ಕಳು ಹಾಗೂ 6(10.71%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ 17(30.35%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 8(14.28%) ಗಂಡು ಮಕ್ಕಳು ಹಾಗೂ 9(16.07%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಅದೇ ರೀತಿಯಾಗಿ ಈ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ 15(26.78%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 9(16.07%) ಗಂಡು ಮಕ್ಕಳು ಹಾಗೂ 6(10.71%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಹಾಗೆಯೇ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ 11(19.64%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 6(10.71%) ಗಂಡು ಮಕ್ಕಳು ಹಾಗೂ 5(8.92%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಮರಿಯಮ್ಮನಹಳ್ಳಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಒಟ್ಟು ಮಾದರಿ ಆಯ್ಕೆಯಲ್ಲಿ 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಹಾಗೂ 5 ರಿಂದ 7ನೇ ತರಗತಿವರೆಗೂ

ಶಿಕ್ಷಣ ಪಡೆದ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ನಂತರದ ಸ್ಥಾನದಲ್ಲಿ ಅನಕ್ಷರಸ್ಥ ಹಾಗೂ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಬಾಲಕಾರ್ಮಿಕರು ಇರುವುದನ್ನು ಕಾಣಬಹುದಾಗಿದೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಇನ್ನೊಂದು ಗ್ರಾಮವಾದ ಕಮಲಾಪುರ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಒಟ್ಟು 68(100%) ಬಾಲಕಾರ್ಮಿಕರ ಮಾದರಿ ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 33(48.52%) ಗಂಡು ಮಕ್ಕಳು ಹಾಗೂ 35(51.47%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ. ಇವರಲ್ಲಿ ಅನಕ್ಷರಸ್ಥ 17(25%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 8(11.76%) ಗಂಡು ಮಕ್ಕಳು ಹಾಗೂ 9(13.23%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ 22(32.35%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 12(17.64%) ಗಂಡು ಮಕ್ಕಳು ಹಾಗೂ 10(14.7%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಹಾಗೆಯೇ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ 16(23.52%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಇವರಲ್ಲಿ 6(8.82%) ಗಂಡು ಮಕ್ಕಳು ಹಾಗೂ 10(14.7%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ 13(19.11%) ಬಾಲಕಾರ್ಮಿಕರು ಇರುವುದನ್ನು ಕಾಣಬಹುದು. ಇವರಲ್ಲಿ 7(10.29%) ಗಂಡು ಮಕ್ಕಳು ಹಾಗೂ 6(8.82%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಕಮಲಾಪುರ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಒಟ್ಟು 68(100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯ ಮಕ್ಕಳು 35(51.47%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಹಾಗೆಯೇ 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಹಾಗೂ ಅನಕ್ಷರಸ್ಥ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಬಾಲಕಾರ್ಮಿಕರು ಕಡಿಮೆ ಸ್ಥಾನದಲ್ಲಿರುವುದನ್ನು ಕಾಣಬಹುದಾಗಿದೆ.

ಕೋಷ್ಟಕ – 4.16ರಲ್ಲಿ ಇರುವಂತೆ ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲ್ಲೂಕಿನ ಹುಲಗಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಬಾಲಕಾರ್ಮಿಕರ ವಿದ್ಯಾಭ್ಯಾಸ ಮಾದರಿ ಆಯ್ಕೆಯಲ್ಲಿ ಒಟ್ಟು 52(100%) ಬಾಲಕಾರ್ಮಿಕರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 19(36.53%) ಗಂಡು ಮಕ್ಕಳು ಹಾಗೂ 33(63.46%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಹಾಗೆಯೇ 52(100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಅನಕ್ಷರಸ್ಥ 8(15.38%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 3(5.76%) ಗಂಡು ಮಕ್ಕಳು ಹಾಗೂ 5(9.61%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ 23(44.23%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 8(15.38%)

ಗಂಡು ಮಕ್ಕಳು ಹಾಗೂ 15(28.84%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಅದೇ ರೀತಿಯಾಗಿ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ 18(34.61%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 6(11.53%) ಗಂಡು ಮಕ್ಕಳು ಹಾಗೂ 12(23.07%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣುತ್ತೇವೆ. ಹಾಗೆಯೇ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ 3(5.76%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 2(3.84%) ಗಂಡು ಮಕ್ಕಳು ಹಾಗೂ 1(1.92%) ಹೆಣ್ಣು ಮಕ್ಕಳಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಹುಲಗಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಒಟ್ಟು 52(100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಇವರ ವಿದ್ಯಾಭ್ಯಾಸದ ಅಂಕಿ ಅಂಶಗಳನ್ನು ವಿಶ್ಲೇಷಣೆ ಮಾಡಿದಾಗ ಹೆಚ್ಚಿನ ಸಂಖ್ಯೆಯಲ್ಲಿ 33(63.46%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಅದೇ ರೀತಿಯಾಗಿ ಹೆಚ್ಚಿನ ಬಾಲಕಾರ್ಮಿಕರು 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಹಾಗೂ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಮಕ್ಕಳೇ ಹೆಚ್ಚಿನ ಸಂಖ್ಯೆಯಲ್ಲಿ ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಬಾಲಕಾರ್ಮಿಕರು ಕಡಿಮೆ ಸಂಖ್ಯೆಯಲ್ಲಿರುವುದನ್ನು ಕಾಣಬಹುದಾಗಿದೆ.

ಕೊಪ್ಪಳ ಜಿಲ್ಲೆಯ ಹಾಗೂ ಇದೇ ತಾಲ್ಲೂಕಿನ ಇನ್ನೊಂದು ಗ್ರಾಮವಾದ ಗಿಣಿಗೇರಾ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಒಟ್ಟು 40(100%) ಬಾಲಕಾರ್ಮಿಕರ ಮಾದರಿ ಆಯ್ಕೆಯನ್ನು ಮಾಡಿಕೊಳ್ಳಲಾಗಿದೆ. ಇವರಲ್ಲಿ 13(32.5%) ಗಂಡು ಮಕ್ಕಳು ಹಾಗೂ 27(67.5%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿರುವುದನ್ನು ಕಾಣಬಹುದು. ಗಿಣಿಗೇರಾ ಹಾಗೂ ಸುತ್ತಮುತ್ತಲಿನ ಪ್ರದೇಶಗಳ 40(100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಇವರ ವಿದ್ಯಾಭ್ಯಾಸದ ವಿವರಗಳನ್ನು ನೋಡಿದಾಗ ಅನಕ್ಷರಸ್ಥ 5(12.5%) ಬಾಲಕಾರ್ಮಿಕರಿರುವುದನ್ನು ಕಾಣಬಹುದು. ಇವರಲ್ಲಿ 2(5%) ಗಂಡು ಮಕ್ಕಳು ಹಾಗೂ 3(7.5%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ. 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ 18(45%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 6(15%) ಗಂಡು ಮಕ್ಕಳು ಹಾಗೂ 12(30%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ. ಅದೇ ರೀತಿಯಲ್ಲಿ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ 15(37.5%) ಬಾಲಕಾರ್ಮಿಕರಿದ್ದಾರೆ. ಇವರಲ್ಲಿ 4(10%) ಗಂಡು ಮಕ್ಕಳು ಹಾಗೂ 11(27.5%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಹಾಗೂ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ 2(2.5%) ಬಾಲಕಾರ್ಮಿಕರನ್ನು ಕಾಣುತ್ತೇವೆ. ಇವರಲ್ಲಿ 1(2.5%) ಗಂಡು ಮಕ್ಕಳು ಹಾಗೂ 1(2.5%) ಹೆಣ್ಣು ಮಕ್ಕಳು ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದಾಗಿದೆ.

ಒಟ್ಟಾರೆಯಾಗಿ ಕೊಪ್ಪಳ ತಾಲ್ಲೂಕಿನ ಗಿಣಿಗೇರಾ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿನ ಒಟ್ಟು 40 (100%) ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಹಾಗೂ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಬಾಲಕಾರ್ಮಿಕರೇ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ನಂತರದ ಸ್ಥಾನಗಳಲ್ಲಿ ಅಂದರೆ ಕಡಿಮೆ ಪ್ರಮಾಣದ ಬಾಲಕಾರ್ಮಿಕರು ಅನಕ್ಷರಸ್ಥ ಹಾಗೂ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಬಾಲಕಾರ್ಮಿಕರನ್ನು ಕಾಣಬಹುದಾಗಿದೆ.

ಕೋಷ್ಟಕ–4.16ರಲ್ಲಿ ಇರುವಂತೆ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಹೇರೂರು ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಒಟ್ಟು 52(100%) ಬಾಲಕಾರ್ಮಿಕರ ಮಾದರಿ ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ 22(42.3%) ಗಂಡು ಮಕ್ಕಳು ಹಾಗೂ 30(57.69%) ಹೆಣ್ಣು ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಅನಕ್ಷರಸ್ಥ 9(17.3%) ಬಾಲಕಾರ್ಮಿಕರು ಈ ಪ್ರದೇಶದಲ್ಲಿ ಇರುವುದನ್ನು ಕಾಣುತ್ತೇವೆ. ಇವರಲ್ಲಿ 3(5.76%)ಗಂಡು ಮಕ್ಕಳು ಹಾಗೂ 6(11.53%) ಹೆಣ್ಣು ಮಕ್ಕಳು ಇರುವುದನ್ನು ಕಾಣಬುಹುದು. 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ 23(44.23%) ಬಾಲಕಾರ್ಮಿಕರನ್ನು ಕಾಣುತ್ತೇವೆ. ಇವರಲ್ಲಿ 9(17.3%) ಗಂಡು ಮಕ್ಕಳು ಹಾಗೂ 14(26.92%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ. ಹಾಗೆಯೇ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ 12(23.07%) ಬಾಲಕಾರ್ಮಿಕರನ್ನು ಕಾಣಬುಹುದು. ಇವರಲ್ಲಿ 5(9.61%) ಗಂಡು ಮಕ್ಕಳು ಹಾಗೂ 7(13.48%) ಹೆಣ್ಣು ಮಕ್ಕಳು ಇರುವುದನ್ನು ಕಾಣುತ್ತೇವೆ. ಹಾಗೆಯೇ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ 9(17.3%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 5(9.61%)ಗಂಡು ಮಕ್ಕಳು ಹಾಗೂ 4(7.69%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ.

ಒಟ್ಟಾರೆಯಾಗಿ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಹೇರೂರು ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶದ ಬಾಲಕಾರ್ಮಿಕರ ಒಟ್ಟು 52(100%) ಮಾದರಿ ಆಯ್ಕೆಯಲ್ಲಿ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಹಾಗೂ 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಬಾಲಕಾರ್ಮಿಕರೇ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಅನಕ್ಷರಸ್ಥ ಹಾಗೂ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಬಾಲಕಾರ್ಮಿಕರು ಕಡಿಮೆ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ.

ಕೋಷ್ಟಕ–4.16ರಲ್ಲಿ ಇರುವಂತೆ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಇನ್ನೊಂದು ಗ್ರಾಮವಾದ ಕನಕಗಿರಿ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಒಟ್ಟು 56(100%) ಬಾಲಕಾರ್ಮಿಕ ಮಾದರಿ ಆಯ್ಕೆ ಮಾಡಿಕೊಳ್ಳಲಾಗಿದೆ. ಇವರಲ್ಲಿ21(37.5%) ಗಂಡು ಮಕ್ಕಳು ಹಾಗೂ 35(62.5%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ. ಒಟ್ಟು ಬಾಲಕಾರ್ಮಿಕರಲ್ಲಿ 7(12.5%) ಮಕ್ಕಳು

ಅನಕ್ಷರಸ್ಥ ಮಕ್ಕಳಾಗಿದ್ದಾರೆ. ಇವರಲ್ಲಿ 2(3.57%) ಗಂಡು ಮಕ್ಕಳು ಹಾಗೂ 5(8.92%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ 25(44.64%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 11(19.64%) ಗಂಡು ಮಕ್ಕಳು ಹಾಗೂ 14(25%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಹಾಗೆಯೇ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ 12(21.42%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 1(1.78.%) ಗಂಡು ಮಕ್ಕಳು ಹಾಗೂ 11(19.64%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದು. ಹಾಗೆಯೇ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ 11(19.64%) ಬಾಲಕಾರ್ಮಿಕರನ್ನು ಕಾಣಬಹುದು. ಇವರಲ್ಲಿ 7(12.5%) ಗಂಡು ಮಕ್ಕಳು ಹಾಗೂ 4(7.14%) ಹೆಣ್ಣು ಮಕ್ಕಳು ಇರುವುದನ್ನು ಕಾಣಬಹುದಾಗಿದೆ.

ಒಟ್ಟಾರೆಯಾಗಿ ಕನಕಗಿರಿ ಗ್ರಾಮ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಒಟ್ಟು ಬಾಲಕಾರ್ಮಿಕರ ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆ ಬಾಲಕಾರ್ಮಿಕರು 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಹಾಗೂ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿರವುದನ್ನು ಕಾಣಬಹುದು. ಅನಕ್ಷರಸ್ಥ ಹಾಗೂ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಬಾಲಕಾರ್ಮಿಕರು ಇವುದನ್ನು ಕಾಣಬಹುದಾಗಿದೆ.

ಕೋಷ್ಟಕ–4.16ರಲ್ಲಿ ಇರುವಂತೆ ಒಟ್ಟಾರೆಯಾಗಿ ಬಾಲಕಾರ್ಮಿಕರ 450(100%) ಮಾದರಿ ಆಯ್ಕೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳೇ ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಹಾಗೆಯೇ 175(38.88%) ಬಾಲಕಾರ್ಮಿಕರು 1 ರಿಂದ 4ನೇ ತರಗತಿವರೆಗೂ ಶಿಕ್ಷಣ ಪಡೆದ ಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಇವರಲ್ಲಿಯೂ ಸಹ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳೇ ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಹಾಗೆಯೇ 5 ರಿಂದ 7ನೇ ತರಗತಿವರೆಗೂ ಶಿಕ್ಷಣ ಪಡೆದ 123(27.33%) ಬಾಲಕಾರ್ಮಿಕರು ಇರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಅನಕ್ಷರಸ್ಥ ಬಾಲಕಾರ್ಮಿಕರೂ ಇರುವುದನ್ನು ಕಾಣಬಹುದು. ಹಾಗೆಯೇ 8ನೇ ತರಗತಿಗಿಂತ ಹೆಚ್ಚು ಶಿಕ್ಷಣ ಪಡೆದ ಬಾಲಕಾರ್ಮಿಕರು ಸಹ ಹೆಚ್ಚಿನ ಸಂಖ್ಯೆಯಲ್ಲಿ ಬಾಲಕಾರ್ಮಿಕತೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಸಂದರ್ಶನ ಮಾಡಿದ ಒಟ್ಟು 450 ಬಾಲಕಾರ್ಮಿಕರ ಆರ್ಥಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಸ್ಥಿತಿಗತಿಗಳನ್ನು ಗಮನಿಸಿದಾಗ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು ಆರ್ಥಿಕವಾಗಿ ಅತ್ಯಂತ ಕೆಳಮಟ್ಟದಲ್ಲಿರುವುದನ್ನು ಕಾಣುತ್ತೇವೆ. ಹಾಗೂ ಹಿಚ್ಚಿನ ಸಂಖ್ಯೆಯ ಬಾಲಕಾರ್ಮಿಕರು ಪರಿಶಿಷ್ಟ ಜಾತಿ ಹಾಗೂ ಪರಿಸಿಷ್ಟ ಪಂಗಡಕ್ಕೆ ಸೇರಿದ ಬಾಲಕಾರ್ಮಿಕರೇ ಹೆಚ್ಚಿನ ಪ್ರಮಾಣದಲ್ಲಿರಿವುದನ್ನು ಕಾಣಬಹುದು. ಹಾಗೆಯೇ ಹೆಚ್ಚಿನ ಬಾಲಕಾರ್ಮಿಕರು

ಕೃಷಿಯಲ್ಲಿಯೇ ದುಡಿಮೆಯನ್ನು ಮಾಡುತ್ತಿರುವುದನ್ನು ಕಾಣಬಹುದು. ಅದೇ ರೀತಿಯಾಗಿ ಈ ಅಧ್ಯಯನದಿಂದ ಕಂಡುಬಂದಂತಹ ಇನ್ನೊಂದು ಪ್ರಮುಖವಾದ ಅಂಶವೆಂದರೆ ಹೆಚ್ಚಿನ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳೇ ಬಾಲಕಾರ್ಮಿಕತೆಯಲ್ಲಿ ತೊಡಗಿಕೊಂಡಿರುವುದನ್ನು ಕಾಣಬಹುದು. ಹಾಗೂ ಇನ್ನೂ ಒಂದು ಪ್ರಮುಖ ಅಂಶವೆಂದರೆ ಇವರ ಆರೋಗ್ಯ ಸ್ಥಿತಿ ಕೂಡ ತುಂಬಾ ಶೋಚನೀಯ ಸ್ಥಿತಿಯಲ್ಲಿರುವುದು ಮತ್ತು ಬಾಲಕಾರ್ಮಿಕ ಪದ್ಧತಿಯಿಂದ ಗಂಡು ಮಕ್ಕಳು 21 ವರ್ಷಕ್ಕಿಂತ ಮುಂಚಿತವಾಗಿಯೇ ವಿವಾಹವಾಗುತ್ತಿರುವುದು ಹಾಗೂ ಹೆಣ್ಣು ಮಕ್ಕಳು 18 ವರ್ಷಕ್ಕಿಂತ ಮುಂಚಿತವಾಗಿಯೇ ವಿವಾಹ ವಾಗುತ್ತಿರುವುದನ್ನು ಕಾಣಬಹುದು. ಬಾಲಕಾರ್ಮಿಕ ಪದ್ಧತಿಯಿಂದ ಬಾಲ್ಯವಿವಾಹವು ಹೆಚ್ಚಿನ ಪ್ರಮಾಣದಲ್ಲಿ ಆಗುತ್ತಿರುವುದನ್ನು ಸಹ ನಾವು ಈ ಅಧ್ಯಯನದಿಂದ ತಿಳಿದುಕೊಳ್ಳಬಹುದು.

**ಪರಾಮರ್ಶನ ಗ್ರಂಥಗಳು :**


- ಪೂರ್ವಚಾರ್.ಎಂ. – ಸಮಾಜಶಾಸ್ತ್ರದ ಪರಿಕಲ್ಪನೆಗಳು. –ಚೇತನ ಬುಕ್ ಹೌಸ್. ಮೈಸೂರು. –2004.
- ಬೇಲೂರು ಕೃಷ್ಣಕುಮಾರ್, ಜೀತ ಪದ್ಧತಿಯ ನಿವಾರಣೆ. –ಹೇಮಂತ್ ಸಾಹಿತ್ಯ, ಬೆಂಗಳೂರು. –2005.
- ಭಾರತಿ ಹಾದಿಗೆ. – ಭಾರತೀಯ ಸಮಾಜ ಸಂರಚನೆ ಮತ್ತು ಬದಲಾವಣೆ. –ಲಕ್ಷ್ಮಿ ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು. –2005.
- ಭೈರಪ್ಪ.ಕೆ. – ಪ್ರಸ್ತುತ ಸಾಮಾಜಿಕ ಸಮಸ್ಯೆಗಳು. – ಸಪ್ನ ಬುಕ್ ಹೌಸ್, ಬೆಂಗಳೂರು. – 2004.
- ಭೈರಪ್ಪ.ಕೆ. – ಭಾರತೀಯ ಸಮಾಜ. –ಪ್ರಕಾಶ ಸಾಹಿತ್ಯ, ಬೆಂಗಳೂರು. –2004.
- ನಾರಾಯಣ.ಎಂ. – ಸಾಮಾಜಿಕ ಸಮಸ್ಯೆಗಳು. –ಲಕ್ಷ್ಮಿ ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು. ವರ್ಷ –2005.
- ನಾರಾಯಣ.ಎಂ. – ಸಮಾಜಶಾಸ್ತ್ರ ಸಂಪುಟ–2. –ಸಪ್ನ ಬುಕ್ ಹೌಸ್, ಮೈಸೂರು. ವರ್ಷ – 2005.
- ರಾಜಶೇಖರ ಶಾಸ್ತ್ರೀಮಠ. – ಬಾಲಕಾರ್ಮಿಕರು –ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. 2001.
- ರಾಜಶೇಖರ್.ಎಸ್. – ಭಾರತದಲ್ಲಿ ಸಾಮಾಜಿಕ ಸಮಸ್ಯೆಗಳು. –ಭ್ರಮರ ಪ್ರಕಾಶನ, ಶಿವಮೊಗ್ಗ. –2005.
- ರಾಮಚಂದ್ರ ಜೋಷಿ. – ಭಾರತೀಯ ಸಮಾಜ ರಚನೆ ಮತ್ತು ಪರಿವರ್ತನೆ. –ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ. –2005.
- ಶ್ರೀಪಾದ ಜೋಶಿ, – ಬಾಲಮೇಳ – ಸುಧಾ, 19 ಜನವರಿ 1997.
- ಸಂಪಾದಕರು. – ಮಕ್ಕಳ ತುತ್ತು. –ದಕ್ಷಿಣ ಕನ್ನಡ ಜಿಲ್ಲಾ ಮಕ್ಕಳ ಸಾಹಿತ್ಯ ಪರಿಷತ್ ಸಂಗಮ (ರಿ). ಮಂಗಳೂರು. –1994.
- ಸುಬ್ರಹ್ಮಣ್ಯ.ಜಿ. – ಸಾಮಾಜಿಕ ಸಮಸ್ಯೆಗಳು. –ಸಪ್ನ ಬುಕ್ ಹೌಸ್, ಬೆಂಗಳೂರು. –2005.

# ಅಧ್ಯಾಯ-ಐದು :

# ಬಾಲಕಾರ್ಮಿಕರ ಸಮಸ್ಯೆ ಮತ್ತು ಸವಾಲುಗಳು

5.1. ಬಾಲಕಾರ್ಮಿಕರ ಸಮಸ್ಯೆ ಮತ್ತು ಸವಾಲುಗಳು.

5.2. ಬಾಲಕಾರ್ಮಿಕರ ಸಮಸ್ಯೆಗಳಿಗೆ ಪರಿಹಾರ ಕ್ರಮಗಳು.

5.3. ಬಾಲಕಾರ್ಮಿಕರ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಸರ್ಕಾರ ಹಾಗೂ ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ

# ಅಧ್ಯಾಯ – ಐದು

# ಬಾಲಕಾರ್ಮಿಕರ ಸಮಸ್ಯೆ ಮತ್ತು ಸವಾಲುಗಳು

ಬಾಲಕಾರ್ಮಿಕರ ಸಮಸ್ಯೆಯು ಇಂದು ಗಂಭೀರ ಸ್ವರೂಪವನ್ನು ಪಡೆದುಕೊಂಡಿದ್ದು ಅದರ ಪರಿಣಾಮಗಳು ಕೂಡಾ ಅಷ್ಟೇ ಭಯಾನಕವಾಗಿದೆ. ದುಡಿತದಿಂದ ಮಕ್ಕಳ ಮೇಲೆ ಆಗುವ ಪರಿಣಾಮಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

ಹಣದಾಸೆಗಾಗಿ ದುಡಿಯುವ ಮಕ್ಕಳು ಮೊದಮೊದಲು ಲಾಭದ ಭ್ರಮೆಯಲ್ಲಿರುತ್ತಾರೆ. ಬಿಡುವಿಲ್ಲದ ದುಡಿತದಿಂದ ಮಕ್ಕಳ ದೈಹಿಕ ಬೆಳವಣಿಗೆ ಕುಂಠಿತಗೊಂಡು ಅವರು ಕೆಲವೇ ದಿನಗಳಲ್ಲಿ ಶಕ್ತಿಹೀನರಾಗಿ ದುಡಿಯುವ ಶಕ್ತಿಯನ್ನೂ ಸಂಪೂರ್ಣವಾಗಿ ಕಳೆದುಕೊಳ್ಳುವುದುಂಟು. ಸರಿಯಾದ ತರಬೇತಿ ಇಲ್ಲದ ಮಕ್ಕಳನ್ನೂ ಕೆಲಸಗಳಲ್ಲಿ ತೊಡಗಿಸಿಕೊಳ್ಳುವುದರಿಂದ ಮಾಲೀಕರಿಗೆ ಇವರಿಂದ ಲಾಭಕ್ಕಿಂತ ನಷ್ಟವೇ ಹೆಚ್ಚು.

ಅಪಾಯಕಾರಿ ಘಟಕಗಳಾದ ರತ್ನಗಂಬಳಿ ನೇಯ್ಗೆ, ಬೆಂಕಿಕಡ್ಡಿ ತಯಾರಿಕೆ, ಹಿತ್ತಾಳೆ ಮತ್ತು ಬೀಗಗಳ ತಯಾರಿಕೆ, ಕುಂಬಾರಿಕೆ, ಬಳೆಗಳ ತಯಾರಿಕೆ ರತ್ನಾಭರಣಗಳ ತಯಾರಿಕೆ ಮುಂತಾದ ಅಪಾಯಕಾರಿ ವೃತ್ತಗಳಲ್ಲಿ ಕೆಲಸ ಮಾಡುವ ಮಕ್ಕಳು ಕ್ಷಯ, ಚರ್ಮದ ರೋಗಗಳು, ಸುಟ್ಟಗಾಯಗಳು, ಸಿಲಿಕೋಸಿಸ್ ಮುಂತಾದ ರೋಗಗಳಿಗೆ ತುತ್ತಾಗುವ ಸಂಭವ ಹೆಚ್ಚು. ಅಪಾಯಕಾರಿ ಯಂತ್ರಗಳು, ರಾಸಾಯನಿಕ ಮತ್ತು ಅಧಿಕ ಉಷ್ಣಾಂಶಗಳ ಕುಲುಮೆಗಳಲ್ಲಿ ಕೆಲಸ ಮಾಡುವ ಮಕ್ಕಳು ಅಪಘಾತಗಳಿಗೆ ತುತ್ತಾಗುವ ಸಂಭವ ಹೆಚ್ಚಾಗಿರುತ್ತದೆ. ಕೇವಲ ಹಣದಾಸೆಗಾಗಿ ಇಂದು ಎಷ್ಟೋ ತಂದೆ–ತಾಯಿಗಳು ತಮ್ಮ ಮಕ್ಕಳನ್ನು ಒತ್ತಿ ಇಡುವ, ಜೀತಕ್ಕೆ ಕಳಿಸುವ, ಕಾರ್ಖಾನೆಗಳಲ್ಲಿ, ಗಣಿಗಳಲ್ಲಿ, ಹೋಟೆಲಗಳಲ್ಲಿ, ಕೃಷಿ ಕೆಲಸಗಳಲ್ಲಿ, ಕಟ್ಟಡಗಳಲ್ಲಿ, ದುಡಿಯುವ ಮಕ್ಕಳ ಸ್ಥಿತಿಗತಿಗಳು ತುಂಬಾ ಶೋಚನೀಯವಾಗಿದೆ. ದುಡಿಸಿಕೊಳ್ಳುವ ಮಾಲೀಕರು ಕೂಡಾ ಮಕ್ಕಳ ರಕ್ಷಣೆಗೆ ಸ್ವಲ್ಪವೂ ಜವಾಬ್ದಾರಿ ತೆಗೆದುಕೊಳ್ಳದೇ

ಇರುವುದು ಅವರನ್ನು ಇನ್ನಷ್ಟು ಸಂಕಷ್ಟಕ್ಕೆ ಈಡು ಮಾಡಿದೆ. ಉದಾ-ಗಾಜಿನ ಕಾರ್ಖಾನೆಗಳಲ್ಲಿ ದುಡಿಯುವ ಮಕ್ಕಳಿಗೆ ಕನ್ನಡಕವನ್ನು ಒದಗಸದೇ ಉಸಿರುಗಟ್ಟುವ ಕೊಠಡಿಗಳಲ್ಲಿ ಕೂಡಿ ಹಾಕಿ ಅವರು ನರಳುವಂತೆ ಮಾಡಲಾಗುತ್ತಿದೆ. ಸುಟ್ಟಗಾಯ, ರಕ್ತಹೀನತೆ, ಕಣ್ಣಿನ ರೋಗ, ಶ್ವಾಸಕೋಶಕ್ಕೆ ಸಂಬಂಧಿಸಿದ ರೋಗಗಳಿಗೆ ತುತ್ತಾಗಿದ್ದರು ಅವರಿಗೆ ಯಾವುದೇ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುತ್ತಿಲ್ಲ.

ಶಾಲೆ ಕಲಿಯುವ ಹಂತದಲ್ಲಿ ಮಕ್ಕಳನ್ನು ಕೆಲಸಕ್ಕೆ ಸೇರಿಸುವುದರಿಂದ ಅವನ ಜೀವನ ಪರ್ಯಂತ ನಿರಕ್ಷರ ಕುಕ್ಷಿಗಳಾಗಿ ಮುಂದೆ ದೇಶಕ್ಕೆ ಸಮಸ್ಯೆಗಳನ್ನು ಸೃಷ್ಟಿಸುವವರಾಗುತ್ತಾರೆ.

ಅಸಮರ್ಪಕವಾದ ವಾತಾವರಣದಿಂದ ದುಡಿಯುವ ಮಕ್ಕಳು ಬಹುಬೇಗ ಕೆಟ್ಟ ಸಹವಾಸಕ್ಕೆ ಒಳಗಾಗಿ ನೈತಿಕ ಅವನತಿ ಹೊಂದುತ್ತಾರೆ. ಬೀಡಿ, ಸಿಗರೇಟು ಸೇದುವುದು, ಸರಾಯಿ ಕುಡಿಯುವುದು, ಜೂಜಾಡುವುದು, ಅನೈತಿಕವಾದ ಲೈಂಗಿಕ ಚಟುವಟಿಕೆಗಳಲ್ಲಿ ತೊಡಗುವುದು ಮುಂತಾದ ದುಷ್ಟ ಪ್ರವೃತ್ತಿಗಳಿಗೆ ಒಳಗಾಗಿ ನೈತಿಕ ಅಧಃಪತನ ಹೊಂದುತ್ತಾರೆ.

ಮಕ್ಕಳು ದುಡಿಯುವುದರಿಂದ ಕುಟುಂಬದಲ್ಲಿ ಶಾಂತಿ, ನೆಮ್ಮದಿ ಹಾಗೂ ಸಾಮರಸ್ಯಗಳು ಕುಂಠಿತಗೊಳ್ಳುತ್ತವೆ. ತಂದೆ-ತಾಯಿಗಳ ಮತ್ತು ಕುಟುಂಬ ಸದಸ್ಯರ ಮಧ್ಯೆ ಸುಮಧುರ ಬಾಂಧವ್ಯಗಳು ಕ್ಷಣಿಕವಾಗುವುವು. ದುಡಿಯುವ ಮಕ್ಕಳ ಮೇಲೆ ತಂದೆ-ತಾಯಿಗಳ ಹತೋಟಿ ತಪ್ಪಿ ಸಮಾಜ ಘಾತಕ ಚಟುವಟಿಕೆಗಳಲ್ಲಿ ಭಾಗವಹಿಸುವ ಸಾಧ್ಯತೆಗಳು ಹೆಚ್ಚು.

## 5.1. ಬಾಲಕಾರ್ಮಿಕರ ಸಮಸ್ಯೆ ಮತ್ತು ಸವಾಲುಗಳು

ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಯಾದ್ಯಂತ ಹಲವಾರು ಬಾಲಕಾರ್ಮಿಕರು ಅನೇಕ ಸಮಸ್ಯೆಗಳಿಗೆ ಒಳಗಾಗಿದ್ದಾರೆ. ಹಾಗೆಯೇ ಅನೇಕ ರೀತಿಯ ಸವಾಲುಗಳನ್ನು ಎದುರಿಸುತ್ತಿದ್ದಾರೆ ಎಂದು ಹೇಳಬಹುದು. ಇಂತಹ ಮಕ್ಕಳ ಆರ್ಥಿಕ ಪರಿಸ್ಥಿತಿ ತುಂಬಾ ಶೋಚನೀಯವಾಗಿದೆ ಎಂದು ಹೇಳಬಹುದು. ಈ ಕಾರಣದಿಂದಲೇ ಇವರು ದುಡಿಮೆಗೆ ಹೋಗಲೇಬೇಕಾದ ಅನಿವಾರ್ಯತೆಯನ್ನು ಎದುರಿಸುತ್ತಿದ್ದಾರೆ. ಆರ್ಥಿಕ ಸಮಸ್ಯೆ ಮಾತ್ರವಲ್ಲದೆ ಇವರು ಶೈಕ್ಷಣಿಕ ಸಮಸ್ಯೆಯನ್ನು ಸಹ ಎದುರಿಸ ಬೇಕಾದ ಅನಿವಾರ್ಯತೆಗೆ ಸಿಲುಕಿದ್ದಾರೆ. ಮಕ್ಕಳು ದುಡಿಯಲು ಹೋಗುವುದರಿಂದ ಸಾಮಾನ್ಯವಾಗಿ ಶೈಕ್ಷಣಿಕವಾಗಿ ಹಿಂದುಳಿಯ ಬೇಕಾಗಿಬಂದಿದೆ. ದುಡಿಮೆ ಹಾಗೂ ಶಿಕ್ಷಣ ಎರಡನ್ನು ಒಂದೇ ಸಲಕ್ಕೆ ಮಾಡಲು ಮಕ್ಕಳಿಗೆ ಕಷ್ಟ ಸಾಧ್ಯವಾಗಿದೆ. ಇದರಿಂದ ಮಕ್ಕಳು ಶೈಕ್ಷಣಿಕವಾಗಿ ಸಹ ಹಿಂದುಳಿಯ ಬೇಕಾದ ಪರಿಸ್ಥಿತಿ ಬಂದಿದೆ.

**ಬಾಲ ದುಡಿತದ ದುಷ್ಪರಿಣಾಮಗಳು**

ಬಾಲಕಾರ್ಮಿಕರ ಸಮಸ್ಯೆಯು ಇಂದು ಗಂಭೀರ ಸ್ವರೂಪವನ್ನು ಪಡೆದುಕೊಂಡಿದ್ದು ಅದರ ಪರಿಣಾಮಗಳು ಕೂಡಾ ಅಷ್ಟೇ ಭಯಾನಕವಾಗಿದೆ. ದುಡಿತದಿಂದ ಮಕ್ಕಳ ಮೇಲೆ ಆಗುವ ಪರಿಣಾಮಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

- ಹಣದಾಸೆಗಾಗಿ ದುಡಿಯುವ ಮಕ್ಕಳು ಮೊದಮೊದಲು ಲಾಭದ ಭ್ರಮೆಯಲ್ಲಿರುತ್ತಾರೆ. ಬಿಡುವಿಲ್ಲದ ದುಡಿತದಿಂದ ಮಕ್ಕಳ ದೈಹಿಕ ಬೆಳವಣಿಗೆ ಕುಂಠಿತಗೊಂಡು ಅವರು ಕೆಲವೇ ದಿನಗಳಲ್ಲಿ ಶಕ್ತಿಹೀನರಾಗಿ ದುಡಿಯುವ ಶಕ್ತಿಯನ್ನೂ ಸಂಪೂರ್ಣವಾಗಿ ಕಳೆದುಕೊಳ್ಳುವುದುಂಟು. ಸರಿಯಾದ ತರಬೇತಿ ಇಲ್ಲದ ಮಕ್ಕಳನ್ನೂ ಕೆಲಸಗಳಲ್ಲಿ ತೊಡಗಿಸಿಕೊಳ್ಳುವುದರಿಂದ ಮಾಲೀಕರಿಗೆ ಇವರಿಂದ ಲಾಭಕ್ಕಿಂತ ನಷ್ಟವೇ ಹೆಚ್ಚು.
- ಅಪಾಯಕಾರಿ ಘಟಕಗಳಾದ ರತ್ನಗಂಬಳಿ ನೇಯ್ಗೆ, ಬೆಂಕಿಕಡ್ಡಿ ತಯಾರಿಕೆ, ಹಿತ್ತಾಳೆ ಮತ್ತು ಬೀಗಗಳ ತಯಾರಿಕೆ, ಕುಂಬಾರಿಕೆ, ಬಳೆಗಳ ತಯಾರಿಕೆ ರತ್ನಾಭರಣಗಳ ತಯಾರಿಕೆ ಮುಂತಾದ ಅಪಾಯಕಾರಿ ವೃತ್ತಗಳಲ್ಲಿ ಕೆಲಸ ಮಾಡುವ ಮಕ್ಕಳು ಕ್ಷಯ, ಚರ್ಮದ ರೋಗಗಳು, ಸುಟ್ಟಗಾಯಗಳು, ಸಿಲಿಕೋಸಿಸ್ ಮುಂತಾದ ರೋಗಗಳಿಗೆ ತುತ್ತಾಗುವ ಸಂಭವ ಹೆಚ್ಚು. ಅಪಾಯಕಾರಿ ಯಂತ್ರಗಳು, ರಾಸಾಯನಿಕ ಮತ್ತು ಅಧಿಕ ಉಷ್ಣಾಂಶಗಳ ಕುಲುಮೆಗಳಲ್ಲಿ ಕೆಲಸ ಮಾಡುವ ಮಕ್ಕಳು ಅಪಘಾತಗಳಿಗೆ ತುತ್ತಾಗುವ ಸಂಭವ ಹೆಚ್ಚಾಗಿರುತ್ತದೆ.
- ಕೇವಲ ಹಣದಾಸೆಗಾಗಿ ಇಂದು ಎಷ್ಟೋ ತಂದೆ-ತಾಯಿಗಳು ತಮ್ಮ ಮಕ್ಕಳನ್ನು ಒತ್ತಿ ಇಡುವ, ಜೀತಕ್ಕೆ ಕಳಿಸುವ, ಕಾರ್ಖಾನೆಗಳಲ್ಲಿ, ಗಣಿಗಳಲ್ಲಿ, ಹೋಟೆಲಗಳಲ್ಲಿ, ಕೃಷಿ ಕೆಲಸಗಳಲ್ಲಿ, ಕಟ್ಟಡಗಳಲ್ಲಿ, ದುಡಿಯುವ ಮಕ್ಕಳ ಸ್ಥಿತಿಗತಿಗಳು ತುಂಬಾ ಶೋಚನೀಯವಾಗಿದೆ. ದುಡಿಸಿಕೊಳ್ಳುವ ಮಾಲೀಕರು ಕೂಡಾ ಮಕ್ಕಳ ರಕ್ಷಣೆಗೆ ಸ್ವಲ್ಪವೂ ಜವಾಬ್ದಾರಿ ತೆಗೆದುಕೊಳ್ಳದೇ ಇರುವುದು ಅವರನ್ನು ಇನ್ನಷ್ಟು ಸಂಕಷ್ಟಕ್ಕೆ ಈಡು ಮಾಡಿದೆ. ಉದಾ-ಗಾಜಿನ ಕಾರ್ಖಾನೆಗಳಲ್ಲಿ ದುಡಿಯುವ ಮಕ್ಕಳಿಗೆ ಕನ್ನಡಕವನ್ನು ಒದಗಸದೇ ಉಸಿರುಗಟ್ಟುವ ಕೊಠಡಿಗಳಲ್ಲಿ ಕೂಡಿ ಹಾಕಿ ಅವರು ನರಳುವಂತೆ ಮಾಡಲಾಗುತ್ತಿದೆ. ಸುಟ್ಟಗಾಯ, ರಕ್ತಹೀನತೆ, ಕಣ್ಣಿನ ರೋಗ, ಶ್ವಾಸಕೋಶಕ್ಕೆ ಸಂಬಂಧಿಸಿದ ರೋಗಗಳಿಗೆ ತುತ್ತಾಗಿದ್ದರು ಅವರಿಗೆ ಯಾವುದೇ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುತ್ತಿಲ್ಲ.
- ಶಾಲೆ ಕಲಿಯುವ ಹಂತದಲ್ಲಿ ಮಕ್ಕಳನ್ನು ಕೆಲಸಕ್ಕೆ ಸೇರಿಸುವುದರಿಂದ ಅವನ ಜೀವನ ಪರ್ಯಂತ ನಿರಕ್ಷರ ಕುಕ್ಷಿಗಳಾಗಿ ಮುಂದೆ ದೇಶಕ್ಕೆ ಸಮಸ್ಯೆಗಳನ್ನು ಸೃಷ್ಟಿಸುವವರಾಗುತ್ತಾರೆ.
- ಅಸಮರ್ಪಕವಾದ ವಾತಾವರಣದಿಂದ ದುಡಿಯುವ ಮಕ್ಕಳು ಬಹುಬೇಗ ಕೆಟ್ಟ ಸಹವಾಸಕ್ಕೆ ಒಳಗಾಗಿ ನೈತಿಕ ಅವನತಿ ಹೊಂದುತ್ತಾರೆ. ಬೀಡಿ, ಸಿಗರೇಟು ಸೇದುವುದು, ಸರಾಯಿ ಕುಡಿಯುವುದು,

ಜೂಜಾಡುವುದು, ಅನೈತಿಕವಾದ ಲೈಂಗಿಕ ಚಟುವಟಿಕೆಗಳಲ್ಲಿ ತೊಡಗುವುದು ಮುಂತಾದ ದುಷ್ಟ ಪ್ರವೃತ್ತಿಗಳಿಗೆ ಒಳಗಾಗಿ ನೈತಿಕ ಅಧಃಪತನ ಹೊಂದುತ್ತಾರೆ.

- ಮಕ್ಕಳು ದುಡಿಯುವುದರಿಂದ ಕುಟುಂಬದಲ್ಲಿ ಶಾಂತಿ, ನೆಮ್ಮದಿ ಹಾಗೂ ಸಾಮರಸ್ಯಗಳು ಕುಂಠಿತಗೊಳ್ಳುತ್ತವೆ. ತಂದೆ-ತಾಯಿಗಳ ಮತ್ತು ಕುಟುಂಬ ಸದಸ್ಯರ ಮಧ್ಯೆ ಸುಮಧುರ ಬಾಂಧವ್ಯಗಳು ಕ್ಷಣಿಕವಾಗುವುವು. ದುಡಿಯುವ ಮಕ್ಕಳ ಮೇಲೆ ತಂದೆ-ತಾಯಿಗಳ ಹತೋಟಿ ತಪ್ಪಿ ಸಮಾಜ ಘಾತಕ ಚಟುವಟಿಕೆಗಳಲ್ಲಿ ಭಾಗವಹಿಸುವ ಸಾಧ್ಯತೆಗಳು ಹೆಚ್ಚು.

ಮಕ್ಕಳ ದುಡಿಮೆಯಲ್ಲಿ ಇನ್ನೊಂದು ಪ್ರಮುಖವಾದ ಸಮಸ್ಯೆ ಎಂದರೆ ಆರೋಗ್ಯ ಸಮಸ್ಯೆಯಾಗಿದೆ. ಮಕ್ಕಳ ದುಡಿಮೆಯಿಂದ ಮಕ್ಕಳ ಆರೋಗ್ಯದ ಮೇಲೆ ಅನೇಕ ರೀತಿಯ ದುಷ್ಪರಿಣಾಮಗಳು ಎದುರಾಗಲು ಮಕ್ಕಳ ದುಡಿಮೆ ಕಾರಣವಾಗಿದೆ ಎಂದು ಹೇಳಬಹುದು. ಇದರಿಂದ ಮಕ್ಕಳು ಹಲವಾರು ರೋಗರುಜನಗಳಿಗೆ ತುತ್ತಾಗಿ ಮಕ್ಕಳ ಎಳೆಯ ದೇಹದ ಮೇಲೆ ದುಷ್ಪರಿಣಾಮ ಬೀರುವ ಸಾಧ್ಯತೆ ಅಧಿಕವಾಗಿದೆ ಎಂದು ಹೇಳಬಹುದು.

ಮಕ್ಕಳ ದುಡಿಮೆ ಪರಿಸ್ಥಿತಿ ಎಲ್ಲಾ ಕಡೆ ಒಂದೇ ತೆರನಾಗಿಲ್ಲ. ಕಾರ್ಖಾನೆಗಳಲ್ಲಿ ಕೆಲಸಮಾಡುವ ಮಕ್ಕಳು ಕೃಷಿ ಕ್ಷೇತ್ರದಲ್ಲಿ ಕೆಲಸಮಾಡುವ ಮಕ್ಕಳಿಗಿಂತ ಅಪಾಯಕಾರಿ ಸ್ಥಿತಿಯಲ್ಲಿ ಕೆಲಸ ನಿರ್ವಹಿಸುವಂತಾಗಿದೆ. ಗಾಳಿ ಬೆಳಕುಗಳಿಲ್ಲದ ಕೊಳಕು ವಾತಾವರಣದ , ಪಾಚಿ ಬೆಳೆದ ಗೋಡೆಗಳ ಕೆಟ್ಟ ವಾಸನೆಯ ಕೋಣೆಗಳಲ್ಲಿ ದುಡಿಯುತ್ತಿದ್ದಾರೆ. ಅತಿಹೆಚ್ಚು ಉಷ್ಣದ ಹತ್ತಿರ ನಿಂತು ಕೆಲಸ ಮಾಡುತ್ತಾರೆ. ಇದರಿಂದ ಮಕ್ಕಳ ದೈಹಿಕ ಮತ್ತು ಮಾನಸಿಕ ಆರೋಗ್ಯದ ಮೇಲೆ ದುಷ್ಪರಿಣಾಮಗಳು ಉಂಟಾಗುತ್ತಿವೆ. ಈ ಸಮಸ್ಯೆಯು ಆರ್ಥಿಕ ಮತ್ತು ಸಾಮಾಜಿಕ ಪರಿಣಾಮಗಳನ್ನು ಉಂಟು ಮಾಡುತ್ತದೆ. ಹಾಗೂ ಮಕ್ಕಳ ಆರೋಗ್ಯದ ಮೇಲೆ ಕೆಟ್ಟಪರಿಣಾಮ ಬೀರುತ್ತದೆ.

ದುಡಿಯುವ ಮಕ್ಕಳು ಸಾಮಾನ್ಯವಾಗಿ ಒರಟಾಗಿ , ಮೊಂಡರಾಗಿ , ಅಮಾನುಷ ವರ್ತನೆಯಿಂದ ಬಾಲಾಪರಾಧಿಗಳಾಗುವ ಸನ್ನಿವೇಶ ಉಂಟಾಗುತ್ತಿದೆ. ಈ ಮನೋಭಾವದ ಮಕ್ಕಳು ನಿಯಂತ್ರಣಕ್ಕೆ ಒಳಪಡದೆ ಸ್ವೇಚ್ಛಾಚಾರಿಗಳಾಗಿ ವರ್ತಿಸುತ್ತಾರೆ. ಸಾಮಾಜಿಕ ಮೌಲ್ಯ ಮತ್ತು ನೈತಿಕ ಮೌಲ್ಯಗಳ ಬಗ್ಗೆ ನಿರ್ಲಕ್ಷ್ಯವುಳ್ಳವರಾಗುತ್ತಾರೆ. ಕಾನೂನುಬಾಹಿರ , ಸಮಾಜಬಾಹಿರ ಚಟುವಟಿಕೆಗಳಲ್ಲಿ ತೊಡಗುತ್ತಾರೆ.

ಮಕ್ಕಳು ಕೆಲಸದಲ್ಲಿ ನಿರತರಾಗಿರುವುದರಿಂದ ಉತ್ಪಾದನೆ ಮತ್ತು ಆದಾಯ ಹೆಚ್ಚಿದರೂ ಅವರು ಅವಿದ್ಯಾವಂತರಾಗಿ ಉಳಿಯುವುದರಿಂದ ದೇಶಕ್ಕೆ ದೊಡ್ಡ ಅಗೋಚರ ನಷ್ಟ ಉಂಟಾಗುತ್ತಿದೆ. ಒಬ್ಬ ವ್ಯಕ್ತಿಯು ಸಣ್ಣವಯಸ್ಸಿನಲ್ಲೇ ಮಿತಿಮೀರಿ ಕಷ್ಟ ಹಾಗೂ ಆಯಾಸದ ಕೆಲಸಮಾಡಿದರೆ ಮುಂದೆ ಬೆಳೆದು

ಆತ ಮಧ್ಯವಯಸ್ಕನಾದಾಗ ಶಕ್ತಿಹೀನನಾಗುತ್ತಾನೆ. ಪ್ರಾಪ್ತ ವಯಸ್ಕರಾಗುವ ಮುನ್ನವೇ ಶಕ್ತಿಯನ್ನೆಲ್ಲಾ ಕಳೆದುಕೊಂಡು ನಿಶ್ಯಕ್ತನಾಗುತ್ತಾನೆ.

ಮಕ್ಕಳ ದುಡಿತವು ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಆರೋಗ್ಯದ ಮೇಲೆ ತೀವ್ರ ತರಹದ ಕೆಟ್ಟ ಪರಿಣಾಮಗಳನ್ನು ಉಂಟುಮಾಡುತ್ತದೆ. ಇದು ಕುಟುಂಬದ ಶಾಂತಿಯನ್ನು ಕದಡಿ, ನಿಯಂತ್ರಣ ತಪ್ಪಿ ಸಾಮಾಜಿಕ ಅರಾಜಕತೆಗೆ ಅವಕಾಶ ಕಲ್ಪಿಸುತ್ತದೆ. ವಿದ್ಯೆಯಿಲ್ಲದೆ ಅಜ್ಞಾನದಿಂದ ಅವರ ಭವಿಷ್ಯ ಕುಂಠಿತವಾಗುತ್ತದೆ. ಆರೋಗ್ಯ ಹದಗೆಟ್ಟು ರೋಗಗಳ ತಾಣವಾಗುತ್ತದೆ. ಸಾಮಾಜಿಕ ಪರಿಸರ ಮಲೀನಗೊಳ್ಳುತ್ತದೆ. ನೈತಿಕ ಅಧಃ ಪತನಕ್ಕೆ ಒಳಗಾಗಿ ದುರ್ಗುಣಗಳಿಗೆ ದೂಡಲ್ಪಡುತ್ತಾರೆ.

**ಮಕ್ಕಳ ದುಡಿತದ ಪರಿಣಾಮಗಳು** [Consequences of Child Labour]

'ಮಕ್ಕಳ ದುಡಿತ'ವೆಂಬುದು ಒಂದು ಗಂಭೀರ ಸಾಮಾಜಿಕ ಸಮಸ್ಯೆಯಾಗಿ ಬೆಳೆಯುತ್ತಿದ್ದು ಬಹಳ 'ಅಪಾಯಕಾರಿ' ಎಂಬಂತಹ ಸ್ಥಿತಿಯನ್ನು ತಲುಪಿದೆ. ದೇಶದ ಒಟ್ಟು ಮಕ್ಕಳ ಸಂಖ್ಯೆ 15% ಮಂದಿ [ಅಂದರೆ, ಒಂದು ಅಂಜಾನಂತೆ 310 ದಶಲಕ್ಷ ಮಂದಿ ಮಕ್ಕಳಲ್ಲಿ ಸುಮಾರು 45 ರಿಂದ 50 ದಶಲಕ್ಷ ಮಂದಿ] ಇಂದಿಗೂ ಆರ್ಥಿಕ, ಸಾಮಾಜಿಕ ಹಾಗೂ ಇನ್ನಿತರ ಬಗೆಯ ಒತ್ತಡಗಳಿಗೆ ಸಿಲುಕಿ ಒತ್ತಾಯದ ಹಾಗೂ ಬಲವಂತದ ದುಡಿಮೆಗೆ ಒಳಗಾಗಿದ್ದಾರೆ ಎಂಬುದು ಸಮಾಜದ ಹಿತಚಿಂತಕರನ್ನು ಯೋಚನೆಗೀಡು ಮಾಡುವಂತಹ ಸಂಗತಿಯಾಗಿದೆ. ಈ ಸಮಸ್ಯೆಯಿಂದ ಉದ್ಭವಿಸುವ ಪರಿಣಾಮಗಳೂ ಕೂಡ ಅಷ್ಟೇ ಭೀಕರವಾಗಿವೆ. ಮಕ್ಕಳ ದುಡಿತದ ಸಾಮಾಜಿಕ ಹಾಗೂ ಆರ್ಥಿಕ ದುಷ್ಪರಿಣಾಮಗಳನ್ನು ಈ ಕೆಳಗೆ ಸೂಕ್ಷ್ಮವಾಗಿ ಪ್ರಸ್ತಾಪಿಸಲಾಗಿದೆ.

- **ಮಕ್ಕಳ ದುಡಿತದ ಸಾಮಾಜಿಕ ದುಷ್ಪರಿಣಾಮಗಳು**

ಮಕ್ಕಳ ದುಡಿತದ ಪರಿಣಾಮವಾಗಿ ಕೌಟುಂಬಿಕ ಸಮಸ್ಯೆಗಳು ತಲೆದೋರುತ್ತವೆ. ಈ ಸಮಸ್ಯೆಯಿಂದ ಕೌಟುಂಬಿಕ ಜೀವನದ ಶಾಂತಿ, ಸಂತೃಪ್ತಿ ಹಾಗೂ ಸಾಮರಸ್ಯಗಳು ಭಗ್ನಗೊಳ್ಳುತ್ತವೆ. ಕುಟುಂಬದಲ್ಲಿರಬೇಕಾದ ಹೆತ್ತವರು ಮತ್ತು ಮಕ್ಕಳ ನಡುವಿನ ಸುಮಧುರ ಬಾಂಧವ್ಯವು ಒಡೆದುಹೋಗುವುದು. ಮಕ್ಕಳ ಸಾಮಾಜೀಕರಣದ ಪ್ರಕ್ರಿಯೆಯು ಗೊಂದಲಮಯವಾಗುವುದು. ದುಡಿಯುವ ಮಕ್ಕಳ ಮೇಲೆ ತಾಯ್ತಂದೆಯರಿಗೆ ಯಾವುದೇ ಹತೋಟಿ ಇಲ್ಲದಂತಾಗಿ ಅವರು ಅನೈತಿಕ ಹಾಗೂ ಸಮಾಜಘಾತುಕ ಕೃತ್ಯಗಳಿಗೆ ಇಳಿಯಬಹುದಾದ ಸಾಧ್ಯತೆ ಹೆಚ್ಚುವುದು.

ಮಕ್ಕಳ ದುಡಿತಕ್ಕೆ ಸಂಬಂಧಿಸಿದಂತೆ ಕೈಗೊಳ್ಳಲಾದ ಹಲವು ಸಮಾಕ್ಷೆಗಳು ಹಾಗೂ ಅಧ್ಯಯನಗಳು ವರದಿಮಾಡಿರುವಂತೆ ಮಕ್ಕಳ ದುಡಿತವು ಮಕ್ಕಳ ಮೇಲೆಯೇ ಅನೇಕ ತೆರನಾದ ದುಷ್ಪರಿಣಾಮಗಳುಂಟಾಗುವಂತೆ ಮಾಡುವುದು. ಉದಾಹರಣೆಗೆ, ದುಡಿಯುವ ಮಕ್ಕಳು ಕುಟುಂಬದ

ಘನತೆ, ಗೌರವ ಹಾಗೂ ಕೌಟುಂಬಿಕ ಮರ್ಯಾದೆಯ ಬಗ್ಗೆ ಹಾಗೂ ಸಾಮಾಜಿಕ ನೈತಿಕ ಮೌಲ್ಯಗಳ ಬಗ್ಗೆ ಹೆಚ್ಚು ತಾತ್ಸಾರ ಭಾವನೆಯುಳ್ಳವರಾಗಿರುತ್ತಾರೆ. ತಾವು ಸ್ವತಂತ್ರ ದುಡಿಮೆಗಾರರೆಂಬ ಅಹಂಭಾವದಿಂದ ಇವರು ಕುಟುಂಬದ ಹತೋಟಿಯಿಂದ ತಪ್ಪಿಸಿಕೊಂಡು ಕಾನೂನುಬಾಹಿರ ಕೃತ್ಯಗಳಲ್ಲಿ ತೊಡಗುವ ಸಾಧ್ಯತೆ ಅಧಿಕವಾಗಿರುತ್ತದೆ. ದುಡಿಮೆಯಲ್ಲಿ ತೊಡಗಿರುವ ಮಕ್ಕಳಲ್ಲಿ ಸ್ವೇಚ್ಛಾಚಾರದ ಪ್ರವೃತ್ತಿ ಅಧಿಕವಾಗಿರುವದರಿಂದ ಅವರು ಗಣನೀಯ ಸಂಖ್ಯೆಯಲ್ಲಿ ಬಾಲಾಪರಾಧೀ ಚಟುವಟಿಕೆಗಳಲ್ಲಿ ತೊಡಗುವರು. ಸಾಮಾಜಿಕ ಮೌಲ್ಯಗಳಿಗೆ ಹಾಗೂ ನಿಯಮಗಳಿಗೆ ಗೌರವ ನೀಡದಿರುವ ಈ ಮಕ್ಕಳು ಮುಂದೆ ಬೆಳೆದು ದೊಡ್ಡವರಾದ ಮೇಲೆ ಸಮಾಜಕ್ಕೊಂದು ಸವಾಲಾಗಿ ನಿಲ್ಲಬಹುದಾದ ಅಪಾಯವಿರುತ್ತದೆ.

- **ಮಕ್ಕಳ ದುಡಿತದ ಆರ್ಥಿಕ ದುಷ್ಪರಿಣಾಮಗಳು**

ಮಕ್ಕಳ ದುಡಿತದಿಂದ ತತ್ಕಾಲದಲ್ಲಿ ಒಂದಷ್ಟು ಲಾಭವಾದ ಭ್ರಮೆ ಹುಟ್ಟಬಹುದಾದರೂ ಅದರಿಂದ ಸಮಾಜಕ್ಕೆ ಆರ್ಥಿಕ ಲಾಭಕ್ಕಿಂತ ನಷ್ಟವೇ ಅಧಿಕವಾಗಿರುತ್ತದೆ. ಕೆಲಸದ ಸರಿಯಾದ ಮಾಹಿತಿಯಿರದ, ಪರಿಣತಿ ಹೊಂದಿರದ ಚಿಕ್ಕ ಮಕ್ಕಳು ಪ್ರೌಢ ಕಾರ್ಮಿಕರುಗಳಂತೆ ದುಡಿಯಲಾರರು. ಎಳೆಯ ವಯಸ್ಸಿನಲ್ಲಿ ದುಡಿತಕ್ಕೆ ಒಳಗಾಗುವ ಮಕ್ಕಳ ದೈಹಿಕ ಬೆಳವಣಿಗೆ ಸಮರ್ಪಕವಾಗಿ ನಡೆಯದೆ ಕೆಲವೇ ವರ್ಷಗಳಲ್ಲಿ ಅವರು ಶಕ್ತಿಹೀನರಾಗಿ, ದುಡಿಯುವ ಸಾಮರ್ಥ್ಯವನ್ನು ಕಳೆದುಕೊಳ್ಳುವುದುಂಟು. ನಿರೀಕ್ಷಿತ ಮಟ್ಟದ ದೈಹಿಕ ಬೆಳವಣಿಗೆ, ಶಿಕ್ಷಣ ಹಾಗೂ ತರಬೇತಿ ಪಡೆಯುವ ಮುನ್ನವೇ ಈ ಮಂದಿ ಉದ್ಯೋಗ ರಂಗಕ್ಕೆ ಕಾಲಿರಿಸುವುದರಿಂದ ಅವರ ದುಡಿಯುವ ಸಾಮರ್ಥ್ಯ, ದುಡಿಮೆಯ ಪಕ್ವತೆ ಕೆಳಮಟ್ಟದ್ದಾಗಿರುತ್ತದೆ. ಅವರ ಶಿಕ್ಷಣದ ಸ್ಥಗಿತ್ಯದಿಂದಾಗಿ ಉದ್ಯೋಗ ಪ್ರಪಂಚದ ಹಲವಾರು ಕ್ಷೇತ್ರಗಳನ್ನು ಪ್ರವೇಶಿಸುವ ಅರ್ಹತೆಯನ್ನು ಪಡೆಯುವುದು ಅಸಾಧ್ಯವಾಗುವುದು. ಅಂದರೆ, ಮಕ್ಕಳ ದುಡಿತದಿಂದ ಪ್ರಸಕ್ತ ಪರಿಸ್ಥಿತಿಯಲ್ಲಿ ಸಮಾಜಕ್ಕೆ ಒಂದು ಬಗೆಯ ಅಗೋಚರ ನಷ್ಟ ಉಂಟಾಗುವುದಲ್ಲದೆ ಭವಿಷ್ಯತ್ತಿನಲ್ಲಿಯೂ ಕೆಲವು ಬಗೆಯಲ್ಲಿ ಹಾನಿಯುಂಟಾಗುವುದು.

**ಮಕ್ಕಳ ದುಡಿತದ ದುಷ್ಪರಿಣಾಮಗಳು: ಈಲಿಯಟ್ ಮತ್ತು ಮೆರ್ರಿಲ್‌ರವರ ವ್ಯಾಖಾನ**

ಈಲಿಯಟ್ ಮತ್ತು ಮೆರ್ರಿಲ್ ಎಂಬ ಸಮಾಜಶಾಸ್ತ್ರಜ್ಞರು "ಸೋಶಿಯಲ್ ಡಿಸ್‌ಆರ್ಗನೈಸೇಶನ್" ಎಂಬ ತಮ್ಮ ಪುಸ್ತಕದಲ್ಲಿ ಮಕ್ಕಳ ದುಡಿತದ ದುಷ್ಪರಿಣಾಮಗಳನ್ನು–ದೈಹಿಕ, ಮಾನಸಿಕ ಹಾಗೂ ನೈತಿಕ ಸಂಕಷ್ಟಗಳೆಂದು ಮೂರು ಮುಖ್ಯಪ್ರಕಾರಗಳಾಗಿ ವಿಂಗಡಿಸಿ ವಿಶ್ಲೇಷಿಸಿದ್ದಾರೆ.

**(i) ಮಕ್ಕಳ ದುಡಿತದಿಂದ ಉಂಟಾಗುವ ದೈಹಿಕ ತೊಂದರೆಗಳು**

5 ರಿಂದ 15ನೇ ವರ್ಷದೊಳಗಿನ ಮಕ್ಕಳು ದುಡಿತಕ್ಕೆ ಒಳಗಾದಾಗ ಅವರ ದೈಹಿಕ ಬೆಳವಣಿಗೆ ಸಹಜವಾದ ಗತಿಯಲ್ಲಿ ಆಗದೆ ಅವರು ದೊಡ್ಡ ಸಂಖ್ಯೆಯಲ್ಲಿ ದೈಹಿಕ ದುರ್ಬಲತೆಗೆ ಹಾಗೂ ರೋಗರುಜಿನಗಳಿಗೆ ಒಳಗಾಗುವರು. ಪ್ರೌಢ ಕಾರ್ಮಿಕರುಗಳಿಗಿಂತಲೂ ಇವರು ಹೆಚ್ಚಿನ ಸಂಖ್ಯೆಯಲ್ಲಿ ಕಾಯಿಲೆಗಳಿಗೆ ಹಾಗೂ ಅಪಘಾತಗಳಿಗೆ ಬಲಿಯಾಗುವರು. ಉತ್ತಮ ಪೌಷ್ಠಿಕ ಆಹಾರಾಂಶಗಳನ್ನು ಸೇವಿಸುತ್ತಾ, ಶಿಕ್ಷಣ–ಕ್ರೀಡೆ–ವಿನೋದಗಳಲ್ಲಿ ಕಾಲಕಳೆಯುವ ಸಮಯದಲ್ಲಿಯೇ ಇವರುಗಳು ದುಡಿತಕ್ಕೊಳಗಾಗುತ್ತಾರಾದ್ದರಿಂದ ಇವರ ದೈಹಿಕ ಸಾಮರ್ಥ್ಯ ಬಹುಬೇಗನೆ ಕುಂದಿ ಹೋಗುವುದು. ಇವರು ಹಲವು ಬಗೆಯ ರೋಗ–ರುಜಿನಗಳಿಗೆ ಒಳಗಾಗಿ ಜೀವನಪರ್ಯಂತ ದುಃಖಿಸಬೇಕಾಗುವುದು.

ಮಕ್ಕಳನ್ನು ದುಡಿಮೆಗೆ ಬಳಸಿಕೊಳ್ಳುವ ಉದ್ಯೋಗಪತಿಗಳು ಯಾವಾಗಲೂ ತಮ್ಮ ಸಂಪತ್ತು ಹಾಗೂ ಲಾಭಾಂಶವನ್ನು ಹೆಚ್ಚಿಸಿಕೊಳ್ಳುವ ವಿಚಾರದಲ್ಲಿಯೇ ಮುಳುಗಿರುತ್ತಾರಾದ್ದರಿಂದ ಈ ಮಕ್ಕಳನ್ನು ಅಮಾನುಷವಾಗಿ ನಡೆಸಿಕೊಳ್ಳುತ್ತಾ, ದಿನವೊಂದಕ್ಕೆ 10–12 ಗಂಟೆಗಳ ಕಾಲ ಅವರನ್ನು ದುಡಿಯುವಂತೆ ಮಾಡುತ್ತಾ, ಕೆಲಸದ ನಡುವೆ ಮಕ್ಕಳು ಕುಳಿತಲ್ಲಿ, ನಿಂತಲ್ಲಿ, ವಿಶ್ರಾಂತಿ ತೆಗೆದುಕೊಂಡಲ್ಲಿ ಅಂತಹವರುಗಳನ್ನು ದೈಹಿಕವಾಗಿ ದಂಡಿಸುತ್ತಾ–ಹಲವಾರು ಬಗೆಯ ಪೀಡನೆಗಳಿಗೆ ಒಳಪಡಿಸುವರು.

**(ii) ಮಕ್ಕಳ ದುಡಿತದ ಮಾನಸಿಕ ದುಷ್ಪರಿಣಾಮಗಳು**

ಎಳೆಯ ವಯಸ್ಸಿನಲ್ಲಿಯೇ ಒತ್ತಾಯದ ದುಡಿತಕ್ಕೆ ಒಳಗಾಗುವ ಮಕ್ಕಳ ಮಾನಸಿಕ ಹಾಗೂ ಬೌದ್ಧಿಕ ಬೆಳವಣಿಗೆ ತೃಪ್ತಿಕರವಾಗಿರುವುದು ಸಾಧ್ಯವಿಲ್ಲ. ನಾಗರಿಕ ಜೀವನದ ಅವಿಭಾಜ್ಯ ಅಂಗವಾಗಿರುವ ವಿದ್ಯೆಯಿಂದಲೇ ಅವರು ವಂಚಿತರಾಗಿರುವರು. ತಮ್ಮಲ್ಲಿರಬಹುದಾದ ಆಂತರಿಕ ಪ್ರತಿಭೆಯನ್ನು ವಿಕಾಸಗೊಳಿಸಿಕೊಳ್ಳಲು. ಸಾಹಿತ್ಯ, ಕಲೆ, ಸೌಂದರ್ಯ, ಮನೋರಂಜನೆ, ವಿಜ್ಞಾನ, ತಂತ್ರಜ್ಞಾನ, ಮುಂತಾದ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಕನಿಷ್ಟ ಮಟ್ಟದ ಶಿಕ್ಷಣ ಹಾಗೂ ತರಬೇತಿಯನ್ನು ಪಡೆಯಲು ಅನರ್ಹರು ಹಾಗೂ ಅಸಮರ್ಥರೂ ಆಗಿರುವ ಈ ಮಂದಿ ಜೀವನದಲ್ಲಿ ಮಾನಸಿಕ ಸಂತೃಪ್ತಿಯನ್ನು ಪಡೆಯುವುದು ಬಹಳ ಕಷ್ಟ. ಮನಸ್ಸಿನಲ್ಲಿ ವಿಭಿನ್ನ ತೆರನಾದ ಭಾವನೆಗಳು ಮೂಡುವ ಮುನ್ನವೇ ದುಡಿಮೆಯ ಒತ್ತಡಕ್ಕೆ ಬಲಿಯಾಗಿರುವುದರಿಂದ ಇವರುಗಳು ಮಾನಸಿಕ ಗೊಂದಲ ಹಾಗೂ ಜಿಗುಪ್ಸೆಗೆ ಒಳಗಾಗುವ ಸಾಧ್ಯತೆಯಿರುತ್ತದೆ. ಪರಿಣಾಮವಾಗಿ, ಇವರು ದಾರಿತಪ್ಪಿದ ವರ್ತನೆಗೆ ತೊಡಗುವ ಸಂಭಾವ್ಯತೆಯೂ ಅಧಿಕವಾಗಿದೆ.

**(iii) ಮಕ್ಕಳ ದುಡಿತದ ನೈತಿಕ ದುಷ್ಪರಿಣಾಮಗಳು**

ದುಡಿಯುವ ಮಕ್ಕಳ ಸಾಮಾಜೀಕರಣವು ಅಸಮರ್ಪಕವಾಗಿರುವುದರಿಂದ ಅವರು ಬಹು ಬೇಗನೆ ದುಷ್ಟ ಚಟಗಳಿಗೆ ಹಾಗೂ ಕೆಟ್ಟ ಸಹವಾಸಗಳಿಗೆ ಬಲಿಯಾಗುವರು. ನೈತಿಕ ಮೌಲ್ಯಗಳನ್ನು ಅವರಲ್ಲಿ ಬಲವಾಗಿ ಮೂಡಿಸುವ ಪ್ರಯತ್ನವು ನಡೆಯದೇ ಇರುವುದರಿಂದಾಗಿ ಈ ಮಕ್ಕಳು ಬೀಡಿ–ಸಿಗರೇಟು, ಶರಾಬು ಕುಡಿಯುವುದು, ಹಮ ಕದಿಯುವುದು, ಜೂಜಾಡುವುದು, ಗಾಂಜಾ ಸೇವಿಸುವುದು, ಅನೈತಿಕವಾದ ಲೈಂಗಿಕ ಚಟುವಟಿಕೆಗಳಲ್ಲಿ ತೊಡಗುವುದು, ಮುಂತಾದ ದುಶ್ಚಟಗಳಿಗೆ ಒಳಗಾಗುವರು. ಮಾತ್ರವಲ್ಲ, ಇಂತಹ ಮಕ್ಕಳು ಅಪ್ರಾಮಾಣಿಕರಾಗಿ, ಚರಿತ್ರಹೀನರಾಗಿ, ಸಮಾಜಘಾತುಕರಾಗಿ ರೂಪುಗೊಳ್ಳುವರೆಂದು ಹೇಳಲಾಗದಿದ್ದರೂ ಅವರು ದುಡಿಯುವ ಪರಿಸರ ಹಾಗೂ ಪರಿಸ್ಥಿತಿಗಳಿಂದಾಗಿ ಗಣನೀಯ ಸಂಖ್ಯೆಯ ಮಕ್ಕಳು ಹಾಗೆ ಸಮಾಜಕ್ಕೊಂದು ಹೊರೆಯಾಗಿ ರೂಪುಗೊಳ್ಳುವ ಸಾಧ್ಯತೆಯಿದೆ.

ಈ ಮೇಲೆ ವಿವರಿಸಲಾಗಿರುವಂತೆ ಮಕ್ಕಳ ದುಡಿತವು ಬಹಳ ಭಯಾನಕವಾದ ಪರಿಣಾಮಗಳಿಗೆ ಕಾರಣವಾಗುತ್ತಿದೆ. ಮಕ್ಕಳ ತಂದೆ–ತಾಯಿಯರೇ ಕೇವಲ ಹಣದಾಸೆಗಾಗಿ ತಮ್ಮ ಮಕ್ಕಳನ್ನು ಒತ್ತೆ ಇಡುವ, ಜೀತಕ್ಕಿರಿಸುವ, ಕಾರ್ಖಾನೆಗಳಲ್ಲಿ, ಗಣಿಗಳಲ್ಲಿ ದುಡಿಯುವಂತೆ ಮಾಡುವ ಪರಿಸ್ಥಿತಿ ದೇಶದಲ್ಲಿ ಇಂದಿಗೂ ಇರುವುದು ಬಹಳ ದುರದೃಷ್ಟಕರ, ಕಾರ್ಖಾನೆಗಳ ಮಾಲೀಕರು ಕೂಡ ಬಾಲಕಾರ್ಮಿಕರ ರಕ್ಷಣೆಯ ಬಗ್ಗೆ ಕಿಂಚಿತ್ತೂ ಜವಾಬ್ದಾರಿ ತೆಗೆದುಕೊಳ್ಳದೆ ಇರುವುದರಿಂದ ಅವರ ದುಃಸ್ಥಿತಿ ಇನ್ನಷ್ಟು ಹೆಚ್ಚಿದೆ. ಉದಾ: ಗಾಜಿನ ಕಾರ್ಖಾನೆಗಳಲ್ಲಿ ದುಡಿಯುವ ಮಕ್ಕಳಿಗೆ ಕನ್ನಡಕವನ್ನಾಗಲೀ, ಕೈಗಳಿಗೆ ಕೈಚೀಲಗಳನ್ನಾಗಲೀ ಒದಗಿಸದೆ ಉಸಿರುಕಟ್ಟುವಂತಹ ಕೊಠಡಿಗಳಲ್ಲಿ ದುಡಿಸುವುದು. ಉಷ್ಣಾಂಶವನ್ನು ನಿಯಂತ್ರಿಸುವ, ಶುದ್ಧಗಾಳೀ ಸೇವನೆಗೆ ಅವಕಾಶವಿರುವ ವ್ಯವಸ್ಥೆಗಳನ್ನು ಕಲ್ಪಿಸದ ಮಕ್ಕಳನ್ನು ನರಳುವಂತೆ ಮಾಡುವುದು. ಸುಟ್ಟ ಗಾಯ, ರಕ್ತಹೀನತೆ, ಕಣ್ಣಿನ ರೋಗ, ಶ್ವಾಸಕೋಶ ಸಂಬಂಧಿತ ರೋಗಗಳಿಂದ ಬಾಲ ಕಾರ್ಮಿಕರು ಬವಣೆ ಪಡುತ್ತಿದ್ದರೂ ಸೂಕ್ತವಾದ ವೈದ್ಯಕೀಯ ಸೌಲಭ್ಯ ಕಲ್ಪಿಸದೇ ಇರುವುದು – ಇವೆಲ್ಲಾ ಇಂದಿಗೂ ಮುಂದುವರಿದಿದೆ. ಆಳವಾದ ಗಣಿಗಳಲ್ಲಿ ಕೆಲಸ ಮಾಡುವ ಮಕ್ಕಳಂತೂ ಪ್ರತಿನಿತ್ಯವೂ ಪ್ರಾಣಾಪಾಯಕ್ಕೆ ಒಳಗಾಗುವ ಪರಿಸರದಲ್ಲಿಯೇ ದುಡಿಯಬೇಕಾಗಿದೆ. ಈಗ ಜಾರಿಯಲ್ಲಿರುವ ಕಾರ್ಮಿಕ ಕಾಯ್ದೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸದೇ ಇರುವುದರಿಂದ ಕಾನೂನಿನ ನೆರಳಿನಲ್ಲಿಯೇ ಮಕ್ಕಳ ಶೋಷಣೆ ನಡೆದಿದೆ. ಮಕ್ಕಳ ದುಡಿತವನ್ನು ತಪ್ಪಿಸುವ, ಕೊನೇಪಕ್ಷ ದುಡಿಯುವ ಮಕ್ಕಳ ಸಮಸ್ಯೆಗಳನ್ನು ಪರಿಹರಿಸುವ ಹಾಗೂ ಅವರ ದುರವಸ್ಥೆಗಳನ್ನು ದೂರಗೊಳಿಸುವ ಪ್ರಯತ್ನವು ಆದಷ್ಟು ಶೀಘ್ರವಾಗಿ ನಡೆಯಬೇಕಾಗಿದೆ.

## 5.2. ಬಾಲಕಾರ್ಮಿಕರ ಸಮಸ್ಯೆಗಳಿಗೆ ಪರಿಹಾರ ಹಾಗೂ ಕಾನೂನು ಕ್ರಮಗಳು

ಇತ್ತೀಚಿನ ವರ್ಷಗಳಲ್ಲಿ ಬಾಲಕಾರ್ಮಿಕ ಸಮಸ್ಯೆಯ ಬಗೆಗೆ ಸಂಶೋಧಕರ, ಸಮಾಜ ಕಾರ್ಯಕರ್ತರ, ಮಾಧ್ಯಮ ತಜ್ಞರ ನ್ಯಾಯಾಲಯಗಳ ಗಮನವನ್ನು ಸೆಳೆದಿವೆ. ಸರ್ಕಾರದ ಹಾಗೂ ಸರ್ಕಾರೇತರ ಸಂಸ್ಥೆಗಳ ಆಶ್ರಯದಲ್ಲಿ ಅನೇಕ ಸಂಶೋಧನಾ ಅಧ್ಯಯನಗಳನ್ನೂ ಕೈಕೊಳ್ಳಲಾಗಿದೆ. ಸರ್ಕಾರವು ಸಂವಿಧಾನಾತ್ಮಕ ಹಾಗೂಶಾಸನಾತ್ಮಕ ಕ್ರಮಗಳನ್ನು ಜಾರಿಗೆಗೊಳಿಸಿದೆ. ಬಾಲಕಾರ್ಮಿಕರ ಶೋಷಣೆ ಮತ್ತು ಅವರ ಶೋಚನೀಯ ದುಸ್ಥಿತಿಯ ಬಗ್ಗೆ ಸಮಾಜ ಕಾರ್ಯಕರ್ತರು ತಮ್ಮ ಕಳವಳ ವ್ಯಕ್ತಪಡಿಸಿದ್ದಾರೆ. ವೃತ್ತಪತ್ರಿಕೆಗಳು, ನಿಯತಕಾಲಿಕೆಗಳು, ಬಾನುಲಿ ಮತ್ತು ಟೆಲಿವಿಷನ್ ಮಾಧ್ಯಮಗಳು ಈ ಸಮಸ್ಯೆಗೆ ಸೂಕ್ತ ಸಮಯವನ್ನು ಪ್ರಾಮುಖ್ಯತೆಯನ್ನು ನೀಡುತ್ತದೆ. ಮಕ್ಕಳ ದುಡಿತಕ್ಕೆ ಸಂಬಂಧಿಸಿದ ವಿವಿಧ ಪರಿಹಾರೋಪಾಯಗಳು ಈ ಕೆಳಗಿನಂತಿವೆ.

**ಸಂವಿಧಾನಾತ್ಮಕ ಸೌಲಭ್ಯಗಳು**

- ಸಂವಿಧಾನದ 24ನೆಯ ವಿಧಿಯ ಪ್ರಕಾರ 14ವರ್ಷಕ್ಕೂ ಕಡಿಮೆ ವಯಸ್ಸಿನ ಮಕ್ಕಳನ್ನು ಯಾವುದೇ ಕಾರ್ಖಾನೆ ಅಥವಾ ಗಣಿಯಲ್ಲಿ ಕೆಲಸಕ್ಕೆ ನೇಮಿಸಬಾರದು ಅಥವಾ ಇನ್ನಾವುದೇ ಅಪಾಯಕಾರಿ ಕೆಲಸದಲ್ಲಿ ತೊಡಗಬಾರದು.
- ಸಂವಿಧಾನದಲ್ಲಿ ಸೂಚಿತವಾಗಿರುವ ರಾಜ್ಯ ನಿರ್ದೇಶಕ ತತ್ವಗಳು ಕೂಡ ಎಳೆಯ ವಯಸ್ಸಿನ ಮಕ್ಕಳಿಗೆ ಕೇಡು ಉಂಟಾಗದಂತೆ ಹಾಗೂ ಪ್ರಜೆಗಳು ಆರ್ಥಿಕ ಪರಸ್ಥಿತಿಗಳಿಂದಾಗಿ ತಮ್ಮ ವಯಸ್ಸು ಅಥವಾ ಶಕ್ತಿಗೆ ಮೀರಿದ ಕೆಲಸವನ್ನು ಮಾಡಬೇಕಾದ ಅನಿವಾರ್ಯತೆ ಉಂಟಾಗದಂತೆ ರಾಜ್ಯಾಧಿಕಾರ ನೋಡಿಕೊಳ್ಳಬೇಕೆಮದು ಸಂವಿಧಾನದ 39(ಇ)ನೆ ವಿಧಿ ನಿರ್ದೇಶಿಸುತ್ತದೆ. ಬಾಲ್ಯ ಹಾಗೂ ಯೌವನವನ್ನು ಶೋಷಣೆಯ ವಿರುದ್ಧ ಹಾಗೂ ನೈತಿಕವಾಗಿ ಮತ್ತು ದೈಹಿಕವಾಗಿ ಕೈಬಿಡುವುದರ ವಿರುದ್ಧ ರಕ್ಷಿಸಬೇಕಾದ ಅಗತ್ಯವನ್ನು 39(ಎಫ್)ವಿಧಿ ಒತ್ತಿ ಹೇಳಿದೆ.
- ಸಂವಿಧಾನದ 45ನೇ ವಿಧಿಯು 14 ವರ್ಷ ತುಂಬುವವರೆಗೆ ಎಲ್ಲ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಒದಗಿಸಬೇಕೆಂದು ಎಲ್ಲಾ ರಾಜ್ಯಗಳಿಗೆ ನಿರ್ದೇಶನ ನೀಡುತ್ತದೆ.
- ಮಹಿಳೆಯರು ಮತ್ತು ಮಕ್ಕಳಿಗೆ ಯಾವುದೇ ವಿಶೇಷ ಸೌಲಭ್ಯಗಳನ್ನು ರಾಜ್ಯಾಧಿಕಾರ ಕಲ್ಪಿಸುವುದಕ್ಕೆ ಯಾವುದೇ ಅಡ್ಡಿ ಆತಂಕಗಳನ್ನು ಉಂಟು ಮಾಡಬಾರದೆಂದು ಸಂವಿಧಾನದ 15(3)ನೆ ವಿಧಿ ತಿಳಿಸುತ್ತದೆ.
- ಕೆಲವು ರೀತಿಯ ಶೋಷಣೆಯ ವಿರುದ್ಧ 23ನೆ ವಿಧಿ ಮೂಲಭೂತ ಹಕ್ಕನ್ನು ಒದಗಿಸುತ್ತದೆ. ಇಂತಹ ಶೋಷಣೆಗೆ ಭಾರತೀಯ ದಂಡ ಸಂಹಿತೆಯ ಪ್ರಕಾರ ಶಿಕ್ಷೆಯನ್ನೂ ಕೂಡಾ ವಿಧಿಸಬಹುದು.

**ಕಾನೂನಿನ ಕ್ರಮಗಳು**

ಸ್ವಾತಂತ್ರ್ಯ ಪೂರ್ವದ ಅವಧಿಯಲ್ಲಿ ಮತ್ತು ಸ್ವಾತಂತ್ರ್ಯದ ನಂತರದ ಅವಧಿಯಲ್ಲಿ ಬಾಲಕಾರ್ಮಿಕ ನಿಷೇಧಕ್ಕೆ ಸಂಬಂಧಿಸಿದಂತೆ ಅನೇಕ ಕಾನುನುಗಳು ಜಾರಿಗೆ ಬಂದಿವೆ. ಅವು ಈ ಕೆಳಗಿನಂತಿವೆ.

- ಕಾರ್ಖಾನೆಗಳ ಕಾಯ್ದೆ 1881

ಇದು ಬಾಲ ದುಡಿಮೆಗೆ ಸಂಬಂಧಿಸಿದ ಪ್ರಥಮ ಕಾಯ್ದೆ. ಈ ಕಾಯ್ದೆ ಪ್ರಕಾರ 7 ವರ್ಷಕ್ಕೂ ಕಡಿಮೆ ವಯಸ್ಸಿನ ಮಕ್ಕಳನ್ನು ದುಡಿತಕ್ಕೆ ಒಳಪಡಿಸಬಾರದು. ಈ ಕಾಯ್ದೆಯನ್ನು 1891ರಲ್ಲಿ ತಿದ್ದುಪಡೆ ಮಾಡಿ ವಯೋಮಿತಿಯನ್ನು 9ವರ್ಷಕ್ಕೆ ಏರಿಸಿದ್ದು ದುಡಿಮೆಯನ್ನು ದಿನವೊಂದಕ್ಕೆ 7 ಗಂಟೆಗೆ ಮೀರಕೂಡದೆಂದೂ ತಿಳಿಸಲಾಗಿದೆ.

- 1923ರ ಭಾರತೀಯ ವ್ಯಾಪಾರಿ ಹಡುಗಿನ ಕಾಯ್ದೆ

ಈ ಕಾನೂನಿನ ಪ್ರಕಾರ 14 ವರ್ಷಗಳಿಗೂ ಕಡಿಮೆ ವಯಸ್ಸಿನ ಮಕ್ಕಳನ್ನು ಹಡುಗಿನಲ್ಲಿ ದುಡಿಸುವಂತಿಲ್ಲ.

- 1938ರ ಮಕ್ಕಳನ್ನು ಉದ್ಯೋಗಕ್ಕೆ ಸೇರಿಸಿಕೊಳ್ಳುವ ಕಾಯ್ದೆ.

ಈ ಕಾನೂನಿನ ಪ್ರಕಾರ ರೈಲ್ವೆಯಲ್ಲಾಗಲಿ, ಬಂದರುಗಳಲ್ಲಾಗಲಿ ಅಥವಾ ಯಾವುದೇ ಕಾರ್ಖಾನೆಗಳಲ್ಲಿ ಮಕ್ಕಳನ್ನು ಕೆಲಸಕ್ಕೆ ಸೇರಿಸಿಕೊಳ್ಳಬಾರದೆಂದು ಹೇಳುತ್ತದೆ.

- 1948ರ ಭಾರತೀಯ ಕಾರ್ಖಾನೆಗಳ ಕಾಯ್ದೆ.

ಈ ಕಾಯ್ದೆಯು ಮಕ್ಕಳ ದುಡಿತಕ್ಕೆ ಸಂಬಂಧಿಸಿದ ಮಹತ್ವದ ಕಾಯ್ದೆಯಾಗಿದ್ದು ಈ ಕಾಯ್ದೆಯೂ ಕೂಡಾ 14 ವರ್ಷಗಳಿಗೂ ಕಡಿಮೆ ವಯಸ್ಸಿನ ಮಕ್ಕಳನ್ನು ಉದ್ಯೋಗಗಳಿಗೆ ಸೇರಿಸಿಕೊಳ್ಳುವುದನ್ನು ನಿಷೇಧಿಸುತ್ತದೆ. ಈ ಕಾಯ್ದೆಯನ್ವಯ ದಿನ ಒಂದಕ್ಕೆ 5 ಗಂಟೆಗಳಿಗು ಹೆಚ್ಚಿಗೆ ಇರದೆ ಒಂದು ಪಾಳಿ (ಸರದಿ) ಕೆಲಸವನ್ನು ಮಾತ್ರ ಮಾಡಬೇಕಾಗುತ್ತದೆ. ಇದರ ಜೊತೆಗೆ ರಾತ್ರಿ 7 ಗಂಟೆಯಿಂದ ಬೆಳಿಗ್ಗೆ 6 ಗಂಟೆಗಳ(ರಾತ್ರಿ ಪಾಳಿಯಲ್ಲಿ)ವರೆಗೆ ಮಕ್ಕಳನ್ನು ದುಡಿಸುವಂತಿಲ್ಲ. ಮೇಲೆ ತಿಳಿಸಿರುವ ಕಾಯ್ದೆ ಕಾನೂನುಗಳನ್ನು ಭಾರತ ಸರ್ಕಾರವು ಮರುಪರಿಶೀಲಿಸಿ ಅವುಗಳಲ್ಲಿ ಸೂಕ್ತವಾದ ಮಾರ್ಪಾಡುಗಳನ್ನು ಮಾಡಿ ಅವುಗಳನ್ನು ಜಾರಿಗೆ ತಂದರೂ ಮಕ್ಕಳ ದುಡಿತ ಎಷ್ಟೋ ಕಾರ್ಖಾನೆಗಳಲ್ಲಿ ಮುಂದುವರೆಯುತ್ತಿದೆ. ಇಂದಿಗೂ ಕೂಡಾ ಹೋಟೆಲ ಮತ್ತು ಗುಡಿ ಕೈಗಾರಿಕೆಗಳಲ್ಲಿ ಬೆಳಿಗ್ಗೆ 4 ರಿಂದ ರಾತ್ರಿ 12ರ ವರೆಗೆ ಮಕ್ಕಳನ್ನು ದುಡಿಸಿಕೊಳ್ಳಲಾಗುತ್ತಿದ್ದು, ಬಾಲಕಲ್ಯಾಣ ಕಾರ್ಯಕ್ರಮಗಳು ಪರಿಣಾಮಕಾರಿಯಾಗಿಲ್ಲ. ಅತಿ ಹೆಚ್ಚು ಶೋಷಣೆಗೊಳಗಾದ 10 ಪ್ರಮುಖ ಕಾರ್ಖಾನೆಗಳ

ಯೋಜನೆಗಳನ್ನು ಕೈಗೆತ್ತಿಕೊಂಡು ಕಾನೂನುಗಳನ್ನು ಕಟ್ಟುನಿಟ್ಟಾಗಿ ಪಾಲಿಸಲು ಆದೇಶ ನೀಡಿದಾಗಲೂ ಯಾವುದೇ ಪ್ರಯೋಜವಾಗುತ್ತಿಲ್ಲ.

ಬಾಲಕಾರ್ಮಿಕರ ಕಾನೂನುಗಳನ್ನು ಕಳಪೆಯಾಗಿ ಜಾರಿಗೆ ತರುವುದಕ್ಕೆ ಪರಿಶೀಲನಾ ಸಿಬ್ಬಂದಿಯ ನಿಲುವು ಸಹ ಕಾರಣ. ತಮಿಳುನಾಡಿನ ಶಿವಕಾಶಿಯ ಒಬ್ಬ ಸಬ್ ಇನ್ಸ್‌ಪೆಕ್ಟರ್ ಹೀಗೆ ಹೇಲುತ್ತಾರೆ.

'ಆಯೋಗಗಳನ್ನು ನೇಮಿಸಬಹುದು, ಅಧ್ಯಯನಗಳನ್ನು ನಡೆಸಬಹುದು, ನೀತಿ ತಯಾರಿಸುವವರೂ, ಯೋಜನೆ ಮಾಡುವವರೂ, ಶಿವಕಾಶಿಗೆ ಭೇಟ್ಟಿಕೊಡಬಹುದು. ಬೆಂಕಿಕಡ್ಡಿ ಕೈಗಾರಿಕೆಗಳಿಗೆ ತಮ್ಮ ಮಕ್ಕಳನ್ನು ಕಳಿಸುವ ತಂದೆ- ತಾಯಿಂದರ ನಿಲವುಗಳನ್ನು ಯಾರಾದರೂ ಬದಲಾಯಿಸಲು ಸಾಧ್ಯವೇ? ಅವರ ಮಕ್ಕಳು ಕಾರ್ಖಾನೆಗೆ ಹೋಗದಂತೆ ಮಾಡಿದರೆ ನಮ್ಮನ್ನು ಅವರು ಶತ್ರುಗಳಂತೆ ಕಾಣುತ್ತಾರೆ. ತಂದೆ-ತಾಯಿಂದಿರು ಗುಂಪು-ಗುಂಪಾಗಿ ಒಂದು ಪ್ರತಿಭಟಿಸುತ್ತಾರೆ. ಕೆಲವೊಮ್ಮೆ ಬೆದರಿಸಿಯೂ ಬೆದರಿಸುತ್ತಾರೆ. ಕೆಲವು ಸ್ಥಳಗಳಲ್ಲಿ ಮಾಲೀಕರು ಮತ್ತು ಪರಿಶೀಲನಾ ಸಿಬ್ಬಂದಿಯ ನಡುವೆ ಸಂಬಂಧ ಬೆಳೆದು ಬಾಲಕಾರ್ಮಿಕ ಕಾನೂನುಗಳನ್ನು ಸಂಪೂರ್ಣವಾಗಿ ಅಲಕ್ಷ ಮಾಡಲಾಗುತ್ತದೆ. ಈ ಮತು ಮಂಗಳೂರಿನ ಬೀಡಿ ತಯಾರಿಕಾ ಘಟಕಕ್ಕೂ ಅನ್ವಯಿಸುತ್ತದೆ. ಕೇವಲ ಕಾನೂನುಗಳನ್ನು ಜಾರಿಗೆ ತಂದೆ- ತಾಯಿಗಳು ತಮ್ಮ ಮನಸ್ಸನ್ನೂ ಬದಲಾಯಿಸಿಕೊಳ್ಳುವುದು ಇಲ್ಲಿ ಅಗತ್ಯವಾಗಿದೆ.

**ಮಕ್ಕಳನ್ನು ಕುರಿತಾದ ರಾಷ್ಟ್ರೀಯ ಧೋರಣೆ**

ಮಕ್ಕಳ ಸರ್ವೋತಮುಖ ಅಭಿವೃದ್ಧಿಯನ್ನು ಸಾಧಿಸಲು ವಿಶ್ವಸಂಸ್ಥೆಯ ಕರೆಯ ಮೇರೆಗೆ ಭಾರತ ಸರ್ಕಾರವು 1974ರ ಆಗಸ್ಟ್ 22ರಂದು ಮಕ್ಕಳ ರಾಷ್ಟ್ರೀಯ ಧೋರಣೆಯೊಂದನ್ನು ರೂಪಿಸಿತು. ಈ ಧೋರಣೆಯನ್ನು ಸ್ಪಷ್ಟವಾಗಿ ಹೇಳಿರುವಂತೆ ಮಕ್ಕಳು ರಾಷ್ಟ್ರದ ಪ್ರಮುಖ ಆಸ್ತಿಯೆಂದು ಬಣ್ಣಿಸಿದ್ದು ಮಕ್ಕಳ ಭೌತಿಕ ಅಥವಾ ಶಾರೀರಿಕ, ಮಾನಸಿಕ, ಶೈಕ್ಷಣಿಕ ಹಾಗೂ ನೈತಿಕ ದೃಷ್ಟಿಯಿಂದ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳಬೇಕೆಂದು ತಿಳಿಸಲಾಗಿದೆ. ಮುಂದುವರೆದು ತಿಳಿಸುತ್ತಾ 14ನೆಯ ವಯಸ್ಸಿನವರಿಗೆ ಎಲ್ಲ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣದ ಪ್ರಾಮುಖ್ಯತೆಯನ್ನು ರಾಷ್ಟ್ರೀಯ ನೀತಿ ಒತ್ತಿ ಹೇಳಿದೆ. ಮಕ್ಕಳಿಗೆ ಆರೋಗ್ಯ ಮತ್ತು ಪುಷ್ಟಿಕರ ಶಾಹಾರದ ಸೌಕರ್ಯ, ಔಪಚಾರಿಕ ಶಾಲಾ ಶಿಕ್ಷಣದ ಪೂರ್ಣ ಉಪಯೋಗವನ್ನು ಪಡೆದುಕೊಳ್ಳಲು ಅಸಮರ್ಥರಾದ ಮಕ್ಕಳಿಗೆ ಬದಲಿ ಶಿಕ್ಷಣದ ವ್ಯವಸ್ಥೆಗಳನ್ನು ಒದಗಿಸುವುದು, ಅಲಕ್ಷ, ಕ್ರೌರ್ಯ ಮತ್ತು ಶೋಷಣೆಯ ವಿರುದ್ಧ ಮಕ್ಕಳನ್ನು ರಕ್ಷಿಸಲು ಕ್ರಮಗಳನ್ನು ಕೈಕೊಳ್ಳುವುದನ್ನು ನೀತಿಯಲ್ಲಿ ಅಳವಡಿಸಲಾಗಿದೆ.

ಸಂವಿಧಾನದ ನಿರ್ದೇಶನಗಳು ಮತ್ತು ಅದರ ಕೆಳಗೆ ಮಾಡಿದ ಕಾನೂನುಗಳ ಮೇರೆಗೆ ಭಾರತ ಸರ್ಕಾರವು 1987ರಲ್ಲಿ ರಾಷ್ಟ್ರೀಯ ಬಾಲಕಾರ್ಮಿಕ ನೀತಿಯನ್ನು ರಚಿಸಿತು. ರಾಷ್ಟ್ರೀಯ ಬಾಲಕಾರ್ಮಿಕ ತಂತ್ರಜ್ಞಾನ ಸಲಹಾ ಸಮಿತಿಗಳನ್ನು ರಚಿಸಿ ಯಾವ ಪ್ರದೇಶಗಳಲ್ಲಿ ಬಾಲದುಡಿಮೆ ಹೆಚ್ಚಾಗಿದೆಯೋ ಅಲ್ಲಿ

ವರಮಾನ ಗಳಿಕೆ ಮತ್ತು ಉದ್ಯೋಗ ಸೃಷ್ಟಿಸುವಂತಹ ಅಭಿವೃದ್ಧಿ ಕಾರ್ಯಕ್ರಮಳನ್ನು ತೀವ್ರಗೊಳಿಸುವುದು ಮತ್ತು ಮಕ್ಕಳನ್ನು ದುಡಿಸಿಕೊಳ್ಳುವ ಅಪಾಯಕಾರಿ ಕೈಗಾರಿಕೆಗಳನ್ನು ಗುರುತಿಸಿ ಸರಿಯಾದ ಕ್ರಮಗಳನ್ನು ಕೈಕೊಳ್ಳಬೇಕೆಂದು ತಿಳಿಸಿದೆ.

**ಅಂತರಾಷ್ಟ್ರೀಯ ಮಕ್ಕಳ ವರ್ಷ 1979**

ವಿಶ್ವಸಂಸ್ಥೆಯ ಸಾಮಾನ್ಯ ಸಭೆಯ ಗೊತ್ತುವಳಿಯ ಪ್ರಕಾರ 1979ರ ವರ್ಷವನ್ನು ಅಂತರಾಷ್ಟ್ರೀಯ ಮಕ್ಕಳ ವರ್ಷವನ್ನಾಗಿ ಆಚರಿಸಬೇಕೆಂದು ತಿಳಿಸಿತು. ಪ್ರತಿಯೊಂದು ದೇಶವು ಮಕ್ಕಳ ಸಮಸ್ಯೆಗಳನ್ನು ಅರಿತು ಮಕ್ಕಳ ಕಲ್ಯಾಣಕ್ಕೆ ಸಂಬಂಧಿಸಿದ ವಿವಿಧ ಯೋಜನೆಗಳನ್ನು ಅನುಷ್ಠಾನಕ್ಕೆ ತರಬೇಕೆಂದು ತಿಳಿಸಿದೆ. ಈ ಸಂದರ್ಭದಲ್ಲಿ ಜಗತ್ತಿನಲ್ಲಿರಬಹುದಾದ ಎಲ್ಲಾ ಜನರಿಗೂ ಅವಕಾಶವೊಂದನ್ನು ಕಲ್ಪಿಸಿ ತಮ್ಮ ಮಕ್ಕಳ ಹಕ್ಕುಗಳನ್ನು 'ಜೀವಂತ ವಾಸ್ತವಿಕೆಯಾಗಿ(a living reality) ಪರಿವರ್ತಿಸುವುದಕ್ಕೆ ಅಗತ್ಯವಾದ ಕಾರ್ಯಚಟುವಟಿಕೆಗಳನ್ನೂ ಕೈಗೊಳ್ಳಲು ತಿಳಿಸಲಾಗಿದೆ.

**ಮಕ್ಕಳ ಹಕ್ಕುಗಳಿಗೆ ಸಂಬಂಧಿಸಿದ ಅಂತರಾಷ್ಟ್ರೀಯ ಒಡಂಬಡಿಕೆ– 1989**

1989ರಲ್ಲಿ ಮಾನವ ಹಕ್ಕುಗಳು (Human Right) ಆಯೋಗವು ಮಗುವಿನ ಹಕ್ಕುಗಳನ್ನು ಕುರಿತು ಒಡಂಬಡಿಕೆಯೊಂದನ್ನು ಅಂಗೀಕರಿಸಿತು. ಈ ಒಡಂಬಡಿಕೆಯು ಮುಖ್ಯವಾಗಿ 3 ತತ್ವಗಳನ್ನು ಒಳಗೊಂಡಿದೆ. ಅವು ಯಾವುವೆಂದರೆ

ವಯಸ್ಕರಿಗೆ ಒದಗಿಸಿರುವ ರಕ್ಷಣೆಗಳನ್ನು ಮಿರಿದ ವಿಶೇಷ ಸೌಲಭ್ಯಗಳನ್ನು ಒದಗಿಸುವ್ಯದು ಮಗುವಿನ ಉಳಿವು ಮತ್ತು ಬೆಳವಣಿಗೆಗೆ ಅತ್ಯುತ್ತಮ ಪರಿಸರ ಒದಗಿಸುವುದು ಸರ್ಕಾರಗಳು ಹಾಗೂ ವಯಸ್ಕ ಸಮಾಜ ಮಕ್ಕಳ ಹಿತದೃಷ್ಟಿಗೆ ಬದ್ಧರಾಗಿರಬೇಕು.

ಬಾಲ–ಬಾಲಕಿಯರನ್ನು ಉದ್ಯೋಗಕ್ಕೆ ನೇಮಿಸಿಕೊಳ್ಳುವುದನ್ನು ನಿಷೇದಿಸುವುದು(ILO) ಐ.ಎಲ್.ಓ ನ ಮೂಲಭೂತ ತತ್ವಗಳಲ್ಲಿ ಒಂದಾಗಿದೆ. ಹಾಗೆ ನೋಡಿದರೆ ಐ.ಎಲ್.ಓ ನ ಪ್ರಸ್ತಾವನೆಯಲ್ಲಿ ಬಾಲ ದುಡಿಮೆಯನ್ನು ಸಂಪೂರ್ಣವಾಗಿ ನಿಷೇಧಿಸುವ ಅಂಶವನ್ನು ಹೊಂದಲಾಗಿದೆ.

7ನೆಯ ಪಂಚವಾರ್ಷಿಕ ಯೋಜನೆಗಳಲ್ಲಿ ತಿಳಿಸಿರುವಂತೆ ಅಪಾಯಕರ ಕ್ಷೇತ್ರಗಳಲ್ಲಿ ಮಾತ್ರ ಬಾಲದುಡಿಮೆಯನ್ನು ಸುಧಾರಿಸಬೇಕೆಂದು ತಿಳಿಹೇಳಿದೆ. ಮುಂದುವರೆದು ಹೇಳುತ್ತಾ– ಯಾವ ಕುಟುಂಬಗಳಲ್ಲಿ ಮಕ್ಕಳನ್ನು ಬಲವಂತವಾಗಿ ದುಡಿಕೊಳ್ಳಲಾಗುತ್ತದೆಯೋ ಅಂತಹ ಕುಟುಂಬಗಳ ಸ್ಥಿತಿಗತಿಗಳನ್ನು ಸಾಕಷ್ಟು ಸುಧಾರಿಸಿದಾಗ ಮಾತ್ರ ಬಾಲ ದುಡಿಮೆಯನ್ನು ನಿಷೇಧಿಸುವ ಅಂತಿಮ ಗುರಿಯನ್ನು ತಲುಪಬಹುದೆಂದು ಯೋಜನೆಯ ಪರಿಪತ್ರದಲ್ಲಿ ತಿಳಿಸಲಾಗಿದೆ.

ಬಾಲಕಾರ್ಮಿಕರ ಸಮಸ್ಯೆಗೆ ಭಾರತ ಸರ್ಕಾರವು ಅನೇಕ ರೀತಿಯ ಸಂವಿಧಾನ ಬದ್ಧ ಕಾನೂನು ಹಾಗೂ ಪರಿಹಾರ ಕ್ರಮಗಳನ್ನು ಸೂಚಿಸುತ್ತದೆ. ಆ ಕಾನೂನು ಕ್ರಮಗಳು ಏನು,

ಯಾವ ವೃತ್ತಿಯಲ್ಲಿ ಮಕ್ಕಳನ್ನು ಕೆಲಸಕ್ಕೆ ಇಟ್ಟು ಕೊಳ್ಳಬಾರದು ಹಾಗೂ ಮಕ್ಕಳನ್ನು ಕೆಲಸಕ್ಕೆ ಇಟ್ಟು ಕೊಂಡರೆ ಯಾವ ಶಿಕ್ಷೆ ಎಂಬುದನ್ನು ಭಾರತದ ಸಂವಿಧಾನದಲ್ಲಿ ತಿಳಿಸುತ್ತದೆ.

ವಿಶ್ವಸಂಸ್ಥೆ ನವಂಬರ್ 20, 1989 ರಂದು ಮಕ್ಕಳ ಹಕ್ಕುಗಳ ಬಗ್ಗೆ ಒಂದು ಒಡಂಬಡಿಕೆಯನ್ನು ಮಂಡಿಸಿತು. ಇದನ್ನು ಭಾರತ ಸರ್ಕಾರ 1992 ರಲ್ಲಿ ಈ ಒಡಂಬಡಿಕೆಗೆ ಒಪ್ಪಿಗೆ ನೀಡಿತು. ಈ ಒಡಂಬಡಿಕೆಯ ಸಾರ ಸಂಗ್ರಹವನ್ನು ಈ ಕೆಳಗಿನಂತೆ ವಿವರವಾಗಿ ನೋಡಬಹುದು.

- ಸಾಮಾನ್ಯವಾಗಿ 18 ವರ್ಷದ ಕೆಳಗಿನ ಎಲ್ಲರನ್ನೂ ಮಗು, ಮಕ್ಕಳು ಎಂದು ಪರಿಗಣಿಸಲಾಗುತ್ತದೆ.
- ಜಾತಿ, ವರ್ಣ, ಲಿಂಗ, ಭಾಷೆ, ಧರ್ಮ, ರಾಜಕೀಯ ಇತ್ಯಾದಿ ಯಾವುದೇ ಆಧಾರದಲ್ಲಿ ಮಕ್ಕಳಲ್ಲಿ ಭೇದ ಭಾವ ತೋರದೆ ಮಕ್ಕಳ ಹಕ್ಕುಗಳನ್ನು ಗೌರವಿಸಬೇಕು.
- ಕಾಯಿದೆಗಳನ್ನು ರೂಪಿಸುವಾಗ ಮಕ್ಕಳ ಹಿತಾಸಕ್ತಿಗಳನ್ನು ಬಹುಮುಖ್ಯವಾಗಿ ಗಮನದಲ್ಲಿರಿಸಿ ಕೊಳ್ಳಬೇಕು.
- ಮಕ್ಕಳ ಹಕ್ಕುಗಳನ್ನು ಸರ್ಕಾರವು ಪ್ರಾಮಾಣಿಕವಾಗಿ ಜಾರಿಗೆ ತರಬೇಕು.
- ಮಕ್ಕಳ ಬಗ್ಗೆ ಪೋಷಕರ, ಹೆತ್ತವರ ಜವಾಬ್ದಾರಿ ಮತ್ತು ಹಕ್ಕುಗಳನ್ನು ಸರ್ಕಾರವು ಗೌರವಿಸಬೇಕು.
- ಮಗುವಿಗೆ ಜೀವಿಸುವ ಹಕ್ಕು ಇದೆ. ಪ್ರತಿಯೊಂದು ಮಗುವೂ ಸಾಯದೆ ಬದುಕುವ, ವಿಕಾಸ ಹೊಂದುವಂತೆ ಮಾಡುವ ಜವಾಬ್ದಾರಿ ಸರ್ಕಾರದ್ದಾಗಿದೆ.
- ಮಗುವಿನ ಹುಟ್ಟನ್ನು ನೋಂದಣಿ ಮಾಡಬೇಕು. ಅದಕ್ಕೆ ತನ್ನದೇ ಆದ ಹೆಸರು, ರಾಷ್ಟ್ರೀಯತೆ ಹೊಂದುವ ಹಕ್ಕನ್ನು, ತನ್ನ ಹೆತ್ತವರು ಯಾರು ಎಂದು ತಿಳಿದುಕೊಳ್ಳುವ, ಹೆತ್ತವರಿಂದ ಆರೈಕೆ ಪಡೆಯುವ ಹಕ್ಕನ್ನು ಹೊಂದಿದೆ.
- ಮಕ್ಕಳ ಅನನ್ಯತೆಯನ್ನು ರಕ್ಷಿಸಬೇಕು. ಅನನ್ಯತೆಯನ್ನು ಕಳೆದು ಕೊಂಡಿದ್ದರೆ ಮರಳಿ ಅದನ್ನು ದೊರಕಿಸಿಕೊಡಬೇಕು.
- ಪ್ರತಿಯೊಂದು ಮಗುವಿಗೂ ತನ್ನದೇ ಪೋಷಕರೊಂದಿಗೆ ಬದುಕುವ ಹಕ್ಕು ಇದೆ.
- ಯಾವುದೇ ದೇಶಕ್ಕೆ ಹೋಗುವ, ಮರಳಿ ಬರುವ ಮತ್ತು ತಂದೆ ತಾಯಿಯರೊಂದಿಗೆ ಸಂಪರ್ಕ ಇರಿಸಿಕೊಳ್ಳುವ ಹಕ್ಕು ಮಗುವಿಗೆ ಇದೆ.
- ಮಕ್ಕಳನ್ನು ಕಾನೂನಿಗೆ ವಿರುದ್ಧವಾಗಿ ಸ್ಥಳಾಂತರಿಸುವುದಾಗಲಿ, ಮರಳಿಸದಿರುವುದಾಗಲಿ ಕೂಡದು.

- ತನ್ನ ಹಿತಕ್ಕೆ ಸಂಬಂಧಿಸಿದ ಅಭಿಪ್ರಾಯ ವ್ಯಕ್ತಪಡಿಸುವ ಹಕ್ಕು ಮಗುವಿಗಿದೆ. ಹಿರಿಯರು ಅದನ್ನು ಆಲಿಸಿ ಪಾಲಿಸಬೇಕು.
- ಯಾವುದೇ ಮಾಧ್ಯಮಗಳ ಮೂಲಕ ಮಾಹಿತಿ ಪಡೆಯುವ, ಮಾಹಿತಿ ನೀಡುವ ಹಕ್ಕು ಮಗುವಿಗೆ ಇದೆ.
- ತನ್ನ ನಂಬಿಕೆ ಅಥವಾ ಧರ್ಮಕ್ಕೆ ಅನುಗುಣವಾಗಿ ನಡೆದು ಕೊಳ್ಳುವ ಹಕ್ಕು ಮಗುವಿಗೆ ಇದೆ.
- ಸಂಘಟಿತರಾಗಲು ಮತ್ತು ಶಾಂತ ರೀತಿಯಿಂದ ಸಭೆ ಸೇರಲು ಮಕ್ಕಳಿಗೆ ಹಕ್ಕು ಇದೆ.
- ತನ್ನ ವೈಯಕ್ತಿಕ, ಕೌಟುಂಬಿಕ ವ್ಯವಹಾರಗಳಲ್ಲಿ ಮೂರನೆಯವರು ಮೂಗು ತೂರಿಸುವುದರ ವಿರುದ್ಧ ರಕ್ಷಣೆ ಪಡೆಯುವ ಹಕ್ಕು ಮಗುವಿಗಿದೆ.
- ದೇಶದ ಮತ್ತು ಅಂತರ್ ದೇಶೀಯ ವಿವಿಧ ಮೂಲಗಳಿಂದ ಮಾಹಿತಿ ಪಡೆಯಲು ಮಕ್ಕಳಿಗೆ ಸರ್ಕಾರವು ಸೌಲಭ್ಯ ಒದಗಿಸಬೇಕು.
- ತಮ್ಮ ಮಕ್ಕಳನ್ನು ಲಾಲಿಸಿ ಪಾಲಿಸಿ ಬೆಳೆಸುವ ಜವಾಬ್ದಾರಿಯನ್ನು ತಂದೆ ತಾಯಿಯರಿಬ್ಬರೂ ಹೊಂದಿದ್ದಾರೆ.
- ಪೋಷಕರಾಗಲಿ ಅಥವಾ ಇನ್ನು ಯಾರೇ ಆಗಲಿ ಮಕ್ಕಳನ್ನು ದುರುಪಯೋಗ ಮಾಡುವಂತಿಲ್ಲ.
- ತನ್ನ ಕುಟುಂಬದಿಂದ ಬೇರ್ಪಟ್ಟ ಮಗುವಿಗೆ ಸೂಕ್ತ ಪರ್ಯಾಯ ವ್ಯವಸ್ಥೆ ರಕ್ಷಣೆಯನ್ನು ಸರಕಾರ ಒದಗಿಸಬೇಕು.
- ದತ್ತು ನೀಡುವ, ಪಡೆಯುವ ಯಾವ ವ್ಯವಹಾರದಲ್ಲಿಯೂ ಮಗುವಿಗೆ ಅನ್ಯಾಯವಾಗ ಬಾರದು.
- ನಿರಾಶ್ರಿತರಾದ, ನಿರ್ವಸಿತರಾದ ಮಕ್ಕಳಿಗೆ ಸರ್ಕಾರವು ಸೂಕ್ತ ರಕ್ಷಣೆ ಒದಗಿಸಬೇಕು.
- ಅಂಗವಿಕಲ ಮಕ್ಕಳಿಗೆ ವಿಶೇಷವಾದ ಆರೈಕೆ ಪಡೆದು ಸ್ವಾವಲಂಬನೆ ಮತ್ತು ಗೌರವದಿಂದ ಕೂಡಿದ ಜೀವನ ನಡೆಸುವ ಹಕ್ಕು ಇದೆ.
- ಅತ್ಯುತ್ತಮವಾದ ಮತ್ತು ಗರಿಷ್ಠ ಮಟ್ಟದ ಆರೋಗ್ಯ ಸೇವಾ ಸೌಲಭ್ಯದ ಹಕ್ಕು ಮಕ್ಕಳಿಗೆ ಇದೆ. ಗರ್ಭಿಣಿಯರಿಗೆ ಸೂಕ್ತ ಆರೋಗ್ಯ ಸೇವಾ ಸೌಲಭ್ಯದ ನಿರಾಕರಣೆಯು, ತಾಯಿಯ ಗರ್ಭದಲ್ಲಿರುವ ಮಗುವಿನ ಮೇಲೆ ಪರಿಣಾಮ ಬೀರುವುದರಿಂದ ತಾಯಂದಿರ ಆರೋಗ್ಯ ಸೇವಾ ಸೌಲಭ್ಯವು ಮಕ್ಕಳ ಹಕ್ಕು ಆಗಿದೆ.
- ಪಾಲನೆ, ರಕ್ಷಣೆ, ಚಿಕಿತ್ಸೆಯ ಉದ್ದೇಶದಿಂದ ಮಕ್ಕಳನ್ನು ವಿಶೇಷ ಕೇಂದ್ರಗಳಲ್ಲಿ ಇರಿಸಿದ್ದರೆ ಅಲ್ಲಿನ ಪರಿಸ್ಥಿತಿಯನ್ನು ಆಗಾಗ ಪರಿಶೀಲಿಸುವುದೂ ಮಕ್ಕಳ ಹಕ್ಕುಗಳಲ್ಲಿ ಸೇರಿದೆ.

- ಅಗತ್ಯ ಕಂಡಾಗಲೆಲ್ಲ ಸಾಮಾಜಿಕ ಭದ್ರತೆ ಹಾಗೂ ಜೀವ ವಿಮೆ ಹೊಂದುವ ಹಕ್ಕು ಇದೆ.
- ಜೀವನ ಮಟ್ಟದ ಸುಧಾರಣೆ, ರಕ್ಷಣೆ ಇತ್ಯಾದಿಗಳಿಗೆ ಕೊರತೆ ಉಂಟಾದಾಗ ಅದನ್ನು ಸರಕಾರದಿಂದ ಪಡೆಯುವುದು ಮಕ್ಕಳ ಹಕ್ಕು.
- ಮಕ್ಕಳಿಗೆ ಉಚಿತ ಹಾಗೂ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಸರ್ಕಾರ ಕೊಡಿಸಬೇಕು. ಉನ್ನತ ಶಿಕ್ಷಣ ಪಡೆಯಲು ಮಕ್ಕಳಿಗೆ ಅವಕಾಶ ಕಲ್ಪಿಸಿಕೊಡಬೇಕು. ಮಕ್ಕಳ ಘನತೆ, ಗೌರವಗಳಿಗೆ ಶಾಲೆಯ ಶಿಸ್ತು ಪೋಷಕವಾಗುವಂತೆ ನೋಡಿಕೊಳ್ಳಬೇಕು.
- ಮಗುವಿಗೆ ನೀಡುವ ಶಿಕ್ಷಣ ಉದ್ದೇಶ, ಅದರ ಉದ್ದೇಶ, ಅದರ ವ್ಯಕ್ತಿತ್ವ ಮತ್ತು ಪ್ರತಿಭೆಯನ್ನು ವಿಕಸಿಸುವಂತಿರಬೇಕು. ಸಮಾಜದಲ್ಲಿ ಸ್ವಾವಲಂಬಿಯಾಗಿ ಜವಾಬ್ದಾರಿಯ ಜೀವನ ನಡೆಸುವ ಶಿಕ್ಷಣ ಮಗುವಿಗೆ ಒದಗಿಸಬೇಕು. ತಂದೆ ತಾಯಿಯರು, ಮೂಲಭೂತ ಮಾನವ ಹಕ್ಕುಗಳು, ಸ್ವಾಭಾವಿಕ ಪರಿಸರ, ತಾನು ಹುಟ್ಟಿ ಬೆಳೆದ ಸಂಸ್ಕೃತಿ ಇತ್ಯಾದಿಗಳನ್ನು ಗೌರವಿಸುವ ಮನೋಭಾವವನ್ನು ಮಕ್ಕಳಲ್ಲಿ ಶಿಕ್ಷಣವು ಬೆಳೆಸುವಂತಿರಬೇಕು.
- ಅಲ್ಪ ಸಂಖ್ಯಾತ ಸಮುದಾಯಗಳಿಗೆ, ಮೂಲ ನಿವಾಸಿ ಗುಂಪಿಗೆ ಸೇರಿದ ಮಕ್ಕಳಿಗೆ ತಮ್ಮದೇ ಆದ ಧರ್ಮ, ಸಂಸ್ಕೃತಿ, ಭಾಷೆ ಬಳಸುವ ಹಕ್ಕು ಇದೆ.
- ವಿಶ್ರಾಂತಿ, ಆಟ ಹಾಗೂ ಸಾಂಸ್ಕೃತಿಕ ಕಲಾತ್ಮಕ ಚಟುವಟಿಕೆಗಳಲ್ಲಿ ಭಾಗವಹಿಸುವುದು ಮಕ್ಕಳ ಹಕ್ಕು.
- ಆರೋಗ್ಯ, ಶಿಕ್ಷಣ, ವಿಕಾಸಕ್ಕೆ ಅಡ್ಡಿ ಉಂಟು ಮಾಡುವ ಅಪಾಯಕಾರಿ ಕೆಲಸಗಳಲ್ಲಿ ತೊಡಗಿಸುವುದರ ವಿರುದ್ಧ ರಕ್ಷಣೆ ಪಡೆಯುವ ಹಕ್ಕು ಇದೆ. ಉದ್ಯೋಗಕ್ಕೆ ಸೇರಲು ಮಕ್ಕಳಿಗೆ ವಯೋಮಿತಿ ನಿಗದಿ ಪಡಿಸಿ, ಉದ್ಯೋಗದ ಸ್ಥಿತಿಗತಿಗಳನ್ನು ಸರ್ಕಾರವು ನಿಯಂತ್ರಿಸಿ ನಿಯಮಿತ ಗೊಳಿಸಬೇಕು. ಕಾನೂನು ಬಾಹಿರ ಬಾಲಕಾರ್ಮಿಕತನಕ್ಕೆ ಅವಕಾಶ ನೀಡುವವರಿಗೆ ಸರ್ಕಾರ ಶಿಕ್ಷೆ ವಿಧಿಸಬೇಕು.
- ಮಕ್ಕಳು ಮಾದಕ ದ್ರವ್ಯಗಳು ಮತ್ತು ಮಾನಸಿಕ ಭ್ರಮಣೆಗೆ ಕಾರಣವಾಗುವ ದ್ರವ್ಯಗಳನ್ನು ಸೇವಿಸದಂತೆ ಸರ್ಕಾರವು ಅವರನ್ನು ರಕ್ಷಿಸಬೇಕು. ಕಾನೂನು ಬಾಹಿರ ಮಾದಕ ದ್ರವ್ಯಗಳ ಉತ್ಪಾದನೆ, ಸಾಗಣೆ ವಿತರಣೆಗಳಲ್ಲಿ ಮಕ್ಕಳು ತೊಡಗದಂತೆ ದುರ್ಬಳಕೆಗೊಳ್ಳದಂತೆ ಅವರನ್ನು ರಕ್ಷಿಸಬೇಕು.

- ಯಾವುದೇ ರೀತಿಯ ಲೈಂಗಿಕ ಶೋಷಣೆಗೆ ಮಕ್ಕಳು ಬಲಿಯಾಗದಂತೆ ನೋಡಿಕೊಳ್ಳಬೇಕು. ಸೂಳೆಗಾರಿಕೆಗೆ ಈಡಾಗದಂತೆ ಹಾಗೂ ಅಶ್ಲೀಲ ಸಾಹಿತ್ಯ, ಚಿತ್ರಗಳ ಕಡೆಗೆ ಸೆಳೆಯಲ್ಪಡದಂತೆ ಮಕ್ಕಳನ್ನು ಸರ್ಕಾರ ರಕ್ಷಿಸಬೇಕು.
- ಮಕ್ಕಳ ಅಕ್ರಮ ಮಾರಾಟ, ವಿನಿಮಯ, ಸಾಗಾಟ ಇತ್ಯಾದಿಗಳನ್ನು ಸರ್ಕಾರವು ತಡೆಯಬೇಕು.
- ಮಕ್ಕಳನ್ನು ಎಲ್ಲಾ ರೀತಿಯ ಇತರೆ ಶೋಷಣೆಗಳಿಂದ ರಕ್ಷಿಸಬೇಕು.
- ಕಾನೂನಿಗೆ ವಿರುದ್ಧವಾಗಿ ಮನಬಂದಂತೆ ಮಕ್ಕಳ ಸ್ವಾತಂತ್ರ್ಯ ಹರಣ ಮಾಡಕೂಡದು. ಈ ಬಗ್ಗೆ ಸರ್ಕಾರ ಅವರಿಗೆ ರಕ್ಷಣೆ ನೀಡಬೇಕು. ಅಪರಾಧ ನಡೆಸಿದ ಮಕ್ಕಳೊಡನೆ ಮಾನವೀಯತೆಯಿಂದ ವ್ಯವಹರಿಸಬೇಕು. ಅವರನ್ನು ಸರಿದಾರಿಗೆ ತರಲು ಯತ್ನಿಸಬೇಕು. ಬಾಲಾಪರಾಧಿಗಳಿಗೆ ಚಿತ್ರಹಿಂಸೆ ಅಥವಾ ಇತರ ಕ್ರೂರ, ಅಮಾನವೀಯ ಶಿಕ್ಷೆ ನೀಡಕೂಡದು, ಮರಣದಂಡನೆ ಅಥವಾ ಅಜೀವ ಸೆರೆವಾಸ ಇತ್ಯಾದಿ ಶಿಕ್ಷೆಯ ಸಂದರ್ಭದಲ್ಲಿ ಮಕ್ಕಳನ್ನು ವಿಶೇಷವಾಗಿ ಗಮನದಲ್ಲಿರಿಸಿ ಸರ್ಕಾರ ಅವರನ್ನು ರಕ್ಷಿಸಬೇಕು. ಬಾಲಾಪರಾಧಿಗಳಿಗೆ ತಮ್ಮ ಕುಟುಂಬದೊಡನೆ ಸಂಪರ್ಕ ಹೊಂದಿರಲು, ಕಾನೂನು ನೆರವು ಪಡೆಯಲು ಅವಕಾಶ ಕಲ್ಪಿಸಬೇಕು.
- 15 ವರ್ಷದೊಳಗಿನ ಮಗು ನೇರವಾಗಿ ಯುದ್ಧಗಳಲ್ಲಿ ಪಾಲ್ಗೊಳ್ಳದಂತೆ ತಡೆಯಬೇಕು. 15 ವರ್ಷದೊಳಗಿನ ಮಕ್ಕಳನ್ನು ಸೈನ್ಯಕ್ಕೆ ಸೇರಿಸಿಕೊಳ್ಳಬಾರದು. ಸಶಸ್ತ್ರ ಸಂಘರ್ಷಗಳ ಸಂದರ್ಭದಲ್ಲಿ ಬಹಳ ಮುಖ್ಯವಾಗಿ ತೊಂದರೆಗೆ ಈಡಾಗುವ ಮಕ್ಕಳ ಪಾಲನೆಗೆ ಸರ್ಕಾರ ರಕ್ಷಣೆ ನೀಡಬೇಕು.
- ನಿರ್ಲಕ್ಷ್ಯ, ಶೋಷಣೆ, ಹಿಂಸೆ ಅಥವಾ ಯುದ್ಧ ಸಂದರ್ಭಗಳಲ್ಲಿ ತೊಂದರೆಗೀಡಾದ ಮಕ್ಕಳಿಗೆ ದೈಹಿಕವಾಗಿ ಮತ್ತು ಮಾನಸಿಕವಾಗಿ ಗುಣಮುಖರಾಗಲು ಅವಕಾಶ ಮಾಡಿಕೊಡಬೇಕು.
- ಅಪರಾಧ ಆರೋಪಕ್ಕೆ ಈಡಾದ ಮಕ್ಕಳನ್ನು ಗೌರವದಿಂದ ನಡೆಸಿಕೊಳ್ಳಬೇಕು. ಮಗುವಿನ ಮೇಲೆ ಆರೋಪಿಸಿದ ಅಪರಾಧವು ರುಜುವಾತು ಆಗುವವರೆಗೂ ಅವರ ಮೇಲಿರುವ ಆಪಾದನೆಗಳ ಬಗ್ಗೆ ಅದಕ್ಕೆ ತಿಳಿಸಿ ಹೇಳಬೇಕು. ಅಂತಹ ಮಗುವಿಗೆ ಅಗತ್ಯವಾದ ಕಾನೂನು ಸಹಾಯ ಒದಗಿಸಬೇಕು. ಮಗುವಿನಿಂದ ಬಲವಂತವಾಗಿ ಸಾಕ್ಷಿ ಹೇಳಿಸುವುದಾಗಲಿ, ಆರೋಪವನ್ನು ಒಪ್ಪಿಕೊಳ್ಳುವಂತೆ ಒತ್ತಾಯಿಸುವುದಾಗಲಿ ಕೂಡದು ಈ ಬಗ್ಗೆ ಸರ್ಕಾರಗಳು ರಕ್ಷಣೆ ಒದಗಿಸಬೇಕು.
- ಯಾವುದೇ ದೇಶದ ಕಾನೂನುಗಳು ಮಕ್ಕಳ ಪಾಲಿಗೆ ಮಕ್ಕಳ ಅಂತರ ರಾಷ್ಟ್ರೀಯ ಒಡಂಬಡಿಕೆಯ ಅಂಶಗಳಿಗಿಂತಲೂ ಉತ್ತಮವಾಗಿದ್ದರೆ ಅವುಗಳನ್ನೇ ಎತ್ತಿ ಹಿಡಿಯಬೇಕು.

- ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿನ ವಿಚಾರಗಳನ್ನು ವಿಧಿ ವಿಧಾನಗಳನ್ನು ಎಲ್ಲಾ ವಯಸ್ಕರಿಗೆ ಮತ್ತು ಮಕ್ಕಳಿಗೆ ತಿಳಿಸಲು ಸರ್ಕಾರಗಳು ಅಗತ್ಯ ಕ್ರಮ ಕೈಗೊಳ್ಳಬೇಕು.
- ಒಡಂಬಡಿಕೆಯ ಉದ್ದೇಶಗಳ ಈಡೇರಿಕೆಗಾಗಿ ಕೈಗೊಂಡ ಕ್ರಮಗಳ ಪ್ರಗತಿಯ ಮೇಲೆ ನಿಗಾ ಇಡಲು, ಮಕ್ಕಳ ಹಕ್ಕುಗಳ ಸಂರಕ್ಷಣಾ ಸಮಿತಿಯನ್ನು ಸರ್ಕಾರಗಳು ಸ್ಥಾಪಿಸಬೇಕು.
- ಒಡಂಬಡಿಕೆಯಲ್ಲಿ ಒಪ್ಪಿಕೊಳ್ಳಲಾಗಿರುವ ಹಕ್ಕುಗಳನ್ನು ಜಾರಿಗೆ ತರಲು ಕೈಗೊಂಡಕ್ರಮಗಳು, ಸಾಧಿಸಲಾಗಿರುವ ಪ್ರಗತಿ, ಇವುಗಳ ಬಗ್ಗೆ ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿಗಳ ಮೂಲಕ, ಸಮಿತಿಗೆ ತಮ್ಮ ವರದಿಯನ್ನು ಸರ್ಕಾರಗಳು ಸಲ್ಲಿಸಬೇಕು.
- ಪ್ರಸ್ತುತ ಒಡಂಬಡಿಕೆಯನ್ನು ಪರಿಣಾಮಕಾರಿಯಾದ ರೀತಿಯಲ್ಲಿ ಜಾರಿಗೆ ತರಲು ಮತ್ತು ಒಡಂಬಡಿಕೆಯ ವ್ಯಾಪ್ತಿಗೆ ಒಳಪಟ್ಟ ಕ್ಷೇತ್ರಗಳಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಸಹಕಾರ ಹೊಂದಲು, ಸಂಬಂಧಪಟ್ಟ ಸಂಸ್ಥೆಗಳ, ಸರ್ಕಾರಗಳ ಸಲಹೆ, ಸೂಚನೆ, ವರದಿ ಪಡೆದುಕೊಂಡು ಮುಂದುವರಿಯಬೇಕು.
- ಮಕ್ಕಳ ಹಕ್ಕುಗಳ ಒಡಂಬಡಿಕೆಗೆ ಸಹಿ ಹಾಕಲು ಎಲ್ಲಾ ದೇಶಗಳಿಗೆ ಅವಕಾಶವಿದೆ.
- ಸದರಿ ಒಡಂಬಡಿಕೆಯ ಮಾನ್ಯತೆ ಗಳಿಸಿದ ಬಳಿಕವೇ ಚಾಲ್ತಿಗೆ ಬರುತ್ತದೆ. ಮಾನ್ಯತೆಯು ದಾಖಲು ಪತ್ರಗಳನ್ನು ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿಗಳಿಗೆ ಕಳುಹಿಸಬೇಕು.
- ಯಾವ ದೇಶವೇ ಆಗಲಿ, ಯಾವಗಲಾದರೂ ಸರಿ ಈ ಒಡಂಬಡಿಕೆಯನ್ನು ಅಂಗೀಕರಿಸಿ ಅದರಂತೆ ನಡೆಯಬಹುದಾಗಿದೆ.

ಈ ರೀತಿಯಲ್ಲಿ ಮಕ್ಕಳ ಹಕ್ಕುಗಳನ್ನು ವಿಶ್ವಸಂಸ್ಥೆಯ ಸಲಹೆ ಮೇರೆಗೆ ಭಾರತ ಸರ್ಕಾರವು ಈ ಮೇಲಿನ ಒಡಂಬಡಿಕೆಗಳನ್ನು 1992 ರಲ್ಲಿ ಜಾರಿಗೆ ತಂದಿದೆ.

ಅದೇ ರೀತಿಯಲ್ಲಿ ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆಗೆ ಹಲವಾರು ನಿಯಂತ್ರಣ ಕಾಯ್ದೆ ಮತ್ತು ನಿಷೇಧ ಕಾಯ್ದೆಗಳನ್ನು 1986 ರ ಅನುಬಂಧ 3 ರ ಅನ್ವಯ ಯಾವ ಪ್ರದೇಶಗಳಲ್ಲಿ ಮಕ್ಕಳು ಕೆಲಸ ಮಾಡಬಾರದು ಎಂಬುದನ್ನು ತಿಳಿಸುತ್ತದೆ. ಇದರಲ್ಲಿ 2 ಭಾಗಗಳಿದ್ದು ಅವುಗಳನ್ನು ಅ ಹಾಗೂ ಬ ಭಾಗಗಳಾಗಿ ವಿಂಗಡಿಸಲಾಗಿದೆ. ಅ ಭಾಗದಲ್ಲಿ ಯಾವ ಉದ್ಯೋಗಗಳನ್ನು ಮಾಡಬಾರದು ಮತ್ತು ಬ ಭಾಗದಲ್ಲಿ ಅದರ ಪ್ರಕ್ರಿಯೆಗಳನ್ನು ಕಾಣಬಹುದು.

## ಭಾಗ- ಅ

### ಉದ್ಯೋಗಗಳು :

- ರೈಲುಮಾರ್ಗದ ಮೂಲಕ ಪ್ರಯಾಣಿಕರ, ಸರಕುಗಳ ಅಥವಾ ಅಂಚೆಯ ಸಾಗಾಣಿಕೆ.
- ರೈಲ್ವೆ ಆವರಣದಲ್ಲಿ ಇದ್ದಿಲು ಆಯುವುದು, ಬೂದಿಗುಂಡಿಯನ್ನು ಶುಚಿಗೊಳಿಸುವುದು ಅಥವಾ ಕಟ್ಟಡ ನಿರ್ಮಾಣದ ಕೆಲಸ ಮಾಡುವುದು.
- ರೈಲ್ವೆ ನಿಲ್ದಾಣದಲ್ಲಿ ಊಟ ತಿಂಡಿ ಮಾರಾಟ ಮಾಡುವ ಸ್ಥಾಪನೆಯಲ್ಲಿ ಕೆಲಸ ಮಾಡುವುದು, ಒಂದು ಪ್ಲಾಟ್ ಫಾರ್ಮ್‌ನಿಂದ ಮತ್ತೊಂದು ಪ್ಲಾಟ್‌ಫಾರ್ಮ್‌ಗೆ ಅಥವಾ ಚಲಿಸುವ ರೈಲುಗಾಡಿಯ ಒಳಗಡೆ ಅಥವಾ ಹೊರಗಡೆ ಓಡಾಡಿ ಮಾರಾಟ ಮಾಡುವ ಅಥವಾ ಉದ್ಯೋಗದಾತನನ್ನು ಒಳಗೊಂಡಂತೆ.
- ರೈಲ್ವೆ ನಿಲ್ದಾಣದಲ್ಲಿ ಕಟ್ಟಡದ ಕಾಮಗಾರಿಗೆ ಸಂಬಂಧಿಸಿದ ಕೆಲಸ ಮಾಡುವುದು, ಒಂದು ಪ್ಲಾಟ್‌ಫಾರ್ಮ್‌ನಿಂದ ಮತ್ತೊಂದು ಪ್ಲಾಟ್‌ಫಾರ್ಮ್‌ಗೆ ಅಥವಾ ಚಲಿಸುವ ರೈಲುಗಾಡಿಯ ಒಳಗಡೆ ಅಥವಾ ಹೊರಗಡೆ ಓಡಾಡಿ ಮಾರಾಟ ಮಾಡುವ ಅಥವಾ ಉದ್ಯೋಗದಾತನನ್ನು ಒಳಗೊಂಡಂತೆ.
- ಯಾವುದೇ ಬಂದರಿನ ಪರಿಮಿತಿಯಲ್ಲಿ ಬಂದರು ಪ್ರಾಧಿಕಾರದಲ್ಲಿ.
- ತಾತ್ಕಾಲಿಕ ಪರವಾನಗಿಯೊಂದಿಗೆ ಸಿಡಿಮದ್ದು ಮಾರಾಟ ಮಾಡುವುದು ಹಾಗೂ ಪಟಾಕಿ ಮಾರಾಟ ಮಾಡುವುದಕ್ಕೆ ಸಂಬಂಧಿಸಿದ ಕೆಲಸಗಳು.
- ಕಸಾಯಿಖಾನೆಗಳಲ್ಲಿ/ಪ್ರಾಣಿವಧೆ ನಡೆಸುವ ಅಂಗಡಿಗಳಲ್ಲಿ.
- ಮೋಟಾರುವಾಹನಗಳ ವರ್ಕ್‌ಷಾಪ್ ಹಾಗೂ ಗ್ಯಾರೇಜುಗಳಲ್ಲಿ.
- ಬೆಂಕಿ ಮುಂತಾದ ಕುಲುಮೆಕೆಲಸದಲ್ಲಿ.
- ವಿಷವಸ್ತುಗಳ ಅಥವಾ ಉರಿಯುವ ವಸ್ತುಗಳ ಅಥವಾ ಸ್ಫೋಟಕ ವಸ್ತುಗಳ ನಿರ್ವಹಣೆಯಲ್ಲಿ.
- ಕೈಮಗ್ಗ ಅಥವಾ ವಿದ್ಯುತ್ ಚಾಲಿತ ಮಗ್ಗದ ಉದ್ಯಮದಲ್ಲಿ.
- ಗಣಿಗಳು (ಭೂಮಿಯ ಅಡಿಯಲ್ಲಿ ಹಾಗೂ ನೀರಿನ ಅಡಿಯಲ್ಲಿ) ಹಾಗೂ ಕಲ್ಲಿದ್ದಲು ಗಣಿಗಳಲ್ಲಿ.
- ಪ್ಲಾಸ್ಟಿಕ್ ಘಟಕಗಳಲ್ಲಿ ಹಾಗೂ ಫೈಬರ್ ಗ್ಲಾಸ್ ವರ್ಕ್‌ಷಾಪ್‌ಗಳಲ್ಲಿ.

ಭಾಗ–ಬ

## ಪ್ರಕ್ರಿಯೆಗಳು

- ಬೀಡಿಕಟ್ಟುವಿಕೆ.
- ಕಾರ್ಪೆಟ್ ಹೆಣೆಗೆ.
- ಸಿಮೆಂಟ್ ತಯಾರಿಕೆ, ಅದನ್ನು ಚೀಲಕ್ಕೆ ತುಂಬುವುದನ್ನು ಸೇರಿದಂತೆ.
- ಸ್ಫೋಟಕ, ಸಿಡಿಮದ್ದು ಹಾಗೂ ಬೆಂಕಿಪೊಟ್ಟಣ ತಯಾರಿ.
- ಬಟ್ಟೆಯ ಮೇಲಿನ ಮುದ್ರಣ, ಬಣ್ಣ ಹಾಕುವುದು ಮತ್ತು ಹೆಣಿಗೆ.
- ಅಭ್ರಕ ಕತ್ತರಿಸುವುದು, ಸೀಳುವುದು.
- ಶುದ್ಧ ಅರಗು ತಯಾರಿಕೆ.
- ಸಾಬೂನು ತಯಾರಿಕೆ.
- ಚರ್ಮ ಹದ ಮಾಡುವುದು.
- ಉಣ್ಣೆ ಹದ ಮಾಡುವುದು.
- ಕಟ್ಟಡ ಕಟ್ಟುವುದು ಮತ್ತು ಕಟ್ಟಡ ನಿರ್ಮಾಣ.
- ಹರಳಿನ ಉತ್ಪನ್ನಗಳ ತಯಾರಿಕೆ.
- ಬಳಪದ ಪೆನ್ಸಿಲ್ಲುಗಳ ತಯಾರಿಕೆ (ಪ್ಯಾಕ್ ಮಾಡುವುದು ಸೇರಿದಂತೆ).
- ವಿಷಯುಕ್ತ ಲೋಹಗಳು ಮತ್ತು ವಿಷಯುಕ್ತ ವಸ್ತುಗಳಾದ ಸೀಸ, ಪಾದರಸ, ಮ್ಯಾಂಗನೀಸ್, ಕ್ರೋಮಿಯಂ, ಕ್ಯಾಡ್ಮಿಯಂ, ಬೆನ್‌ಝೀನ್, ಕೀಟನಾಶಕಗಳು ಮತ್ತು ಕಲ್ನಾರುಗಳ ತಯಾರಿಕೆಯ ಪ್ರಕ್ರಿಯೆಗಳು.
- ಕಾರ್ಖಾನೆಗಳ ಅಧಿನಿಯಮ, 1948 (1948–63)ರ ಅನುಬಂಧ 2(cb) ರಲ್ಲಿ ನಿರ್ವಹಿಸಲಾಗಿರುವ ಅಪಾಯಕಾರಿ ಪ್ರಕ್ರಿಯೆಗಳು ಅನುಬಂಧ 87 ರ ಅನ್ವಯ ರೂಪಿಸಲಾಗಿರುವ ಶಾಸನದಲ್ಲಿ ಸೂಚಿತವಾಗಿರುವ ಅಪಾಯಕಾರಿ ಕಾರ್ಯಾಚರಣೆಗಳು.
- ಕಾರ್ಖಾನೆಗಳ ಅಧಿನಿಯಮ, 1948 (1948–63)ರ ಅನುಬಂಧ 2 (k) ರಲ್ಲಿ ನಿರ್ವಹಿಸಲ್ಪಟ್ಟಿರುವಂತೆ.
- ಗೇರು ಹಣ್ಣಿನಿಂದ ಬೀಜ ಬೇರ್ಪಡಿಸುವಿಕೆ, ಗೇರು ಬೀಜದ ಸಿಪ್ಪೆ ಸುಲಿಯುವಿಕೆ ಹಾಗೂ ಸಂಸ್ಕರಣೆ.

- ಅಗರಬತ್ತಿ ತಯಾರಿಕೆ.
- ಎಲೆಕ್ಟ್ರಾನಿಕ್ ಉದ್ದಿಮೆಗಳಲ್ಲಿ ಬೆಸುಗೆಯ ಕೆಲಸಗಳು.
- ಬೆಸುಗೆ, ಲೇತ್ ಕೆಲಸ, ನೆಗ್ಗಿಸುವುದು ಮತ್ತು ಬಣ್ಣ ಬಳಿಯುವಂತಹ ಸಂಬಂಧಪಟ್ಟ ಇತರ ಕೆಲಸಗಳು ಸೇರಿದಂತೆ ಮೋಟಾರು ವಾಹನಗಳ ದುರಸ್ತಿ ಹಾಗೂ ನಿರ್ವಹಣೆ.
- ಇಟ್ಟಿಗೆ ಗೂಡು ಹಾಗೂ ಮಾಡಿನ ಹೆಂಚು ನಿರ್ಮಾಣ ಘಟಕಗಳು.
- ಹತ್ತಿ ಬೀಜ ಬೇರ್ಪಡಿಸುವುದು ಹಾಗೂ ಸಂಸ್ಕರಣೆ ಮತ್ತು ಒಳ ಉಡುಪುಗಳಂತಹ ಸರಕುಗಳ ಉತ್ಪಾದನೆ.
- ಶುದ್ಧಿಕಾರಕ ಉತ್ಪನ್ನಗಳ ತಯಾರಿಕೆ.
- ಫೇಬ್ರಿಕೇಷನ್ ಕಾರ್ಯಾಗಾರಗಳು (ಕಬ್ಬಿಣ ಮತ್ತು ಕಬ್ಬಿಣವಲ್ಲದ).
- ರತ್ನಗಳನ್ನು ಕತ್ತರಿಸುವುದು ಹಾಗೂ ಮೆರಗು ನೀಡುವುದು.
- ಕ್ರೋಮೈಟ್ ಹಾಗೂ ಮ್ಯಾಂಗನೀಸ್ ಅದಿರುಗಳ ನಿರ್ವಹಣೆ.
- ಸೆಣಬು ನೇಯ್ಗೆಯ ಉತ್ಪನ್ನ ಹಾಗೂ ತೆಂಗಿನ ನಾರಿನ ತಯಾರಿಕೆ.
- ಸುಣ್ಣದ ಕಲ್ಲಿನ ಆವಿಗೆ ಹಾಗೂ ತೆಂಗಿನ ನಾರಿನ ತಯಾರಿಕೆ.
- ಬೀಗದ ತಯಾರಿಕೆ.
- ಸೀಸಕ್ಕೆ ಒಡ್ಡಿಕೊಳ್ಳಬೇಕಾಗುವಂತಹ ತಯಾರಿಕ ಪ್ರಕ್ರಿಯೆಗಳು – ಪ್ರಥಮ ಹಾಗೂ ದ್ವಿತಿಯ ಹಂತಗಳಲ್ಲಿ ಲೋಹ ಕರಗಿಸಿ ಅದಿರು ತೆಗೆಯುವುದು, ಸೀಸದ ಬೆಸುಗೆ ಹಾಗೂ ಕತ್ತರಿಸುವಿಕೆ. ಬಣ್ಣ ಲೇಪಿತ ಲೋಹದ ನಿರ್ಮಾಣ, ಆರ್ಗ್ಯನಿಕ್ ಸಿಲಿಕೇಟ್, ಪಾಲಿವಿನೈಲ್ ಕ್ಲೋರೈಡ್‌ನ ಬೆಸುಗೆ ಅಥವಾ ವಿದ್ಯುಲ್ಲೇಪನ, ಹರಳು ಗಾಜಿನ ಮುದ್ದೆಯ ಮಿಶ್ರಣ ಮಾಡುವುದು (ಕೈಯಲ್ಲಿ), ಸೀಸದ ಬಣ್ಣವನ್ನು ಕೆರೆದು ತೆಗೆಯುವುದು, ಬಣ್ಣ ನೀಡುವ ಕಾರ್ಯಾಗಾರಗಳಲ್ಲಿ ಸೀಸವನ್ನು ಸುಡುವುದು ಸೀಸದ ಗಣಿಗಾರಿಕೆ, ಸೀಸದ ಪೈಪುಗಳ ಕೆಲಸ, ಕೇಬಲ್ ಮಾಡುವುದು, ವೈರಿಂಗ್ ಪೇಟೆಂಟಿಂಗ್, ಸೀಸದ ಎರಕ ಹೊಯ್ಯುವುದು, ಮುದ್ರಾಣಾಲಯಗಳಲ್ಲಿ ಸೀಸದ ಮೊಳೆಯ ಕೆಲಸ ಮಾಡುವುದು, ಕಾರಿನ ಬಿಡಿ ಭಾಗಗಳ ಜೋಡಣೆ, ಗುಂಡು ತಯಾರಿಕೆ, ಗಾಜಿನ ವಸ್ತುಗಳ ತಯಾರಿಕೆ, ಉಬ್ಬಿಸುವಿಕೆ.
- ಸಿಮೆಂಟಿನ ಕೊಳವೆಗಳ ತಯಾರಿಕೆ, ಸಿಮೆಂಟಿನ ಉತ್ಪನ್ನಗಳು ಹಾಗೂ ಇತರ ಸಂಬಂಧಿತ ಕೆಲಸಗಳು.

- ಗಾಜಿನ ತಯಾರಿಕೆ, ಬಳೆಗಳೂ ಸೇರಿದಂತೆ ಗಾಜಿನ ವಸ್ತುಗಳು, ಫ್ಲೋರೋಸೆಂಟ್ ಟ್ಯೂಬುಗಳು, ಬಲ್ಬ್‌ಗಳು ಹಾಗೂ ಇಂತಹುದೇ ಇನ್ನಿತರ ಗಾಜಿನ ಉತ್ಪನ್ನಗಳು.
- ಬಣ್ಣಗಳ ಮತ್ತು ಬಣ್ಣದ ವಸ್ತುಗಳ ತಯಾರಿಕೆ.
- ಕೀಟನಾಶಕಗಳ ಹಾಗೂ ಕ್ರಿಮಿನಾಶಕಗಳ ತಯಾರಿಕೆ ಅಥವಾ ನಿರ್ವಹಣೆ.
- ತುಕ್ಕು ಹಿಡಿಯುವ ಹಾಗೂ ವಿಷಕಾರಕ ಪದಾರ್ಥಗಳ ಸಂಸ್ಕರಣೆ ಹಾಗೂ ನಿರ್ವಹಣೆ.
- ಉರಿಯುವ ಕಲ್ಲಿದ್ದಲು ಹಾಗೂ ಕಲ್ಲಿದ್ದಲಿನ ಇಟ್ಟಿಗೆಗಳ ತಯಾರಿಕೆ.
- ಸಿಂಥೆಟಿಕ್ ಸಾಮಾಗ್ರಿಗಳು, ರಸಾಯನಿಕ ಪದಾರ್ಥಗಳು ಹಾಗೂ ಚರ್ಮದ ವಸ್ತುಗಳಿಗೆ ಒಡ್ಡಿಕೊಳ್ಳುವ ರೀತಿಯಲ್ಲಿ ಒಳಗೊಂಡಂತೆ ಆಟೋಟದ ಸಾಮಾಗ್ರಿಗಳ ತಯಾರಿಕೆ.
- ಫೈಬರ್ ಗ್ಲಾಸ್ ಮತ್ತು ಪ್ಲಾಸ್ಟಿಕ್‌ನ ಎರಕ ಹಾಗೂ ಸಂಸ್ಕರಣೆ.
- ತೈಲ ಸುರಿಯುವಿಕೆ ಮತ್ತು ತೈಲ ಶುದ್ಧಿಕರಣಾಗಾರ.
- ಕಾಗದದ ತಯಾರಿಕೆ.
- ಕುಂಬಾರಿಕೆ ಮತ್ತು ಸಿರ್‍ಯಾಮಿಕ್ ಉದ್ಯಮ.
- ಹೊಳಪು ನೀಡುವುದು, ಕತ್ತರಿಸುವುದು, ಬೆಸುಗೆ ಹಾಕುವುದು ಸೇರಿದಂತೆ ಎಲ್ಲಾ ವಿಧದ ಹಿತ್ತಾಳೆಯ ಸರಕುಗಳ ತಯಾರಿಕೆ.
- ಟ್ರ್ಯಾಕ್ಟರುಗಳು, ಒಕ್ಕುವ ಹಾಗೂ ಕೊಯ್ಲಿನ ಯಂತ್ರಗಳನ್ನು ಬಳಸಿ ನಡೆಸುವ ವ್ಯವಸಾಯದ ಪ್ರಕ್ರಿಯೆಗಳು ಹಾಗೂ ಹುಲ್ಲು ಅಥವಾ ದಂಟು ಕತ್ತರಿಸುವುದು.
- ಮರದ ಕಾರ್ಖಾನೆಯಲ್ಲಿ ಎಲ್ಲಾ ಪ್ರಕ್ರಿಯೆಗಳು.
- ರೇಷ್ಮೆ ಸಂಸ್ಕರಣೆ.
- ಚರ್ಮದ ಉತ್ಪನ್ನಗಳ ತಯಾರಿಕೆಗಾಗಿ ಚರ್ಮ ಸುಲಿಯುವಿಕೆ, ಬಣ್ಣ ನೀಡುವಿಕೆಯ ಕೆಲಸಗಳು.
- ಕಲ್ಲು ಒಡೆಯುವುದು ಹಾಗೂ ಜಲ್ಲಿ ಒಡೆಯುವುದು.
- ತಂಬಾಕು ತಯಾರಿಕೆ, ಹೊಗೆಸೊಪ್ಪು ಪಟ್ಟೆ ಮಾಡುವುದು ಮತ್ತು ಯಾವುದೇ ಬಗೆಯಲ್ಲಿ ತಂಬಾಕು ಸೊಪ್ಪಿನ ನಿರ್ವಹಣೆ ಸೇರಿದಂತೆ ತಂಬಾಕು ಸಂಸ್ಕರಣೆ.
- ಟಯರ್ ತಯಾರಿಕೆ, ದುರಸ್ತಿ, ರಿಟ್ರೇಡಿಂಗ್ ಮತ್ತು ಗ್ರಾಫೈಟ್ ಸಂಸ್ಕರಣೆ.
- ಪಾತ್ರೆಗಳ ತಯಾರಿಕೆ, ಹೊಳಪು ನೀಡುವಿಕೆ ಹಾಗೂ ಲೋಹಕ್ಕೆ ಮೆರಗು ನೀಡುವಿಕೆ.

- ವಜ್ರಗಳನ್ನು ಕತ್ತರಿಸುವುದು ಮತ್ತು ಹೊಳಪು ನೀಡುವುದು.
- ಗಣಿಗಳಿಂದ ಬಳಪ ತೆಗೆಯುವುದು.
- ಲೋಹಗಳಿಗೆ ಸಾಣೆ ಹಿಡಿಯುವುದು ಅಥವಾ ಮೆರಗು ನೀಡುವುದು.
- ಚಿಂದಿ ಆಯುವುದು ಮತ್ತು ಬೀದಿ ಗುಡಿಸುವುದು.

ಈ ಮೇಲ್ಕಂಡ ಎಲ್ಲಾ (**ಭಾಗ–ಅ ಮತ್ತು ಭಾಗ–ಬ**) ಕಾರ್ಯಗಳಲ್ಲಿ ಮಕ್ಕಳು ದುಡಿಯುವುದನ್ನು ನೀಷೆಧಿಸಿದೆ.

ಅದೇ ರೀತಿಯಲ್ಲಿ ಮಕ್ಕಳ ದುಡಿಮೆ ಬಗ್ಗೆ ಅನೇಕ ಕಾನೂನು ಕ್ರಮಗಳನ್ನು ಸಹ ನಮ್ಮ ದೇಶದಲ್ಲಿ ಇರುವುದನ್ನು ನಾವು ಕಾಣಬಹುದು ಅವುಗಳನ್ನು ಈ ಕೆಳಗಿನಂತೆ ವಿವರಿಸಬಹುದು.

**1950 ಭಾರತದ ಸಂವಿಧಾನ ಮತ್ತು ಮಕ್ಕಳು**

ಸಂವಿಧಾನ ಪರಿಚ್ಛೇದ 21 : ಭಾರತದಲ್ಲಿ ಹುಟ್ಟಿದ ಎಲ್ಲಾ ಮಕ್ಕಳಿಗೆ, ನಾಗರೀಕರಿಗೆ ಬದುಕುವ ಹಕ್ಕು ನೀಡಬೇಕು.

ಸಂವಿಧಾನ ಪರಿಚ್ಛೇದ 21A : 6 ರಿಂದ 14 ವರ್ಷದೊಳಗಿನ ಎಲ್ಲಾ ಮಕ್ಕಳಿಗೆ ಶಿಕ್ಷಣ ಮೂಲಭೂತ ಹಕ್ಕು.

ಸಂವಿಧಾನ ಪರಿಚ್ಛೇದ 24 : 14 ವರ್ಷದ ಒಳಗಿನ ಮಕ್ಕಳನ್ನು ಯಾವುದೇ ಅಪಾಯಕಾರಿ ಕ್ಷೇತ್ರದಲ್ಲಿ ದುಡಿಸುವುದನ್ನು ನಿಷೇಧಿಸಲಾಗಿದೆ.

ಸಂವಿಧಾನ ಪರಿಚ್ಛೇದ 39 : ಪೋಷಕರು ಕುಟುಂಬ ನಡೆಸಲು ಮಕ್ಕಳನ್ನು ಬಳಸಬಾರದು ಮಕ್ಕಳಿಗೆ ಅವರ ಬಾಲ್ಯ, ಆರೋಗ್ಯ, ಸ್ವಾತಂತ್ರ್ಯ, ಘನತೆ ಮತ್ತು ಯೌವನವನ್ನು ರಕ್ಷಿಸಿಕೊಳ್ಳಲು ಅವಕಾಶ ಮತ್ತು ಅನುಕೂಲತೆಗಳನ್ನು ಕಲ್ಪಿಸಿಕೊಳ್ಳಲು ಅವಕಾಶ ಮತ್ತು ಅನುಕೂಲತೆಗಳನ್ನು ಕಲ್ಪಿಸಬೇಕು, ಅವರನ್ನು ಶೋಷಣೆಯಿಂದ ಮುಕ್ತರನ್ನಾಗಿಸಬೇಕು.

ಸಂವಿಧಾನ ಪರಿಚ್ಛೇದ 45 : ಉಚಿತ ಮತ್ತು ಕಡ್ಡಾಯ ಶಿಕ್ಷಣ ಈ ಪರಿಚ್ಛೇದದ ಪ್ರಕಾರ ಭಾರತದಲ್ಲಿ ಹುಟ್ಟಿದ ಪ್ರತಿಯೊಂದು ಮಗುವಿಗೂ 14 ವರ್ಷದವರೆಗೆ ಉಚಿತವಾಗಿ ಕಡ್ಡಾಯವಾಗಿ ಶಿಕ್ಷಣ ನೀಡಬೇಕು.

**ಅ. ಕಾರ್ಖಾನೆಗಳ ಕಾಯ್ದೆ**

ಈ ಕಾಯ್ದೆಯ ಅನ್ವಯ 12 ವರ್ಷ ಪ್ರಾಯವಾಗುವ ಯಾವನೇ ವ್ಯಕ್ತಿಯನ್ನು ಮಗುವೆಂದು ವ್ಯಾಖ್ಯಾನಿಸಿ. 7 ವರ್ಷ ಪ್ರಾಯವಾಗಿರದ ಮಕ್ಕಳನ್ನು ಕೆಲಸಕ್ಕೆ ನಿಮಿಸಿಕೊಳ್ಳುವುದನ್ನು ನಿಷೇಧಿಸುತ್ತದೆ. ದುಡಿಮೆಯ ಅವಧಿ 9 ಗಂಟೆಗೆ ಸೀಮಿತ ಗೊಳಿಸುತ್ತದೆ. ವಿಶ್ರಾಂತಿ ಹಾಗೂ ಮಧ್ಯಂತರ ಮತ್ತು ರಜೆಯ

ಅವಕಾಶವನ್ನು ಕಡ್ಡಾಯಗೊಳಿಸುತ್ತದೆ. ನಂತರ 1891 ರಲ್ಲಿ ಕನಿಷ್ಠ ವಯೋಮಿತಿ 9 ವರ್ಷಗಳಿಗೂ , 1922 ರಲ್ಲಿ 12 ವರ್ಷಕ್ಕೂ ಏರಿಸಲಾಯಿತು. ದುಡಿಯುವ ಅವಧಿ 7 ಗಂಟೆಗೆ ನಿಗದಿಪಡಿಸಲಾಯಿತು.

**ಆ. 1923ರ ಭಾರತೀಯ ವ್ಯಾಪಾರ ಹಡಗಿನ ಕಾಯ್ದೆ**

ಇದರ ಅನ್ವಯ 14 ವರ್ಷಕ್ಕಿಂತ ಕಡಿಮೆಯಿರುವ ಮಗುವನ್ನು ಯಾವುದೇ ರೀತಿಯ ಕೆಲಸಕ್ಕೆ ಬಂದರುಗಳಲ್ಲಾಗಲಿ ಅಥವಾ ವಿದೇಶಿ ಹಡಗುಗಳಲ್ಲಾಗಲಿ ತೊಡಗಿಸುವುದನ್ನು ನಿಷೇಧಿಸುತ್ತದೆ. ದೇಹದಾರ್ಢ್ಯ ಪ್ರಮಾಣ ಪತ್ರವನ್ನು ಹೊಂದಿರುವ ಯುವಕನು ಮಾತ್ರ ಕೆಲಸ ಮಾಡಬಹುದು.

**ಇ. ಮಕ್ಕಳ ಶಾಸನ –1933**

ಈ ಕಾಯ್ದೆಯು 15 ವರ್ಷಗಳಿಗಿಂತ ಕಡಿಮೆ ವಯಸ್ಸಿನ ಮಕ್ಕಳನ್ನು ಬಾಲಕನೆಂದು ವ್ಯಾಖ್ಯಾನ ಮಾಡಿದೆ. ತಂದೆ–ತಾಯಿಯರು, ಇಲ್ಲವೇ ಪೋಷಕರು ಹಣ ಪಡೆದು ಮಕ್ಕಳನ್ನು ಒತ್ತೆ ಇಡುವುದನ್ನು ಈ ಶಾಸನ ನಿಷೇಧಿಸುತ್ತದೆ. ಇದನ್ನು ಜೀತ ಪದ್ಧತಿಯ ಕಾಯ್ದೆ 1978ರ ಅಡಿಯಲ್ಲಿ ಕ್ರಮಕ್ಕೆ ಒಳಪಡಿಸಲಾಗುತ್ತದೆ.

**ಈ. 1938ರ ಪ್ರಕಾರ ಮಕ್ಕಳನ್ನು ಕೆಲಸಕ್ಕೆ ಸೇರಿಸಿಕೊಳ್ಳುವ ಕಾಯ್ದೆ**

ಈ ಕಾಯ್ದೆಯು 15 ವರ್ಷಗಳಿಗಿಂತ ಕಡಿಮೆ ವಯಸ್ಸಿನ ಮಕ್ಕಳನ್ನು ಪ್ರಯಾಣಿಕರನ್ನು ಸಾಗಿಸುವ, ಪದಾರ್ಥಗಳನ್ನು ಸಾಗಿಸುವ, ರೈಲ್ವೆ ಮತ್ತು ಬಂದರುಗಳಲ್ಲಾಗಲಿ ಕೆಲಸಕ್ಕೆ ಸೇರಿಸಿಕೊಳ್ಳುವುದನ್ನು ನಿಷೇಧಿಸಲಾಗಿದೆ. ಈ ಕಾಯ್ದೆ 1939, 1948, 1949, 1950, 1951, 1978 ಹಾಗೂ 1985 ರಲ್ಲಿ ತಿದ್ದುಪಡಿಗೆ ಒಳಗಾಗಿದೆ. ಇದರನ್ವಯ 14 ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳನ್ನು ಬೀಡಿ, ಜಮಾಖಾನೆ, ಸಿಮೆಂಟು ಉದ್ಯಮ, ಬೆಂಕಿಪೆಟ್ಟಿಗೆ ಮಾಡುವ, ಪಟಾಕಿ ತಯಾರಿಸುವ, ಅಭ್ರಕ ಹಾಗೂ ಅರಗಿನಂತಹ ಕಾರ್ಖಾನೆಗಳಲ್ಲಿ ಮಕ್ಕಳನ್ನು ದುಡಿಸುವಂತಿಲ್ಲ. ಇದು ದೇಶದ ಎಲ್ಲಾ ರಾಜ್ಯಗಳಲ್ಲೂ ಜಾರಿಯಲ್ಲಿದೆ.

**ಉ. ಭಾರತೀಯ ಕಾರ್ಖಾನೆಗಳ ಕಾಯ್ದೆ – 1948**

ಈ ಕಾಯ್ದೆ 15 ರಿಂದ 18 ರ ಒಳಗೆ ಇರುವ ವಯಸ್ಸಿನವರನ್ನು ಕಿಶೋರ ಎಂದು, 15 ಕ್ಕಿಂತ ಕಡಿಮೆಯಿರುವವರನ್ನು ಮಗುವೆಂದು ವ್ಯಾಖ್ಯಾನಿಸಲಾಗಿದೆ. ಇದರನ್ವಯ ಮಕ್ಕಳನ್ನು ಕಾರ್ಖಾನೆಗಳಲ್ಲಿ ಸೇರಿಸಿಕೊಳ್ಳುವುದನ್ನು ನಿಷೇಧಿಸಲಾಗಿದೆ. ದುಡಿಮೆಯ ಅವಧಿಯನ್ನು ನಿಗದಿಗೊಳಿಸಲಾಗಿದೆ. ವಾರಾಂತ್ಯದ ರಜೆಯನ್ನು ಕಡ್ಡಾಯಗೊಳಿಸಿದೆ. ಮಕ್ಕಳು ಕೆಲಸ ಮಾಡಿದ ಅವಧಿಯ ಬಗ್ಗೆ ಮಾಹಿತಿ ಪುಸ್ತಕವನ್ನು ಕಡ್ಡಾಯವಾಗಿ ಹೊಂದಿರಬೇಕು.

**ಊ. 1951 ರ ತೋಟಗಳ ಕಾರ್ಮಿಕರ ಕಾಯ್ದೆ**

ಈ ಕಾಯ್ದೆಯ ಪ್ರಕಾರ 12 ವರ್ಷಕ್ಕಿಂತ ಕಡಿಮೆ ವಯಸ್ಸಿನ ಯಾವ ಮಗುವು ತೋಟದಲ್ಲಿ ದುಡಿಯುವಂತಿಲ್ಲ. ಇದು ಟೀ, ಕಾಫಿ, ರಬ್ಬರ್, ಏಲಕ್ಕಿ ತೋಟಗಳಿಗೆ ಅನ್ವಯಿಸುತ್ತದೆ. ಅರ್ಹ ವೈದ್ಯರಿಂದ ದೇಹದಾರ್ಢ್ಯ ಪ್ರಮಾಣಪತ್ರ ಪಡೆಯದೆ ತೋಟಗಾರಿಕೆಯ ಕೆಲಸಗಳಲ್ಲಿ ಸೇರಿಸಿಕೊಳ್ಳುವಂತಿಲ್ಲ.

**ಋ. ಗಣಿ ಕಾಯ್ದೆ – 1952**

ಈ ಕಾಯ್ದೆಯ ಪ್ರಕಾರ 15 ವರ್ಷಕ್ಕಿಂತ ಕಡಿಮೆ ಇರುವ ಮಗು ಗಣಿಯಲ್ಲಿ ಕೆಲಸ ಮಾಡುವಂತಿಲ್ಲ. ಮಗು ಭೂಮಿಯ ಉತ್ಕನನ ಮಾಡುವಲ್ಲಿ ಹಾಗೂ ಭೂಮಿಯ ಒಳಗಡೆ ಕೆಲಸ ಮಾಡುವಂತಿಲ್ಲ. ಅರ್ಹ ವೈದ್ಯರಿಂದ ದೇಹದಾರ್ಢ್ಯ ಪ್ರಮಾಣ ಪತ್ರ ಹೊಂದಿರಬೇಕು. ಪ್ರತಿ ನಾಲ್ಕುವರೆ ಗಂಟೆಗಳ ಸತತ ಕೆಲಸದ ನಂತರ ಅರ್ಧ ಗಂಟೆಗಳ ವಿರಾಮವಿರಬೇಕು. ನಿಗದಿಪಡಿಸಿದ ಅವಧಿಗಿಂತ ಹೆಚ್ಚಾಗಿ ದುಡಿಸಿಕೊಳ್ಳಕೂಡದು.

**ಎ. ಮಕ್ಕಳ ದುಡಿಮೆ ಶಾಸನ –1986**

ಇದು ಮಕ್ಕಳ ದುಡಿಮೆಯ ನಿಯಂತ್ರಣ ಹಾಗೂ ನಿಷೇಧಕ್ಕೊಳಪಡಿಸಿದ ಶಾಸನವಾಗಿದೆ. ಇದು 14 ವರ್ಷದ ಒಳಗಡೆಯಿರುವ ಮಗುವನ್ನು ಕೆಲಸಗಳಲ್ಲಿ ತೊಡಗಿಸುವುದನ್ನು ನಿಷೇಧಿಸಲಾಗಿದೆ. ಮಕ್ಕಳಿಗೆ ಉಚಿತವಾದ ಶಿಕ್ಷಣ, ರಕ್ಷಣೆ ಮತ್ತು ಮನೋರಂಜನೆಯನ್ನು ಒದಗಿಸುವುದಾಗಿದೆ. ಶೋಷಣೆಯನ್ನು ತಪ್ಪಿಸುವುದಾಗಿದೆ. ಇದರ ಜೊತೆಗೆ ಸಂವಿಧಾನದಲ್ಲಿ ಬಾಲಕರ ದುಡಿಮೆಯನ್ನು ಪರಿಗಣಿಸಿದ ಕೆಲವು ಮುಖ್ಯ ವಿಧಿಗಳನ್ನು ಒಳಗೊಂಡಿದೆ.

- ಸಂವಿಧಾನದ 24ನೇ ಪರಿಚ್ಛೇದದ ಪ್ರಕಾರ 14 ವರ್ಷದ ಒಳಗೆ ಇರುವ ಯಾವುದೇ ಮಗುವನ್ನು ಕಾರ್ಖಾನೆಯಲ್ಲಾಗಲಿ ಅಥವಾ ಅಪಾಯಕಾರಿಯಾದ ಉದ್ಯೋಗದಲ್ಲಾಗಲಿ ನೇಮಿಸಿಕೊಳ್ಳುವಂತಿಲ್ಲ.
- ಸಂವಿಧಾನದ ಪರಿಚ್ಛೇದ 39(ಈ) ಪ್ರಕಾರ ಮಗುವಿನ ಬಾಲ್ಯ ಮತ್ತು ಯೌವನ ಎರಡನ್ನೂ ಶೋಷಣೆಯಿಂದ ಮತ್ತು ನೈತಿಕವಾಗಿ ಭೌತಿಕವಾಗಿ ತೊರೆಯುವಿಕೆಯಿಂದ ಸಂರಕ್ಷಿಸತಕ್ಕದ್ದು.
- ಸಂವಿಧಾನದ ಪರಿಚ್ಛೇದ 45ರ ಪ್ರಕಾರ ಪ್ರಾರಂಭವಾದ ಹತ್ತು ವರ್ಷಗಳೊಳಗೆ ರಾಜ್ಯಸರ್ಕಾರ ಪ್ರತಿ ಮಗುವಿಗೂ 14 ವರ್ಷವಾಗುವವರೆಗೂ ಮುಕ್ತ ಹಾಗೂ ಕಡ್ಡಾಯ ಶಿಕ್ಷಣ ನೀಡಲು ಪ್ರಯತ್ನಿಸಬೇಕು.

**1996 ಡಿಸೆಂಬರ್ 10 ರ ಸುಪ್ರೀಂಕೋರ್ಟಿನ ಐತಿಹಾಸಿಕ ತೀರ್ಪು**

ತಮಿಳುನಾಡಿನ ಶಿವಕಾಶಿಯ ಬೆಂಕಿ ಪೊಟ್ಟಣ ಕಾರ್ಖಾನೆಯಲ್ಲಿ ದುಡಿಯುವ 40 ಮಕ್ಕಳನ್ನು ಸಂಜೆ ತುಂಬಿಕೊಂಡು ಹೋಗುತ್ತಿದ್ದ ಟ್ರಕ್ ಅಪಘಾತಕ್ಕೀಡಾಯಿತು. ಈ ದುರ್ಘಟನೆಯ ಆಧಾರದ

ಮೇಲೆ ತಮಿಳುನಾಡಿನ ಹಿರಿಯ ಅನುಭವಿ ವಕೀಲರಾದ ಶ್ರೀ ಎಂ.ಸಿ.ಮೆಹತಾ ಅವರು ತಮಿಳುನಾಡು ಸರ್ಕಾರದ ವಿರುದ್ಧ ಮೊಕದ್ದಮೆ ಹೂಡಿದರು. (ರಿಟ್ ಅರ್ಜಿ– ನಂ. 465–1986) ಸುಮಾರು 10 ವರ್ಷಗಳ ವಾದ ವಿವಾದದ ನಂತರ ಡಿಸೆಂಬರ್ 10, 1996 ರಂದು ಸುಪ್ರೀಂ ಕೋರ್ಟ್ ಒಂದು ಐತಿಹಾಸಿಕ ತೀರ್ಪು ನೀಡಿತು. ಅದರ ಮುಖ್ಯಾಂಶಗಳು ಈ ಕೆಳಗಿನಂತಿವೆ.

- ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಉಸ್ತುವಾರಿಯಲ್ಲಿ ಬಾಲಕಾರ್ಮಿಕರ ಪುನರ್ವಸತಿ ಮತ್ತು ಕಲ್ಯಾಣನಿಧಿ ಸ್ಥಾಪನೆ.
- 14 ವರ್ಷದ ಒಳಗಿನ ಯಾವುದೇ ಮಕ್ಕಳನ್ನು ಯಾವುದೇ ಕಾರಣಕ್ಕೂ ಅಪಾಯಕಾರಿ ಕ್ಷೇತ್ರದಲ್ಲಿ ದುಡಿಸುವುದನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ.
- ಒಂದು ವೇಳೆ ದುಡಿಸಿದಲ್ಲಿ ಮಾಲೀಕರು ರೂ. 20,000 ದಂಡವನ್ನು ಬಾಲಕಾರ್ಮಿಕನ/ಳ ಕುಟುಂಬಕ್ಕೆ ತೆರಬೇಕು.
- ಹಾಗೂ ಸರ್ಕಾರವು ರೂ. 5,000 ದಂಡ ತೆರಬೇಕು. ಒಂದು ವೇಳೆ ಸರ್ಕಾರಕ್ಕೆ ರೂ. 5,000 ದಂಡ ತೆರಲು ಆಗದಿದ್ದಲ್ಲಿ ಸರ್ಕಾರ ಆ ಕುಟುಂಬದ ಒಬ್ಬ ನಿರುದ್ಯೋಗಿ ಪ್ರೌಢನಿಗೆ ಉದ್ಯೋಗ ನೀಡಬೇಕು.
- ಒಟ್ಟು ರೂ. **20,000** ಅಥವಾ **25,000** ವನ್ನು ಜಿಲ್ಲಾಧಿಕಾರಿಗಳ ಕಲ್ಯಾಣನಿಧಿ ಯಲ್ಲಿ ಠೇವಣಿ ಇಟ್ಟು ಅದರ ಬಡ್ಡಿಯಲ್ಲಿ ಆ ಮಗುವಿಗೆ ಶಿಕ್ಷಣ ನೀಡಬೇಕು.
- ಪುನರ್ವಸತಿ ಮಾಡಿದ ಮಕ್ಕಳ ಶಿಕ್ಷಣಕ್ಕೆ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು ಶಿಕ್ಷಣ ಇಲಾಖೆಯ ಜವಾಬ್ದಾರಿಯಾಗಿದೆ.

**1997, ಜೂನ್ 6 ರ ಕರ್ನಾಟಕ ಹೈಕೋರ್ಟು ತೀರ್ಪು**

1996 ಡಿಸೆಂಬರ್ 30 ರಂದು CACL-K ಸಂಘಟಿಸಿದ ಸಾರ್ವಜನಿಕ ಫಿರ್ಯಾದು ಕಾರ್ಯಕ್ರಮ ಪತ್ರಿಕಾ ವರದಿಯ ಆಧಾರದ ಮೇಲೆ ಬೆಂಗಳೂರಿನ ವಕೀಲರೊಬ್ಬರು ಕರ್ನಾಟಕ ಹೈ ಕೋರ್ಟಿನಲ್ಲಿ ಸಾರ್ವಜನಿಕ ಮೊಕದ್ದಮೆ ಹೂಡಿದರು. ನಂತರ CACL-K ಗೆ ಈ ಮೊಕದ್ದಮೆಯನ್ನು ಮುಂದುವರೆಸುವಂತೆ ಕರ್ನಾಟಕ ಹೈ ಕೋರ್ಟು ಆದೇಶಿಸಿದ ಪ್ರಕಾರ, ಸುಮಾರು 6 ತಿಂಗಳ ಕಾಲ CBCL-K ಫಿರ್ಯಾದಿನಲ್ಲಿ ಕೋರ್ಟಿಗೆ ಎಲ್ಲಾ ವಿಚಾರ, ವಿಷಯಗಳನ್ನು ಮಂಡಿಸಿದ ನಂತರ ದಿನಾಂಕ 6–6–1997 ರಂದು ಕರ್ನಾಟಕ ಹೈ ಕೋರ್ಟು ಮೊಟ್ಟ ಮೊದಲ ಬಾರಿಗೆ ತೀರ್ಪು ನೀಡಿತು. ಅದರ ಮುಖ್ಯಾಂಶಗಳು ಈ ಕೆಳಗಿನಂತಿವೆ.

- 10 ವರ್ಷದ ಒಳಗಿನ ಯಾವುದೇ ಮಗುವನ್ನು ಯಾವುದೇ ಕ್ಷೇತ್ರದಲ್ಲಿ ಯಾವುದೇ ಕಾರಣಕ್ಕೂ ದುಡಿಸುವುದನ್ನು ಸಂಪೂರ್ಣವಾಗಿ ನಿಷೇಧಿಸಿದೆ.
- ರೇಷ್ಮೆ ಮತ್ತು ಹತ್ತಿ ಉದ್ಯಮಗಳು ಮಕ್ಕಳಿಗೆ ಅಪಾಯಕಾರಿ ಎಂದು ಪರಿಗಣಿಸಲಾಗಿದೆ.
- 14 ವರ್ಷದ ಒಳಗಿನ ಎಲ್ಲಾ ಮಕ್ಕಳು 'ಮುಖ್ಯ ಶಿಕ್ಷಣ ವಾಹಿನಿಯಲ್ಲಿ' ಕಲಿಯತ್ತಿರಬೇಕು.
- ತಕ್ಷಣ ರೇಷ್ಮೆ ಕ್ಷೇತ್ರದಲ್ಲಿ ದುಡಿಯುತ್ತಿರುವ ಮಕ್ಕಳ ಸಮೀಕ್ಷೆ ನಡೆಸಿ ಅವರ ಪುನರ್ವಸತಿಗೆ ಕಾರ್ಮಿಕ ಇಲಾಖೆ ಮುಂದಿನ ಕ್ರಮ ಕೈಗೊಳ್ಳಬೇಕು.
- ಮನೆ ಬಿಟ್ಟ ಮಕ್ಕಳು ಮತ್ತು ಬೀದಿ ಮಕ್ಕಳು ಬೀದಿಯಲ್ಲಿರದಂತೆ ಕರ್ನಾಟಕ ಸರ್ಕಾರ ಅವರ ಶಿಕ್ಷಣಕ್ಕೆ ಪುನರ್ವಸತಿಗೆ ಸೂಕ್ತ ವ್ಯವಸ್ಥೆ ಮಾಡಬೇಕು.

ಈ ರೀತಿಯಲ್ಲಿ ಭಾರತ ಸರ್ಕಾರ ಹಾಗೂ ಸಂವಿಧಾನದಲ್ಲಿ ಮಕ್ಕಳಿಗೆ ತನ್ನದೇ ರೀತಿಯ ಹಲವಾರು ಕಾನೂನು ಕ್ರಮಗಳು ಹಾಗೂ ಸಂವಿಧಾನ ವಿಧಿಗಳನ್ನು ಒಳಗೊಂಡಿದೆ ಎಂದು ಹೇಳಬಹುದು. ಇವು ಕೇವಲ ಕಾನೂನುಗಳಾಗಿಯೇ ಉಳಿದಿರುವುದು ವಿಪರ್ಯಾಸ. ಇದರ ಅನುಷ್ಠಾನ ಕಾರ್ಯಗತವಾಗಲು ಸರ್ಕಾರಗಳು ಕಠಿಣ ಕ್ರಮಗಳನ್ನು ತೆಗೆದುಕೊಳ್ಳಬೇಕಾಗಿದೆ.

**5.3. ಬಾಲಕಾರ್ಮಿಕರ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ**

ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಬಾಲಕಾರ್ಮಿಕರ ಸಮಸ್ಯೆಗಳನ್ನು ನಿವಾರಿಸುವಲ್ಲಿ ಅನೇಕ ಸರ್ಕಾರೇತರ ಸಂಘ ಸಂಸ್ಥೆಗಳು ಕಾರ್ಯನಿರತವಾಗಿವೆ. ಅವುಗಳಲ್ಲಿ ಪ್ರಮುಖವಾಗಿ 'ಡಾನ್ ಬಾಸ್ಕೋ' ಸಂಸ್ಥೆ ಪ್ರಮುಖವಾಗಿದೆ. ಇದಲ್ಲದೇ 'ಮಕ್ಕಳ ಅಭಿವೃದ್ಧಿ ಸೇವಾ ಸಂಸ್ಥೆ' ಸಹ ಮಕ್ಕಳ ಅಭಿವೃದ್ಧಿಗೆ ಮೀಸಲಾದ ಸಂಸ್ಥೆಗಳಾಗಿವೆ. ಹಾಗೆಯೇ 'ವಿನಾಯಕ ಗ್ರಾಮೀಣ ಅಭಿವೃದ್ಧಿ ಸಂಸ್ಥೆ' ಸಹ ಬಾಲಕಾರ್ಮಿಕರ ಸಮಸ್ಯೆಗಳಿಗೆ ಹಾಗೂ ಮಕ್ಕಳ ಅಭಿವೃದ್ಧಿಗೆ ತಮ್ಮ ಸೇವೆಯನ್ನು ಸಲ್ಲಿಸುತ್ತಿರುವ ಪ್ರಮುಖ ಸರ್ಕಾರೇತರ ಸಂಘ ಸಂಸ್ಥೆಗಳಾಗಿವೆ.

ಮಕ್ಕಳ ಸಂರಕ್ಷಣೆಯಲ್ಲಿ ವಿಶ್ವರಾಷ್ಟ್ರ ಸಂಸ್ಥೆಯ ಕೆಲವು ಸಂಸ್ಥೆಗಳು

ಮಕ್ಕಳ ಯೋಗಕ್ಷೇಮ ನೋಡಿಕೊಳ್ಳುವಲ್ಲಿ ವಿಶ್ವಸಂಸ್ಥೆಯ ಎರಡು ಅಂಗ ಸಂಸ್ಥೆಗಳು ಪ್ರಮುಖವಾಗಿ ಇಂದು ಕಾರ್ಯ ನಿರ್ವಹಿಸುತ್ತವೆ.

**ವಿಶ್ವ ಆರೋಗ್ಯ ಸಂಸ್ಥೆ (World Health Organization)**

ಇದು ವಿಶ್ವಸಂಸ್ಥೆಯ ಅಂಗಸಂಸ್ಥೆಯಾಗಿದ್ದು ಜಗತ್ತಿನಲ್ಲಿರುವ ಎಲ್ಲಾ ಜನರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತದೆ. ವಿಶೇಷವಾಗಿ ಮಕ್ಕಳ ಮತ್ತು ತಾಯಿಂದರ ಆರೋಗ್ಯವನ್ನು ಕಾಪಾಡಲು ಪ್ರಯತ್ನಿಸುವುದು.

**ವಿಶ್ವರಾಷ್ಟ್ರಸಂಸ್ಥೆಯ ಮಕ್ಕಳ ತುರ್ತು ನಿಧಿ (UNICEF) (United Nations Children's Emergency Fund)**

ಮಕ್ಕಳನ್ನು ಅವರ ಎಳೆ ವಯಸ್ಸಿನಲ್ಲಿ ಕಾಡುವ 6 ಪ್ರಮುಖ ರೋಗಗಳ ನಿವಾರಣೆಯನ್ನೂ ಈ ಸಂಸ್ಥೆಯು ತುರ್ತುಕ್ರಮವನ್ನು ಕೈಕೊಂಡಿದೆ. ಇದರ ಜೊತೆಗೆ ಮಕ್ಕಳ ತುರ್ತು ಪೌಷ್ಠಿಕಾಂಶ ಆಹಾರ, ಮಕ್ಕಳ ಭೌತಿಕ ಬೆಳವಣಿಗೆಗೆ, ಆದ್ಯತೆ ಮಕ್ಕಳಿಗೆ ರೋಗ ನಿರೋಧಕ ಔಷಧಗಳನ್ನು ಪೂರೈಸುವಿಕೆ ಮಕ್ಕಳಿಗೆ ತಾಯಿಯ ಹಾಲಿನ ಮಹತ್ವವನ್ನು ತಿಳಿಸಿಕೊಡುವುದು ಮುಂತಾದ ಮಕ್ಕಳ ಕಲ್ಯಾಣಕ್ಕೆ ಸಂಬಂಧಿಸಿದ ಕಲ್ಯಾಣ ಕಾರ್ಯಕ್ರಮಗಳನ್ನು ಈ ಸಂಸ್ಥೆಯು ಹಮ್ಮಿಕೊಂಡಿದೆ.

**ಹೆಣ್ಣು ಮಗುವಿನ ಸಂರಕ್ಷಣೆಗೆ ವಿಶೇಷ ಆದ್ಯತೆ**

ಸಾರ್ಕ ದೇಶಗಳ ಒಕ್ಕೂಟವು 1990ರ ದಶಕವನ್ನು 'ಹೆಣ್ಣು ಮಗುವಿನ ವರ್ಷ'(The year of the Girl Child- 1990) ಜಗತ್ತಿನಲ್ಲಿ ನಡೆಯುವ ಹೆಣ್ಣು ಮಕ್ಕಳ ತಾತಮ್ಯ, ಶೋಷಣೆ ವಿರುದ್ಧ ಹೋರಾಡುವುದೇ ಈ ಘೋಷಣೆಯ ಮುಖ್ಯ ಉದ್ದೇಶ. ಒಂದು ದಶಕವನ್ನು ಅಂದರೆ 1990–2000– ಹೆಣ್ಣು ಮಕ್ಕಳ ದಶಕ (Decade of the Girl Child)ವೆಂದು ಘೋಷಿಸಿ ಹೆಣ್ಣು ಮಕ್ಕಳ ಕಲ್ಯಾಣಕ್ಕೆ ವಿಶೇಷ ಆದ್ಯತೆಯನ್ನು ಕೊಡಲಾಗಿದೆ.

**ರಾಷ್ಟ್ರೀಯ ಶಿಶು ಅಭಿವೃದ್ಧಿ ಮಂಡಳಿಯ ಸ್ಥಾಪನೆ (Establishment of National Child Development Board)**

ಭಾರತ ಸರ್ಕಾರವು ಅನುಷ್ಠಾನಕ್ಕೆ ತಂದಿರುವ ಮಕ್ಕಳಿಗೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಪರಾಮರ್ಶೆ ಮಾಡಿ ಸರ್ಕಾರಕ್ಕೆ ವರದಿ ಸಲ್ಲಿಸಲು 1974ರ ಡಿಸೆಂಬರ್ ತಿಂಗಳಲ್ಲಿ– ರಾಷ್ಟ್ರೀಯ ಶಿಶು ಅಭಿವೃದ್ಧಿ ಮಂಡಳಿಯು ಅಸ್ತಿತ್ವಕ್ಕೆ ಬಂದಿದೆ. ಇದು ಕೂಡಾ ಇಂದು ಮಕ್ಕಳ ಶ್ರೇಯೋಭಿವೃದ್ಧಿಗಾಗಿ ಹಲವಾರು ಉದ್ದೇಶಗಳನ್ನು ಹೊಂದಿದ್ದು ಮಕ್ಕಳ ಕಲ್ಯಾಣವನ್ನು ಕೈಕೊಳ್ಳುತ್ತಿದೆ.

**ಸ್ವಯಂ ಸೇವಾ ಸಂಘಟನೆಗಳ ಪಾತ್ರ– (The Role of Voluntary Organization)**

ಮಕ್ಕಳ ಕಲ್ಯಾಣಕ್ಕೆ ಸಂಬಂಧಿಸಿದಂತೆ ಇಂದು ಅನೇಕ ಸ್ವಯಂ ಸೇವಾ ಸಂಘಟನೆಗಳು ಸರ್ಕಾರದ ನೆರವಿನೊಂದಿಗೆ ಹಲವಾರು ಬಗೆಯ ಕಾರ್ಯಕ್ರಮಗಳನ್ನು ಹಾಕಿಕೊಂಡಿವೆ. ಅವುಗಳೆಂದರೆ

ಎ. ಸಮಗ್ರ ಶಿಶು ಅಭಿವೃದ್ಧಿ ಸೇವೆ(Integrated Child Development Services) ಈ ಸಂಸ್ಥೆಯ ಮುಖ್ಯ ಉದ್ದೇಶವೆಂದರೆ 6 ವರ್ಷಗಳಿಗೂ ಕೆಳಗಿನ ಮಕ್ಕಳಿಗೆ ಪೌಷ್ಠಿಕಾಂಶ ಆಹಾರ, ಉತ್ತಮ ಆರೋಗ್ಯ, ಶಿಕ್ಷಣ ಸೌಲಭ್ಯ ಇತ್ಯಾದಿಗಳನ್ನು ಕಲ್ಪಿಸಿಕೊಡುವುದೇ ಆಗಿದೆ. ಈ ಮೇಲಿನ ಎಲ್ಲ ಸೌಲಭ್ಯಗಳನ್ನು ಇಂದು ಅಂಗನವಾಡಿಗಳ ಮುಖಾಂತರ ಕಲ್ಪಿಸಿಕೊಡುವ ವ್ಯವಸ್ಥೆ ಮಾಡಲಾಗುತ್ತಿದೆ.

ಇತರ ಸಂಸ್ಥೆಗಳು

ಎ. ಬಾಲವಾಡಿಗಳ ಸ್ಥಾಪನೆ

ಕೇಂದ್ರೀಯ ಸಮಾಜ ಕಲ್ಯಾಣ ಮಂಡಳಿ(Central Social Welfare Board) ಹರಿಜನ ಸೇವಕ ಸಂಘ, ಭಾರತೀಯ ಆದಿಮಜಾತಿ ಸೇವಕ ಸಂಘ ಹಾಗೂ ಸ್ಥಳೀಯ ಯುವಕ ಸಂಘ- ಸಂಸ್ಥೆಗಳು ಇಂದು ಸರ್ಕಾರದ ನೆರವನ್ನು ಪಡೆದುಕೊಂಡು ಬಾಲವಾಡಿಗಳನ್ನು ಸ್ಥಾಪಿಸಿ ಅದರ ಮುಖಾಂತರ ಮಕ್ಕಳ ಸಮಗ್ರ ಕಲ್ಯಾಣಕ್ಕಾಗಿ ಪ್ರಯತ್ನಿಸುತ್ತವೆ.

ಬಿ. ಆದಿ ಬಾಲ್ಯಾವಸ್ಥೆ ಶಿಕ್ಷಣ(Early Childhood Education- ECE)

ರಾಜಸ್ತಾನ, ಬಿಹಾರ, ಓರಿಸ್ಸಾ, ಮಧ್ಯಪ್ರದೇಶ ಮುಂತಾದ ಶೈಕ್ಷಣಿಕವಾಗಿ ಹಿಂದುಳಿದ ರಾಜ್ಯಗಳಲ್ಲಿ ಸುಮಾರು 4500ಕ್ಕೂ ಹೆಚ್ಚು ಇಂತಹ ಕೇಂದ್ರಗಳನ್ನು ನಡೆಸುತ್ತಿದ್ದು ಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹ ಕೊಡಲಾಗುತ್ತದೆ.

ಸಿ. ಶಿಶುವಿಹಾರಗಳು, ರಾಷ್ಟ್ರೀಯ ಶಿಶುವಿಹಾರ ನಿಧಿಯ ಸ್ಥಾಪನೆ.

ಡಿ. ಬೀದಿ ಮಕ್ಕಳ ಕಲ್ಯಾಣ ಯೋಜನೆ(Scheme for the Welfare of Street Children)

ಜಾಗತಿಕವಾಗಿ ಮಕ್ಕಳನ್ನು ಕುರಿತು ಅರಿವು, ಕಾಳಜಿ ಈ ದಿನಗಳಲ್ಲಿ ಹೆಚ್ಚಾಗುತ್ತಿದೆ. ಈ ಹಿಂದೆ ಕೇವಲ ಸೇವೆ ಒದಗಿಸುವ, ದಾನಧರ್ಮ ಮಾಡಿತ್ತಿದ್ದ ಮನೋಭಾವ ಬದಲಾಗುತ್ತಿದೆ. ಬಡವರು, ದುರ್ಬಲರು ಮತ್ತು ಮಕ್ಕಳೆಂದರೆ ನಾವು ಕೊಡುವ ಸೇವೆಗಳ, ಸೌಕರ್ಯಗಳ ಮತ್ತು ಅವಕಾಶಗಳನ್ನು ಪಡೆಯುವ, ಬಳಸುವ, ಸ್ವೀಕರಿಸುವ ಗುರಿಗುಂಪುಗಳು ಎನ್ನುವ ಧೋರಣೆಗಳೂ ಇಂದಿನ ದಿನಗಳಲ್ಲಿ ಬದಲಾಗುತ್ತಿದೆ. ಇದಕ್ಕೆಲ್ಲಾ ಮೂಲ ಕಾರಣ, ವಿವಿಧ ವರ್ಗಗಳು, ವ್ಯಕ್ತಿಗಳು ಮತ್ತು ಗುಂಪುಗಳನ್ನು ಕುರಿತು ಬೆಳೆದಿರುವ 'ಹಕ್ಕು'ಗಳ ದೃಷ್ಟಿಕೋನ.

ಬಹಳ ಹಿಂದಿನಿಂದಲೂ ಮಕ್ಕಳ ವಿಚಾರಗಳನ್ನು ಎದುರಿಟ್ಟುಕೊಂಡು ಕೆಲಸ ಮಾಡುವ ಸ್ವಯಂಸೇವಾ ಸಂಘಟನೆಗಳು ಭಾರತದಾದ್ಯಂತ ಚಟುವಟಿಕೆಯಿಂದ ಇರುವುದನ್ನು ಗಮನಿಸಬಹುದು. ಮಕ್ಕಳ ಆರೋಗ್ಯ, ಮಕ್ಕಳ ಶಿಕ್ಷಣ, ಮಕ್ಕಳ ರಕ್ಷಣೆ ಮತ್ತು ಇತ್ತೀಚಿನ ದಿನಗಳಲ್ಲಿ ಮಕ್ಕಳ ಭಾಗವಹಿಸುವಿಕೆ ಎನ್ನುವ ವಿಚಾರದಲ್ಲೂ ಸರ್ಕಾರೇತರ ಅಥವಾ ಸ್ವಯಂಸೇವಾ ಸಂಘಟನೆಗಳು ತೊಡಗಿಕೊಂಡಿವೆ. ವಿಶ್ವಸಂಸ್ಥೆ 1989ರಲ್ಲಿ ಎದುರಿಟ್ಟ ಮಕ್ಕಳ ಹಕ್ಕುಗಳ ಒಡಂಬಡಿಕೆಗೆ ಭಾರತ ಮೊದಮೊದಲು ಹಿಂಜರಿಕೆ ತೋರಿದ್ದರೂ, ಅಂತಾರಾಷ್ಟ್ರೀಯ ಕಾನೂನು ಎಂಬ ಸ್ಥಾನಮಾನವನ್ನು ಪಡೆದ ಮಕ್ಕಳ ಹಕ್ಕುಗಳ ಒಡಂಬಡಿಕೆಗೆ 1992ರಲ್ಲಿ ಸಹಿ ಮಾಡಿ ತನ್ನ ಬದ್ಧತೆಯನ್ನು ಮಕ್ಕಳಿಗೆ ತೋರಿತು. ಈ ಮೂಲಕ ದೇಶದ ಒಟ್ಟು ಜನಸಂಖ್ಯೆಯಲ್ಲಿ ಸುಮಾರು 45 ಪ್ರತಿಶತ ಇರುವ ಮಕ್ಕಳನ್ನು ಕುರಿತು ಹೊಸ ರೀತಿಯಲ್ಲಿ ಚಿಂತಿಸುವ, ಕ್ರಮಗಳನ್ನು ಕೈಗೊಳ್ಳುವ, ಯೋಜಿಸುವ, ಅನುಸರಿಸುವ ರೀತಿಯನ್ನೇ ಹೊರತಂದಿತು.

ಸರ್ಕಾರದ ವಿವಿಧ ಇಲಾಖೆಗಳು ಮಕ್ಕಳಿಗಾಗಿ ದುಡಿಯುತ್ತಿರುವುದು ಸರ್ವವಿದಿತ. ಆದರೂ, ಮಕ್ಕಳು ಎಂದ ಕೂಡಲೇ ಎಲ್ಲರ ಗಮನಕ್ಕೆ ಬರುವುದು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಶಿಕ್ಷಣ ಇಲಾಖೆ, ಸ್ವಲ್ಪ ಮಟ್ಟಿಗೆ ಆರೋಗ್ಯ ಇಲಾಖೆ. ಇನ್ನೂ ಮುಂದೆ ಹೋದಲ್ಲಿ ಪ್ರಾಯಶಃ ಈಗೀಗ ಚರ್ಚೆಗೆ ಬರುತ್ತಿರುವ ಅಂಗವಿಕಲರ ಕಲ್ಯಾಣ ಇಲಾಖೆ ಮತ್ತು ಸಮಾಜ ಕಲ್ಯಾಣ ಇಲಾಖೆ ನೆನಪಿಗೆ ಬರುವುದು. ವಾಸ್ತವವಾಗಿ, ಸರ್ಕಾರದ ಎಲ್ಲಾ ಇಲಾಖೆಗಳು ಮಕ್ಕಳ ಬದುಕನ್ನು ಒಂದಲ್ಲ ಒಂದುರೀತಿಯಲ್ಲಿ ಮುಟ್ಟುತ್ತಲೇ ಇವೆ. ಉದಾಹರಣೆಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ನಾಗರಿಕ ಸರಬರಾಜು, ಆಹಾರ ಇಲಾಖೆ, ನೀರು ಮತ್ತು ಒಳಚರಂಡಿ ಇಲಾಖೆ, ನಗರಾಭಿವೃದ್ಧಿ ಇಲಾಖೆ, ವಿದ್ಯುತ್ ಪ್ರಸರಣ ಇಲಾಖೆ, ಒಂದೇ ಎರಡೇ? ಇಲ್ಲರೂ ತಮ್ಮ ತಮ್ಮ ಕೆಲಸಗಳನ್ನು ಮಾಡುವ ಮೂಲಕ ಬದುಕಿಗೆ ನೆರವಾಗುವ ಕೆಲಸದಲ್ಲಿ ನಿರತರಾಗಿದ್ದಾರೆ ಎಂದೇ ಹೇಳಬಹುದು.

ಅದೇ ರೀತಿ ಸ್ವಯಂಸೇವಾ ಸಂಘಟನೆಗಳು ಕೂಡ, ದೇಶದ ಯಾವುದೇ ಮೂಲೆಯಲ್ಲಿ ಎಂತಹುದೇ ಅಭಿವೃದ್ಧಿ ಕೆಲಸದಲ್ಲಿ ತೊಡಗಿರುವ ಸ್ವಯಂಸೇವಾ ಸಂಘಟನೆಗಳು ತಮ್ಮ ಕೆಲಸಗಳ ಮೂಲಕ ಮಕ್ಕಳ ಬದುಕನ್ನು ಮುಟ್ಟುವುದು ಈಗಿನ ವಾಸ್ತವ. ಅದು ಮಹಿಳೆಯರೊಂದಿಗಿನ ಕೆಲಸ, ಆರೋಗ್ಯ, ಆಡಳಿತದಲ್ಲಿ ಪಾರದರ್ಶಕತೆ, ಪರಿಸರ, ನೀರು, ಶೌಚಾಲಯ, ನಗರಾಭಿವೃದ್ಧಿ, ರಾಜಕೀಯ ರಂಗದಲ್ಲಿ ಪಾರದರ್ಶಕತೆ ತರುವುದು, ಇತ್ಯಾದಿ ಇದ್ದರೂ ಅವರೆಲ್ಲರೂ ಮಕ್ಕಳನ್ನು ಮತ್ತು ಮಕ್ಕಳ ಹಕ್ಕುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಯೋಚಿಸುವ ಅವಶ್ಯಕತೆ ಇಂದು ಬಂದಿದೆ.

ಸರ್ಕಾರೇತರ ಅಥವಾ ಸ್ವಯಂಸೇವಾ ಸಂಘಟನೆಗಳು ಎನ್ನುವ ಹೆಸರಿಗೆ ಹಲವರು ವಿವಿಧ ರೀತಿಯ ಅರ್ಥಗಳನ್ನು ತಳಕು ಹಾಕುತ್ತಾರೆ. ಇದು ಯಾರ ಸೇವೆಗೆ? ಇಲ್ಲಿ ಎಲ್ಲವನ್ನೂ ಉಚಿತವಾಗಿ ಮಾಡುತ್ತಾರೇನು? ಸ್ವಯಂಸೇವಾ ಸಂಘಟನೆಗಳಲ್ಲಿರುವವರಿಗೆ ಯಾಕೆ ಸಂಬಳ ಕೊಡುತ್ತಾರೆ? ಇಲ್ಲಿ ಕೆಲಸ ಮಾಡಲು ವಿಶೇಷವಾದ ಅರ್ಹತೆಗಳು ಬೇಕೇನು? ಈ ಸಂಸ್ಥೆಗಳಿಗೆ ಯಾರು ಹಣ ಕೊಡುತ್ತಾರೆ? ಇವನ್ನೇಕೆ ಸರ್ಕಾರೇತರ ಎನ್ನಬೇಕು? ಇತ್ಯಾದಿ.

ಸ್ವಯಂಸೇವಾ ಸಂಘಟನೆಗಳು 1839ರ ಹೊತ್ತಿಗೆ ಯುರೋಪಿನಲ್ಲಿ ಆರಂಭವಾಗಿದ್ದವು. 1945ರಲ್ಲಿ ವಿಶ್ವಸಂಸ್ಥೆಯ ಸಭೆಯಲ್ಲಿ ಇಂತಹ ಗುಂಪುಗಳನ್ನು ಆಹ್ವಾನಿಸಿದ್ದಾಗ ಅವನ್ನು 'ಸರ್ಕಾರೇತರ ಸಂಘಟನೆಗಳು' ಎಂದು ಗುರುತಿಸಲಾಗಿತ್ತು. ಹೀಗಾಗಿ ಸರ್ಕಾರೇತರ ಎಂದರೆ ಖಾಸಗಿಯಾಗಿ ಜನರ ಸ್ವಯಂಸೇವೆ ಮಾಡುವ ಗುಂಪುಗಳು ಎನ್ನುವ ಹಲವು ಆಯಾಮಗಳ ಸಂಘಟನೆಗಳು ಪ್ರಚಲಿತವಾಗಿವೆ.

ಭಾರತದಲ್ಲಿ ಸ್ವಯಂಸೇವಾ ಸಂಘಟನೆಗಳನ್ನು ಹಲವಾರು ಹೆಸರುಗಳಲ್ಲಿ / ಕಾಯಿದೆಗಳಡಿಯಲ್ಲಿ ನೊಂದಾಯಿಸಿ ಆರಂಭಿಸಬಹುದು. ಬಹಳ ಜನಪ್ರಿಯವಾದ ವಿಧಾನ, ಸಂಘಗಳ

ನೊಂದಣಿ ಕಾಯಿದೆ 1860ರಂತೆ ನೊಂದಾಯಿತವಾಗುವ ಜನರ ಗುಂಪು. ಎರಡನೆಯ ರೀತಿಯದು ಭಾರತ ಟ್ರಸ್ಟ್ ಕಾಯಿದೆ 1882 ಅಡಿಯಲ್ಲಿ ನೊಂದಾಯಿತವಾಗುವ ಸಂಸ್ಥೆಗಳು. ತೀರಾ ಇತ್ತೀಚಿಗೆ ಹೆಚ್ಚು ಪ್ರಚಲಿತವಾಗುತ್ತಿರುವುದು ಲಾಭರಹಿತ ಕಂಪನಿಗಳು (ಕಂಪನಿಗಳ ನೊಂದಣಿ ಕಾಯಿದೆ 1956ರ ಸೆಕ್ಷನ್ 25ರಂತೆ). ಇವಲ್ಲದೆ ಸಹಕಾರ ಸಂಘಗಳ ಕಾಯಿದೆ 1959, ಕಾರ್ಮಿಕರ ಸಂಘಟನೆ ಕಾಯಿದೆ 1926 ಅಡಿಯಲ್ಲೂ ಸಂಘಟನೆಗಳನ್ನು ಆರಂಭಿಸಿ ಅಭಿವೃದ್ಧಿ ಕೆಲಸಗಳಲ್ಲಿ ತೊಡಗಬಹುದು. ಇವುಗಳೊಂದಿಗೆ ಧಾರ್ಮಿಕ ಟ್ರಸ್ಟ್ ಕಾಯಿದೆ 1920, ಕಾಯಿದೆ 1959ರಂತೆಯೂ ಸಂಘಟನೆಗಳನ್ನು ಆರಂಭಿಸಿ ಜನಸೇವೆಯಲ್ಲಿ ತೊಡಗಿಕೊಳ್ಳಬಹುದು. ಭಾರತ ಸರ್ಕಾರದ ಒಂದು ಅಂದಾಜಿನಂತೆ ನಮ್ಮ ದೇಶದಲ್ಲಿ 33 ಲಕ್ಷಕ್ಕೂ ಮೀರಿ ಸ್ವಯಂಸೇವಾ ಸಂಘಟನೆಗಳು ಇರಬಹುದೆಂದು ವರದಿ ಹೇಳುತ್ತದೆ.

ಸ್ವಯಂಸೇವಾ ಸಂಘಟನೆಗಳನ್ನು ನಡೆಸಲು ಉಮೇದು, ಚಿಂತನೆ ಮತ್ತು ಸಮರ್ಪಣಾ ಭಾವನೆಯಿರುವ ಜನರೊಂದಿಗೆ ಆರ್ಥಿಕ ನೆರವು ಅತ್ಯಗತ್ಯ. ಇಂತಹ ನೆರವನ್ನು ಕೆಲವು ವ್ಯಕ್ತಿಗಳು ನೀಡಿದರೆ, ಬಹಳ ಹಿಂದಿನಿಂದಲೂ ಸಂಘಟಿತ ರೂಪದಲ್ಲಿ ಕೆಲವು ಸಂಸ್ಥೆಗಳೇ ಧನ ಸಂಗ್ರಹಿಸಿ ವಿವಿಧ ರೀತಿಯ ಸ್ವಯಂಸೇವೆಯಲ್ಲಿ ತೊಡಗಿರುವ ಸಂಘಟನೆಗಳಿಗೆ ನೀಡಿತ್ತಿವೆ. ಇದರಲ್ಲಿ ಸಿಂಹಪಾಲು ವಿದೇಶಿ ಸಂಸ್ಥೆಗಳದ್ದು ಎನ್ನಬಹುದಾದರೂ, ಇತ್ತೀಚಿನ ದಿನಗಳಲ್ಲಿ ಭಾರತದಲ್ಲಿಯೇ ಅನೇಕ ಸಂಘಟನೆಗಳು, ಉದಾಹರಣೆಗೆ ಚೈಲ್ಡ್ ರೈಟ್ಸ್ ಅಂಡ್ ಯೂ, ಇತ್ಯಾದಿ ಸಂಘಟನೆಗಳು ಮತ್ತು ಅನೇಕ ಕಂಪನಿಗಳು, ಉದಾಹರಣೆಗೆ ಅಜೀಮ್ ಪ್ರೇಮ್‌ಜಿ ಫೌಂಡೇಷನ್ ಇತ್ಯಾದಿ ಹಣ ಸಹಾಯ ಮಾಡುತ್ತಿವೆ. ಆದರೆ, ಸ್ವಯಂಸೇವಾ ಸಂಘಟನೆಗಳಿಗೆ ಹಣ ಕೊಡುತ್ತಿರುವ ಅತ್ಯಂತ ದೊಡ್ಡ ವ್ಯವಸ್ಥೆ ಸರ್ಕಾರವೇ ಆಗಿದೆ. ಸರ್ಕಾರದ ವಿವಿಧ ಇಲಾಖೆಗಳು ತಮ್ಮ ಯೋಜನೆಯ ಕೆಲಸಗಳನ್ನು ನಡೆಸಲು ಸ್ವಯಂಸೇವಾ ಸಂಘಟನೆಗಳಿಗೆ ಧನ ಸಹಾಯ ಮಾಡುತ್ತಿವೆ. ಉದಾಹರಣೆಗೆ, ಬಾಲಕಾರ್ಮಿಕ ಪದ್ಧತಿ ಕೊನೆಗಾಣಿಸಲು ನಡೆಸುವ ಶಾಲೆಗಳನ್ನು ನಡೆಸಲು ಕಾರ್ಮಿಕ ಇಲಾಖೆ, ಬೀದಿ ಮೇಲೆ ನೆಲೆಸಿರುವ ಮಕ್ಕಳ ಪುನರ್ವಸತಿಗಾಗಿ ಅಥವಾ ವ್ಯಾಪಾರಿ ಲೈಂಗಿಕ ಶೋಷಣೆಯಿಂದ ಮಕ್ಕಳನ್ನು ಬಿಡಿಸುವ ಯೋಜನೆಗಳಿಗಾಗಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಶೈಕ್ಷಣಿಕ ಸಂಸ್ಥೆಗಳನ್ನು ನಡೆಸಲು ಮತ್ತು ಮಕ್ಕಳಿಗೆ ಮಧ್ಯಾಹ್ನದ ಬಿಸಿಯೂಟ ಒದಗಿಸಲು ಶಿಕ್ಷಣ ಇಲಾಖೆ, ಹೀಗೆ ಹಲವಾರು ಯೋಜನೆಗಳಿಗಾಗಿ ಸರ್ಕಾರವೇ ಸ್ವಯಂಸೇವಾ ಸಂಘಟನೆಗಳಿಗೆ ನೆರವು ನೀಡುತ್ತಿವೆ.

**ಸರ್ಕಾರೇತರ ಸಂಸ್ಥೆಗಳ ಸಮಾಜ ಸೇವೆಯ ಕಾಯಕ**

ಎನ್‌ಜಿಓ ಎಂದರೆ ಸರ್ಕಾರೇತರ ಸೇವಾ ಸಂಸ್ಥೆಗಳು (ಎನ್‌ಜಿಓ) ಹಾಗೂ ಸ್ವಯಂ ಸೇವಾ ಸಂಸ್ಥೆಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಇವುಗಳನ್ನು ಭಿನ್ನವಾಗಿ ವ್ಯಾಖ್ಯಾನಿಸಬಹುದಾದರೂ ವ್ಯತ್ಯಾಸ ಅತ್ಯಲ್ಪ. ಎನ್‌ಜಿಓ ಎಂದರೆ ಲಾಭ ರಹಿತ (ಪಿವಿಓ)ಎಂದು

ಪರ್ಯಾಯವಾಗಿ ಬಳಸುತ್ತಾರೆ. ಸರಳ ಪರಿಭಾಷೆಯಲ್ಲಿ ಹೇಳುವುದಾದರೆ ಸಾಮಾಜಿಕ ಒಳತಿಗಾಗಿ ನಿರ್ದಿಷ್ಟ ಗುರಿಯೊಂದಿಗೆ ಸ್ವತಂತ್ರವಾಗಿ ಕಾರ್ಯಶೀಲವಾಗಿರುವ ಸಂಘಟನೆಗಳಿಗೆ ಸರ್ಕಾರೇತರ ಸೇವಾ ಸಂಸ್ಥೆಗಳು ಎನ್ನಬಹುದು.

ಸಂಯುಕ್ತ ರಾಷ್ಟ್ರ ಸಂಸ್ಥೆ (UN) ವಲಯದಿಂದ ಹುಟ್ಟಿಕೊಂಡ ಎನ್‌ಜಿಓ ಸರ್ಕಾರದ ಭಾಗವೂ ಅಲ್ಲ, ಲಾಭ ಗಳಿಕೆ ವ್ಯವಹಾರದ ಸಾಂಪ್ರದಾಯಿಕ ಸಂಘಟನೆಯೂ ಅಲ್ಲ. ಒಂದು ವೇಳೆ ಪೂರ್ಣವಾಗಿ ಅಂಶಿಕವಾಗಿ ಸರ್ಕಾರದ ನೆರವು ಪಡೆದರೂ ಸರ್ಕಾರದ ಪ್ರಾತಿನಿಧ್ಯಕ್ಕೆ ಇಲ್ಲಿ ಸ್ಥಾನವಿಲ್ಲ.

1945ರಲ್ಲಿ ವಿಶ್ವ ಸಂಸ್ಥೆಯಿಂದಲೇ ಮೊದಲು ಎನ್‌ಜಿಓ ಎಂಬ ಪದ ಬಳಕೆಗೆ ಬಂತು. ಈ ಸಂಘಟನೆಗಳು ಪ್ರತಿಪಕ್ಷಗಳ ರೂಪದಲ್ಲಿ ಸರಕಾರದ ಮಹತ್ವಕ್ಕೆ ಧಕ್ಕೆ ತರುವಂಥವಲ್ಲ. ಇವು ಅಪರಾಧ ಮುಕ್ತ ಹಾಗೂ ಲಾಭ ರಹಿತವಾಗಿರುವುದು ಅತ್ಯವಶ್ಯ.

ಲಂಡನ್ ಸಿಟಿ ವಿಶ್ವವಿದ್ಯಾಲಯದ ಪ್ರೊ. ಪೀಟರ್ ವಿಲೇಟ್ ಅವರು "ಎನ್‌ಜಿಓ" ಎಂದರೆ ಸರ್ಕಾರದ ಅಧಿಕಾರದ ಸಾಧನೆ, ಹಣಗಳಿಕೆ ಅಥವಾ ಅಕ್ರಮ ಚಟುವಟಿಕೆಗಳಿಂದ ಹೊರತಾದ ಒಂದು ಸಾಮಾನ್ಯ ಧ್ಯೇಯ ಸಾಧನೆಗೆ ನಿರಂತರ ತಳಹದಿಯ ಮೇಲೆ ಕೆಲಸ ಮಾಡುವ ಜನರಿಂದ ಕೂಡಿದ ಸ್ವತಂತ್ರ ಸ್ವಯಂ ಸೇವಾ ಸಂಸ್ಥೆ ಎಂದು ವ್ಯಾಖ್ಯಾನಿಸಿದ್ದಾರೆ.

ಅಂತಾರಾಷ್ಟ್ರೀಯ ಮಟ್ಟದಲ್ಲಿ ಕಾರ್ಯನಿರತ ಎನ್‌ಜಿಓಗಳ ಸಂಖ್ಯೆ 40,000 ಎಂದು ಅಂದಾಜು ರಾಷ್ಟ್ರೀಯ ಮಟ್ಟದ ಎನ್‌ಜಿಓಗಳ ಸಂಖ್ಯೆ ಇದಕ್ಕಿಂತಲೂ ಹೆಚ್ಚು. ಭಾರತದಲ್ಲೇ 2009ರಲ್ಲಿ ಸುಮಾರು 3.30 ದಶಲಕ್ಷ ಸರ್ಕಾರೇತರ ಸೇವಾ ಸಂಸ್ಥೆಗಳಿದ್ದವೆಂದು ಅಂದಾಜಿಸಲಾಗಿದೆ. ಅಂದರೆ ಪ್ರತಿ 400 ಭಾರತೀಯರಿಗೆ ಒಂದು ಎನ್ನಬಹುದು. ಇನ್ನೊಂದು ಅಂದಾಜು ಭಾರತದಲ್ಲಿ 39,529 ಹಾಗೂ ಕರ್ನಾಟಕದಲ್ಲಿ 1781 ಎನ್‌ಜಿಓಗಳಿವೆ ಎಂದು ತಿಳಿಸಿದೆ. (http:/ /ngo.india.gov.in)

ಎನ್‌ಜಿಓಗಳಿಗೆ ಪರ್ಯಾಯವಾಗಿ ಹಲವು ಪದಗಳು ಬಳಕೆಯಲ್ಲಿವೆ. ಉದಾ: ಸ್ವತಂತ್ರ ಕ್ಷೇತ್ರ, ಸ್ವಯಂಸೇವಾ ಕ್ಷೇತ್ರ, ನಾಗರೀಕ ಸಮಾಜ, ಬುಡಮಟ್ಟದ ಸಂಘಟನೆಗಳು, ಖಾಸಗಿ ಸ್ವಯಂ ಸೇವಾ ಸಂಸ್ಥೆಗಳು, ಸ್ವಸಹಾಯ ಸಂಘಟನೆಗಳು ಸರಕಾರೇತರ ಕ್ರಿಯಾಶೀಲರು ಇತ್ಯಾದಿ.

ಹಣಕಾಸು: ಬೃಹತ್ ಎನ್‌ಜಿಓಗಳು ಮಿಲಿಯಾಂತರ ಅಥವಾ ಬಿಲಿಯಾಂತರ ಮೊತ್ತ ವಾರ್ಷಿಕ ಮುಂಗಡಪತ್ರ ಹೊಂದಿರುತ್ತವೆ. ಇದಕ್ಕಾಗಿ ಬಹುದೊಡ್ಡ ಮೊತ್ತದ ನಿಧಿ ಸಂಗ್ರಹಕ್ಕೆ ಅವು ಪ್ರಯತ್ನಿಸುತ್ತವೆ. ಈ ಸಂಘಟನೆಗಳ ಪ್ರಮುಖ ಸಂಪನ್ಮೂಲಗಳೆಂದರೆ ಸದಸ್ಯತ್ವ ಬಾಕಿ ಸಂಗ್ರಹ ಹಾಗೂ ಸರಕುಸೇವೆಗಳ ಮಾರಾಟ, ಅಂತಾರಾಷ್ಟ್ರೀಯ ಸಂಸ್ಥೆಗಳು, ರಾಷ್ಟ್ರೀಯ ಸರಕಾರಗಳು ಹಾಗೂ ಖಾಸಗಿ ದಾನಿಗಳಿಂದ

ಧನಸಹಾಯ ಇತ್ಯಾದಿ ಐರೋಪ್ಯ ಒಕ್ಕೂಟ (ಇಡಬ್ಲ್ಯೂ)ದ ಹಲವು ಸಹಾಯ ನಿಧಿಗಳು ಎನ್‌ಜಿಓಗಳಿಗೆ ಆರ್ಥಿಕ ನೆರವು ಒದಗಿಸುತ್ತಿವೆ.

ಎನ್‌ಜಿಓ ಎಂದರೆ ಸರಕಾರದಿಂದ ಸ್ವತಂತ್ರ ಎಂದು ಧ್ವನಿತವಾದಾಗ್ಯೂ ಬಹುಪಾಲು ಎನ್‌ಜಿಓಗಳು ತಮ್ಮ ಹಣಕಾಸಿಗಾಗಿ ಸರಕಾರಗಳನ್ನೇ ಅವಲಂಬಿಸಿವೆ. ಉದಾಹರಣೆಗೆ ಬರಗಾಲ ಪರಿಹಾರ ಸಂಘಟನೆ 1998ರಲ್ಲಿ ತನ್ನ 162 ದಶಲಕ್ಷ ಡಾಲರ್ ಆದಾಯದ ಕಾಲುಭಾಗವನ್ನು ಬ್ರಿಟಿ ಸರಕಾರ ಹಾಗೂ ಐರೋಪ್ಯ ಒಕ್ಕೂಟಗಳಿಂದಲೇ ಪಡೆದಿತ್ತು. ಕ್ರಿಶ್ಚಿಯನ್ ಪರಿಹಾರ ಹಾಗೂ ಅಭಿವೃದ್ಧಿ ಸಂಸ್ಥೆ ವರ್ಡ್‌ವಿಷನ್ ಅದೇ ವರ್ಷ ಅಮೇರಿಕ ಸರ್ಕಾರದಿಂದ 55 ದಶಲಕ್ಷ ಡಾಲರ್ ಮೌಲ್ಯದ ಸರಕು ಸಾಮಗ್ರಿ ಸಂಗ್ರಹಿಸಿತ್ತು.

**ಕಾರ್ಯಕ್ಷೇತ್ರಗಳು**

ಸಾಮಾನ್ಯವಾಗಿ ಎನ್‌ಜಿಓಗಳ ಮುಖ್ಯ ಕಾರ್ಯಕ್ಷೇತ್ರಗಳು ಕೆಳಗಿನಂತಿವೆ.

- ಸಮುದಾಯ ಆರೋಗ್ಯ ವರ್ಧನೆ ಹಾಗೂ ಶಿಕ್ಷಣ; ಕೌಟುಂಬಿಕ ಆರೋಗ್ಯ ಮಿತಸಂತಾನ, ಯುವ ಜನರಿಗೆ ಸಲಹೆ ಹೆಚ್ಚುತ್ತಿರುವ ಎಚ್‌ಐವಿ ಏಡ್ಸ್ ಕುರಿತು ಶಿಕ್ಷಣ ಹಾಗೂ ಬೆಂಬಲ ಸೇವೆ, ಮಾದಕವಸ್ತುಗಳ ಚಟದ ವಿರುದ್ಧ ಜಾಗೃತಿ ಹಾಗೂ ಪುನಶ್ಚೇತನ ಇತ್ಯಾದಿ.
- ಸಮುದಾಯಿಕ ಸಾಮಾಜಿಕ ಸಮಸ್ಯೆಗಳು: ಬಾಲಾಪರಾಧ ಮನೆಬಿಟ್ಟು ಹೋದ ಯುವತಿಯರು, ಬೀದಿ ಮಕ್ಕಳು, ವೇಶ್ಯಾವೃತ್ತಿ ತಡೆಗೆ ಜನ ಜಾಗೃತಿ ಹಾಗೂ ಪೂರಕ ಸೇವೆಗಳು.
- ಪರಿಸರ ಸಂಬಂಧಿತ ಕೆಲಸ: ಪರಿಸರ ನೈರ್ಮಲ್ಯ, ಸಂರಕ್ಷಣೆ ಪರಿಸರ ಮತ್ತು ಆರೋಗ್ಯ ಮುಂತಾದವುಗಳು.
- ಆರ್ಥಿಕ ಸೇವೆಗಳು: ಕಿರುಉದ್ಯಮ ಹಾಗೂ ಕಿರುಸಾಲಗಳು, ಕೌಶಲ ತರಬೇತಿ, ಉತ್ಪನ್ನ ಮಾರಾಟ ಹಾಗೂ ವಿತರಣೆ, ಸಹಕಾರ ನಿರ್ಮಾಣ, ವೃತ್ತಿ ತರಬೇತಿ ನೆರವು ಇತ್ಯಾದಿ.
- ಅಭಿವೃದ್ಧಿ: ಗ್ರಾಮೀಣ ಅಭಿವೃದ್ಧಿ ಸೇವೆಗಳು, ಶಾಲಾಕಟ್ಟಡ ಹಾಗೂ ಮೂಲ ಸೌಕರ್ಯಗಳ ನಿರ್ಮಾಣ, ಸಾಂಸ್ಕೃತಿಕ ಭವನಗಳ ನಿರ್ಮಾಣ ಹಾಗೂ ನಿರ್ವಹಣೆ ಕೃಷಿ ಮೀನುಗಾರಿಕೆಗೆ ತಜ್ಞರ ನೆರವು.
- ಮಹಿಳೆಯರಿಗೆ ಸಂಬಂಧಿತ ವಿಷಯಗಳು: ಮಹಿಳೆ ಮತ್ತು ಮಕ್ಕಳ ಆರೋಗ್ಯ ಶಿಕ್ಷಣ, ಮಿತಸಂತಾನ, ಪೌಷ್ಟಿಕತೆ, ಸಾಕ್ಷರತೆ, ಕಾನೂನು ನೆರವು ಇತ್ಯಾದಿ.

ಸಮುದಾಯ ಸಮಸ್ಯೆಗಳ ಪರಿಹಾರಕ್ಕೆ ಎನ್‌ಜಿಓ ಕಾರ್ಯನೀತಿ

ಸಮಸ್ಯೆಯೊಂದರ ಪರಿಹಾರಕ್ಕೆ ಸರ್ಕಾರೇತರ ಸಂಘಟನೆಗಳು ಅನುಸರಿಸುವ ಕಾರ್ಯನೀತಿ ಇಂತಿವೆ.

- ಸಮಸ್ಯೆಗೆ ಸಂಬಂಧಿತ ಮಾಹಿತಿ ಸಂಗ್ರಹ.
- ವಾಸ್ತವವಾಗಿ ಸಮಸ್ಯೆ ಏನೆಂಬುದನ್ನು ಗುರುತಿಸುವುದು.
- ಸಮಸ್ಯೆಗೆ ಕಾರಣ/ಕಾರಣಗಳು ಏನು ಎಂಬುದನ್ನು ಅರಿಯುವುದು.
- ಸಮಸ್ಯೆಗೆ ಹೊಣೆಗಾರರಾದ ವ್ಯಕ್ತಿಗಳು/ಸಂಘಟನೆಗಳು ಯಾರು? (ಉದಾ-ಸರಕಾರದ್ದೇ ಯಾವುದೇ ಇಲಾಖೆ ಅಥವಾ ಒಂದು ಉದ್ಯಮ ಇರಬಹುದು)
- ಸಂಬಂಧನೀಯ ಪರಿಣಾಮಗಳೇನು? ಸಮಸ್ಯೆಯ ಗಾತ್ರ ಹಾಗೂ ಪ್ರಭಾವ ಅಂದಾಜಿಸುವುದು.
- ಪರ್ಯಾಯ/ಕಾರ್ಯಸಾಧ್ಯ ಪರಿಹಾರಗಳೇನು?
- ಅವುಗಳ ವೆಚ್ಚವೆಷ್ಟು? ಬೇರೆಯೋಚನೆಗಳಲ್ಲಿ ಹಣ ವಿನಿಯೋಜನೆ ಉತ್ತಮವೆ?
- ಸಮಸ್ಯೆಯೊಂದರ ಸಮಗ್ರ ದರ್ಶನಕ್ಕಾಗಿ ಸಮುದಾಯದ ಜನತೆಯ ವಿಭಿನ್ನ ಅಭಿಪ್ರಾಯಗಳನ್ನು ಆಲಿಸುವುದು.
- ಜವಾಬ್ದಾರಿಯುತ ವ್ಯಕ್ತಿಗಳೊಡನೆ ಚರ್ಚಿಸಿ ಸಮಸ್ಯೆಯ ಬಗ್ಗೆ ಅವರ ನಿಲುವು ಆಲಿಸುವಿಕೆ. ಕಂಡ ಸಮಸ್ಯೆಗಳನ್ನು ಇತರರಿಗೆ ತಿಳಿಸುವುದು.
- ಎರಡು ಬಣಗಳು ಪರಸ್ಪರ ಪ್ರತಿಕೂಲ ಅಭಿಪ್ರಾಯ ಹೊಂದಿಲ್ಲ ಎಂದೆನಿಸಿದರೆ ಜೊತೆಗೂಡಿ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಸಾಧ್ಯ
- ಅರಿವಿನ ಮಟ್ಟ ಹೆಚ್ಚಿಸಲು ಜನರೊಡನೆ ಸಂಪರ್ಕ ಸಾಧಿನೆ.
- ಸಮುದಾಯದಲ್ಲಿನ ಹಿರಿಯ ಪ್ರಭಾವಿ ಹಾಗೂ ಗೌರವಯುತ ವ್ಯಕ್ತಿಗಳನ್ನು ಸಾರ್ವಜನಿಕ ಸಭೆಗಳನ್ನು ಉದ್ದೇಶಿಸಿ ಮಾತನಾಡುವಂತೆ ಕೇಳಿಕೊಳ್ಳುವುದು.
- ಜನರಲ್ಲಿ ಆಸಕ್ತಿ ಮೂಡಿಸಲು, ವಾಸ್ತವಾಂಶ ಅರುಹಲು ಹಾಗೂ ಪರ್ಯಾಯಗಳನ್ನ ಚರ್ಚಿಸಲು ವೃತ್ತಪತ್ರಿಕೆ ಮತ್ತು ಅಂತರ್ ಜಾಲದಂಥ ಮಾಧ್ಯಮಗಳನ್ನು ಬಳಸಬೇಕು.

- ಪತ್ರಿಕೆ ಮತ್ತು ನಿಯತಕಾಲಿಕೆಗಳಿಗೆ ಸಮಸ್ಯೆಗಳನ್ನು ಗುರುತಿಸುವಂಥ ಸೌಜನ್ಯಪೂರ್ಣ ಹಾಗೂ ಸ್ಪಷ್ಟವಾದ ಲೇಖನ ಬರೆಯಬಹುದು.
- ನಿಮ್ಮ ಸಂಘಟನೆಯು ಯಾವುದೇ ರಾಜಕೀಯ ಪಕ್ಷ ಅಥವಾ ಧಾರ್ಮಿಕ ಪಂಗಡದ ಜತೆ ಸಂಬಂಧ ಹೊಂದಿಲ್ಲವಿರಬೇಕಾದರೆ ವಿಭಿನ್ನ ಹಿನ್ನೆಲೆಯ ಜನರನ್ನು ಸೇರಿಸಿಕೊಳ್ಳಬೇಕು.
- ನಿಧಿ ಸಂಗ್ರಹಿಸಬೇಕಾದರೆ ಅದು ಏಕೆ ಅಗತ್ಯ ಹಾಗೂ ಅದನ್ನು ಹೇಗೆ ಬಳಸಲಾಗುವುದೆಂಬುದನ್ನು ಜನತೆಗೆ ತಿಳಿಯ ಪಡಿಸಬೇಕು ವಿಕಾಸ ಬೆಳೆಸಬೇಕಾದರೆ ಪಾರದರ್ಶಕ ಹಾಗೂ ವಿವರವಾದ ಲೆಕ್ಕಪತ್ರ ಅತ್ಯವಶ್ಯ.
- ಪ್ರಯತ್ನದ ಗರಿಷ್ಠ ಪರಿಣಾಮಕ್ಕಾಗಿ ಇತರ ಎನ್‌ಜಿಓಗಳ ಜೊತೆ ಸಹಯೋಗ ಸಾಧಿಸಬೇಕು. ಸರ್ಕಾರಿ ಇಲಾಖೆಗಳು ಸೇವಾ ಸಂಸ್ಥೆಗಳ ನೆರವಿನಿಂದ ಅನೇಕ ಕಾರ್ಯಗಳನ್ನು ನಿರ್ವಹಿಸುತ್ತಿವೆ. ಅವುಗಳ ಪ್ರಯೋಜನ ಇಂತಿವೆ.
- ನೂತನ ಕಾರ್ಯನೀತಿಗಳನ್ನು ಮುಕ್ತವಾಗಿ ಜಾರಿಗೆ ತರುವ ಸಾಮರ್ಥ್ಯ, ಅಗತ್ಯಬಿದ್ದಾಗ ಅಪಾಯ ಎದುರಿಸಲು ಅವು ಸಿದ್ಧ.
- ಸ್ಥಳೀಯ ಪರಿಸ್ಥಿತಿಗೆ ಹೊಂದಿಕೊಳ್ಳಲು ಸ್ವತಂತ್ರ ಹಾಗೂ ಸ್ಥಳೀಯ ಅವಶ್ಯಕತೆಗಳಿಗೆ ಪ್ರತಿಸ್ಪಂದಿಸಲು ಸಾಧ್ಯವಿರುವ ಕಾರಣ ಸಮಗ್ರ ಹಾಗೂ ಕ್ಷೇತ್ರೀಯ ಮಟ್ಟದ ಸಮಗ್ರ ಯೋಜನೆಗಳನ್ನು ಅಭಿವೃದ್ಧಿ ಪಡಿಸಲು ಶಕ್ತ.
- ಎನ್‌ಜಿಓಗಳಿಗೆ ಜನರ ಜೊತೆ ಉತ್ತಮ ಸಂಬಂಧವಿದ್ದು, ನೆರವಿನ ಅತ್ಯಗತ್ಯ ಇರುವ ಜನರನ್ನು ಗುರುತಿಸಿ, ಅವರ ಅನುಕೂಲಕ್ಕೆ ತಕ್ಕ ಯೋಜನೆಗಳನ್ನು ಸಿದ್ಧಪಡಿಸಿ, ಕಡುಬಡವರಿಗೆ ಸಣ್ಣಪುಟ್ಟ ನೆರವು ಒದಗಿಸಬಲ್ಲವು.
- ತನ್ನ ಸುತ್ತಮುತ್ತಲಿನ ಜನರಿಂದ ಹಿಡಿದು ಸರ್ಕಾರದ ಉನ್ನತ ಸ್ತರದ ಜತೆ ಸಂಪರ್ಕ ಸಾಧಿಸುವ ಸಾಮರ್ಥ್ಯ ಅವುಗಳಿಗಿವೆ.
- ಸರ್ಕಾರಕ್ಕಿಂತ ಕಡಿಮೆ ನಿರ್ಬಂಧಗಳ ಜತೆಗೆ ತಜ್ಞರು ಹಾಗೂ ಕಾರ್ಯೋತ್ಸಾಹದಿಂದ ಕೂಡಿದ ಸಿಬ್ಬಂದಿಯನ್ನು ನೇಮಿಸಿಕೊಳ್ಳುವುದು ಎನ್‌ಜಿಓಗಳಿಗೆ ಸಾಧ್ಯ

**ಮಿತಿಗಳು**

- ಯಜಮಾನಿಕೆ ಧೋರಣೆಯಿಂದ ಯೋಜನಾ ನಿರೂಪಣೆಯಲ್ಲಿ ಸೀಮಿತ ಸಹಭಾಗಿತ್ವ.
- ಒಂದು ಸಮಸ್ಯೆ ಅಥವಾ ಪ್ರದೇಶ ಕುರಿತ ಕಾರ್ಯನೀತಿಯ ನಿರ್ಬಂಧಿತ ಹಾಗೂ ಸೀಮಿತ ಅವಕಾಶ.
- ಯೋಜನೆ ಮತ್ತು ಆಯ್ಕೆ ಪ್ರದೇಶದ ಪ್ರಾತಿನಿಧಿತ್ವವಿಲ್ಲದಿರುವಿಕೆ ಚಿಕ್ಕ ಯೋಜನಾ ವ್ಯಾಪ್ತಿ, ಬಾಹ್ಯ ಸಂಪನ್ಮೂಲಗಳ ಅವಲಂಬನೆ ಮುಂತಾದ ಕಾರಣಗಳಿಂದ ಮಾದರಿಯೊಂದರ ಯಥಾವತ್ ಅನುಕರಣೆಗೆ ಕಡಿಮೆ ಅವಕಾಶ.
- ಪ್ರಾದೇಶಿಕ ಸ್ವಾಮ್ಯಭಾವನೆಯಿಂದ ಎನ್‌ಜಿಓಗಳಲ್ಲಿ ಸ್ಪರ್ಧಾತ್ಮಕ ಬೀತಿ ಕಾರಣ ಯೋಜನೆ ಜಾರಿಯಲ್ಲಿ ಸಹಕಾರ ಕಡಿಮೆಯಾಗುತ್ತದೆ.
- ಮೇಲಿನಿಂದ ಕೆಳಸ್ತರದವರೆಗಿನ ಅಭಿವೃದ್ಧಿ ಮಾದರಿಗಳಿಂದ ಸ್ಥಳೀಯ ಜ್ಞಾನಕ್ಕೆ ಕನಿಷ್ಠ ಅವಕಾಶ ಹಾಗೂ ಒಡೆತನವು ಅಂತಾರಾಷ್ಟ್ರೀಯ ನಿಯಮ ನಿರೀಕ್ಷೆಗಳಿಗೆ ಅಧೀನವಾಗಿರಬೇಕಾಗುತ್ತದೆ.
- ಬಾಹ್ಯ ನೆರವಿನ ಅವಲಂಬನೆಯಿಂದಾಗಿ ಸ್ಥಳೀಯ ಹಾಗೂ ರಾಷ್ಟ್ರೀಯ ಸರಕಾರಗಳು ತಮ್ಮ ಪ್ರಜೆಗಳಿಗೆ ಸೌಲಭ್ಯ ಒದಗಿಸುವ ಒತ್ತಡವನ್ನು ತಗ್ಗಿಸುತ್ತದೆ.
- ಕೆಲವು ಕ್ಷೇತ್ರಗಳಲ್ಲಿ ಎನ್‌ಜಿಓ ಮತ್ತು ಸರ್ಕಾರ ಮಾಡುವ ಒಂದೇ ಬಗೆಯದಾಗಿರುವ ಸಂಭವ. ಕೆಲವೊಮ್ಮೆ ಎನ್‌ಜಿಓಗಳ ಕಾರ್ಯ ಪರೋಕ್ಷವಾಗಿ ಸರಕಾರಕ್ಕೆ ಅಪಥ್ಯವೆನಿಸುವ ಅಪಾಯವೂ ಇದೆ.

ಕರ್ನಾಟಕದಲ್ಲಿ ಅನೇಕ ಎನ್‌ಜಿಓಗಳು ವಿವಿಧ ಜಿಲ್ಲೆಗಳಲ್ಲಿ ಸಾಕ್ಷರತೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ, ಸಾಮಾಜಿಕ ಅನಿಷ್ಟಗಳ ನಿವಾರಣೆ, ಏಡ್ಸ್ ಜಾಗೃತಿ ಮತ್ತು ಸೇವೆ ಸ್ವಯಂ ಉದ್ಯೋಗ ವೃತ್ತಿ ತರಬೇತಿ ಮಹಿಳೆ ಮತ್ತು ಮಕ್ಕಳ ಹಕ್ಕುಗಳು ಮುಂತಾದ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿವೆ.

ಶಾಲೆಗಳ ಹಾಗೂ ಸರ್ಕಾರೇತರ ಸಂಘ ಸಂಸ್ಥೆಗಳ ಮುಖ್ಯ ಉದ್ದೇಶ ವೆಂದರೆ ಮಕ್ಕಳ ಸಮಗ್ರ ಅಭಿವೃದ್ಧಿಯನ್ನು ಮಾಡುವುದೇ ಆಗಿದೆ ಹಾಗೂ ಅವುಗಳು ಹಲವಾರು ರೀತಿಯ ಸೇವೆಗಳನ್ನು ನೀಡುತ್ತಿವೆ ಅವುಗಳನ್ನು ಈ ಕೆಳಗಿನಂತೆ ನಾವು ನೋಡಬಹುದು.

- 6 ವರ್ಷದ ಕೆಳಗಿನ ಮಕ್ಕಳಿಗೆ ಪೌಷ್ಠಿಕಾಂಶ ಆಹಾರವನ್ನು ನೀಡುವುದು.
- 14 ವರ್ಷದ ಕೆಳಗಿನ ಮಕ್ಕಳಿಗೆ ಉತ್ತಮ ಆರೋಗ್ಯವನ್ನು ಕಾಪಾಡಿಕೊಳ್ಳುವಂತೆ ಮಾಡುವುದು.
- 14 ವರ್ಷದ ಕೆಳಗಿನ ಮಕ್ಕಳಿಗೆ ಕಡ್ಡಾಯ ಶಿಕ್ಷಣ ಸೌಲಭ್ಯವನ್ನು ನೀಡುವುದು.
- ಎಲ್ಲಾ 14 ವರ್ಷದೊಳಗಿನ ಮಕ್ಕಳು ಶಾಲೆಯಲ್ಲಿರುವಂತೆ ನೋಡಿಕೊಳ್ಳುವುದು.
- 10ನೇ ತರಗತಿ ತನಕ ಯಾವುದೇ ಮಕ್ಕಳು ಶಾಲೆ ಬಿಡದಂತೆ ನೋಡಿಕೊಳ್ಳುವುದು.
- ಶಾಲೆಗಳನ್ನು ಮಕ್ಕಳಿಗೆ ಆಕರ್ಷಿತವಾಗಿರುವಂತೆ ಮಾಡುವುದು.
- ಮಕ್ಕಳ ಹಕ್ಕುಗಳ ಆಧಾರವಾಗಿಟ್ಟು ಶಾಲೆಗಳಲ್ಲಿ ಮಕ್ಕಳನ್ನು ನೋಡುವುದು.
- ಮಕ್ಕಳಿಗೆ ಹಿತವಾಗುವ ಹಾಗೆ ಪಾಠ ಮಾಡುವುದು.
- ಶಾಲೆಗಳಲ್ಲಿ 'ಮಕ್ಕಳ ಹಕ್ಕುಗಳ' ವೇದಿಕೆಯನ್ನು ತಯಾರಿಸುವುದು.
- ತಮ್ಮ ಗ್ರಾಮವನ್ನು ಬಾಲಕಾರ್ಮಿಕ ರಹಿತ ಗ್ರಾಮವನ್ನಾಗಿ ಮಾಡುವುದು.

**ಗ್ರಾಮ ಪಂಚಾಯತಿಗಳ ಪಾತ್ರ**

- ತಮ್ಮ ಗ್ರಾಮದಲ್ಲಿರುವ 14 ವರ್ಷದೊಳಗಿನ ಎಲ್ಲಾ ಮಕ್ಕಳು ಶಾಲೆಯಲ್ಲಿರುವಂತೆ ನೋಡುವುದು.
- ಶಿಕ್ಷಣದ ಜವಾಬ್ದಾರಿಯನ್ನು ಸರಿಯಾಗಿ ವಹಿಸಿಕೊಳ್ಳುವುದು.
- 10ನೇ ತರಗತಿವರೆಗೆ ಯಾವುದೇ ಮಕ್ಕಳು ಶಾಲೆ ಬಿಡದಂತೆ ಪಂಚಾಯತಿ ಸದಸ್ಯರು ಜವಾಬ್ದಾರಿ ವಹಿಸಿಕೊಳ್ಳುವುದು.
- ಗ್ರಾಮ ಸಭೆಗಳಲ್ಲಿ ಶಾಲೆ ಬಿಟ್ಟ ಮಕ್ಕಳ ಬಗ್ಗೆ, ಬಾಲಕಾರ್ಮಿಕ ಪದ್ಧತಿ ಬಗ್ಗೆ ಚರ್ಚಿಸಿ ಅವರ ಬಿಡುಗಡೆ ಮತ್ತು ಶಾಲಾ ದಾಖಲಾತಿ ಬಗ್ಗೆ ಚರ್ಚಿಸುವುದು.
- ಬಾಲಕಾರ್ಮಿಕ ರಹಿತ ಗ್ರಾಮ ಪಂಚಾಯತಿನ್ನಾಗಿ ಮಾಡುವುದು.

**ಪರಿಹಾರೋಪಾಯಗಳು**

ದುಡಿಯುವ ಮಕ್ಕಳ ಸಮಸ್ಯೆ ನಿವಾರಣೆ ಬಗ್ಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಕಾನೂನು ಕ್ರಮ ಮತ್ತು ನಿವಾರಕ ಕ್ರಮಗಳನ್ನು ಕೈಗೊಂಡಿದ್ದರೂ ಈ ಸಮಸ್ಯೆಯು ಇನ್ನೂ ಜೀವಂತವಾಗಿದೆ. ಈ ಸಮಸ್ಯೆಯ ನಿವಾರಣೆಗೆ ಕೆಲವು ಸಲಹೆಗಳನ್ನು ನೀಡಬಹುದು.

- ಬಾಲಕಾರ್ಮಿಕ ಸಮಸ್ಯೆ ನಿವಾರಣೆಯ ಬಗ್ಗೆ ಇರುವ ಎಲ್ಲಾ ಕಾನೂನುಗಳನ್ನು ಕಟ್ಟು ನಿಟ್ಟಾಗಿ ಜಾರಿಗೊಳಿಸಲು ಮತ್ತು ತಪ್ಪಿತಸ್ಥರನ್ನು ನಿರ್ದಾಕ್ಷಿಣ್ಯವಾಗಿ ದಂಡಿಸುವ ಪ್ರಯತ್ನಗಳಾಗಬೇಕು.
- ಗ್ರಾಮೀಣ ಜನರು ಮತ್ತು ಇತರ ಪ್ರದೇಶಗಳ ಅನಕ್ಷರಸ್ಥರಲ್ಲಿ ಬಾಲಕಾರ್ಮಿಕರ ಸಮಸ್ಯೆಯ ಬಗೆಗಿನ ಕಾನೂನುಗಳ ಅರಿವನ್ನು ಮೂಡಿಸಬೇಕು. ಉಚಿತ ಕಾನೂನು ಸಲಹಾ ಸಮಿತಿಗಳು, ಕಾನೂನು ಆಂದೋಲನ ಮತ್ತು ಜನತಾ ಅದಾಲತ್‌ಗಳ ಮೂಲಕ ಈ ಕೆಲಸವನ್ನು ಮಾಡಬಹುದು.
- ಬಾಲಕಾರ್ಮಿಕರ ಸಮಸ್ಯೆಯ ಬಗ್ಗೆ ಸಮೀಕ್ಷೆ ಮತ್ತು ಸಂಶೋಧನೆ ನಡೆಸಿ ಖಚಿತ ಮಾಹಿತಿ ಸಂಗ್ರಹಿಸಬೇಕು.
- ಗ್ರಾಮೀಣ ಮತ್ತು ನಗರಗಳ ಬಡಜನರ ಆರ್ಥಿಕ ಪುಷ್ಟೀಕರಣ ಕಾರ್ಯವು ಪರಿಣಾಮಕಾರಿ ಯಾಗುವಂತೆ ಮಾಡಿ ಅವರ ಕುಟುಂಬದ ಆದಾಯವನ್ನು ಕೂಲಿ ಹೆಚ್ಚಿಸುವ ಮೂಲಕ ಉತ್ತಮ ಪಡಿಸಬೇಕು.
- ಬಾಲಕಾರ್ಮಿಕರನ್ನು ಕೆಲಸಕ್ಕೆ ನೇಮಿಸುವುದನ್ನು ಸಂಪೂರ್ಣ ನಿಷೇಧಿಸಿ ಅವರಿಂದ ಬರುತ್ತಿದ್ದಂತಹ ಆದಾಯದ ನಷ್ಟವನ್ನು ತುಂಬಲು ಪ್ರತಿ ಕುಟುಂಬದ ವಯಸ್ಕನೊಬ್ಬನಿಗೆ ಉದ್ಯೋಗ ಒದಗಿಸುವುದು ತುಂಬಾ ಪರಿಣಾಮಕಾರಿ ಸಲಹೆ.
- ಕೆಲಸಕ್ಕೆ ಸೇರುವ ಕನಿಷ್ಠ ವಯೋಮಿತಿಯನ್ನು ಕೃಷಿ, ಕೈಗಾರಿಕೆ, ವ್ಯಾಪಾರ, ಹೀಗೆ ಎಲ್ಲಾ ಕ್ಷೇತ್ರಗಳಲ್ಲೂ ಒಂದೇ ಇರುವಂತೆ ಮಾಡಬೇಕು.
- ಮಕ್ಕಳ ಖಚಿತ ವಯಸ್ಸನ್ನು ನಿರ್ಧರಿಸಲು ಜನನ ನೋಂದಣಿಯನ್ನು ಕಡ್ಡಾಯಗೊಳಿಸಿ ವ್ಯಾಪಕ ಗೊಳಿಸಬೇಕು.
- ಬಾಲಕಾರ್ಮಿಕ ಸಮೀಕ್ಷೆ ಮತ್ತು ಪರಿಹಾರ ಕಾರ್ಯದ ಜವಾಬ್ದಾರಿಯನ್ನು ಗ್ರಾಮ ಪಂಚಾಯತಿಗಳಿಗೆ ವಹಿಸಬೇಕು.
- ನ್ಯಾಯಾಲಯಗಳಿಗೆ ಹಾಗೂ ಪೋಲೀಸ್ ಸಿಬ್ಬಂದಿಗಳಿಗೆ ದಂಡ ವಿಧಿಸುವಂತಹ ಹೆಚ್ಚಿನ ಅಧಿಕಾರ ನೀಡಬೇಕು.
- ಬಾಲ ನ್ಯಾಯಾಲಯಗಳನ್ನು ಸ್ಥಾಪಿಸಬೇಕು ಮತ್ತು ಮಾನವ ಹಕ್ಕು ಆಯೋಗದ ವ್ಯಾಪ್ತಿಗೆ ಈ ವಿಷಯವನ್ನು ಸೇರಿಸಬೇಕು.

ತಂದೆ ತಾಯಿಂದಿರ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಿ ಅವರ ಆದಾಯ ಹೆಚ್ಚಿಸಿದರೆ ಆಗ ಅವರು ತಮ್ಮ ಮಕ್ಕಳನ್ನು ದುಡಿಮೆಗೆ ದೂಡದೇ ಸರಿಯಾಗಿ ಸಂರಕ್ಷಿಸಿ ಪೋಷಿಸುತ್ತಾರೆ. ಇದೇ ಈ ಸಮಸ್ಯೆಯ ಅತಿ ಪ್ರಮುಖವಾದ ಮತ್ತು ಪರಿಣಾಮಕಾರಿಯಾದ ಮಾರ್ಗ ಎಂದು ಪಾಲ್ ಡೌಗ್ಲಸ್ ಸಲಹೆ ಮಾಡಿದ್ದಾರೆ.

ಒಟ್ಟಾರೆಯಾಗಿ ಈ ಅಧ್ಯಯದಲ್ಲಿ ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆ ಮಾಡುವ ನಿಟ್ಟಿನಲ್ಲಿ ಇರುವ ಕಾನೂನು ಕ್ರಮಗಳು ಹಾಗೂ ಸಂವಿಧಾನಾತ್ಮಕವಾದ ಸೌಲಭ್ಯಗಳ ಕುರಿತು ಪ್ರಸ್ತುತ ಅಧ್ಯಯದಲ್ಲಿ ಚರ್ಚಿಸಲಾಗಿದೆ. ಹಾಗೂ ಸರ್ಕಾರ ಮತ್ತು ಸರ್ಕಾರೇತರ ಸಂಘಸಂಸ್ಥೆಗಳು ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆ ಮಾಡುವ ನಿಟ್ಟಿನಲ್ಲಿ ಕೈಗೊಂಡಿರುವ ಕಾರ್ಯಕ್ರಮಗಳ ಬಗ್ಗೆ ವಿವರಣಾತ್ಮಕವಾಗಿ ವಿವರಿಸಲಾಗಿದೆ.

**ಪರಾಮರ್ಶನ ಗ್ರಂಥಗಳು:**


- ಕರ್ನಾಟಕ ವಿಕಾಸ, ಬಾಲಕಾರ್ಮಿಕತೆ – ನಾಗರಿಕ ಸಮಾಜಕ್ಕೊಂದು ಸವಾಲು – ಸೆಪ್ಟೆಂಬರ್, 2006.
- ಕರ್ನಾಟಕ ವಿಕಾಸ –ಬಾಲಕಾರ್ಮಿಕರು. – ಅಕ್ಟೋಬರ್,2007.
- ಕ್ಯಾತನಹಳ್ಳಿ ಬಸವರಾಜು –ಬಾಲಕಾರ್ಮಿಕರು –ವಿಜಯಲಕ್ಷ್ಮಿ ಪ್ರಕಾಶನ, ಮೈಸೂರು. – 2005.
- ಚ.ನ.ಶಂಕರರಾವ್. – ಭಾರತದಲ್ಲಿ ಸಾಮಾಜಿಕ ಸಮಸ್ಯೆಗಳು ಮತ್ತು ವಿಘಟನೆ. –ಜೈ ಭಾರತ್ ಪ್ರಕಾಶನ, ಮಂಗಳೂರು. –2001.
- ಚಂಗಾಮಣಿ. ಎಂ.ವಿ. –ಭಾರತೀಯ ಸಮಾಜದ ಸಮಾಜಶಾಸ್ತ್ರ. –ಅರ್ಚನಾ ಬುಕ್ ಹೌಸ್, ಬೆಂಗಳೂರು. –1999–2000.
- ಯಮನೂರಪ್ಪ ಅಣ್ಣಿಗೇರಿ ಡಾ.–ಬಾಲಕಾರ್ಮಿಕರು(ಮಂಟಪಮಾಲೆ–259) –ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ –2011.
- ಯೋಜನಾ ಮಾಸಪತ್ರಿಕೆಯ ಆಯ್ದ ವರದಿಗಳು.
- ಡಾ.ಶಾಲಿನಿ ರಜನೀಶ್ –ನಡೆಮುಂದೆ –ಸಪ್ನ ಬುಕ್‌ಹೌಸ್, ಗಾಂಧಿನಗರ, ಬೆಂಗಳೂರು–09 –2008.

# ಅಧ್ಯಾಯ – ಆರು

# ಸಮಾರೋಪ

## 6.1. ಉಪಸಂಹಾರ :

ಪ್ರಸ್ತುತ ಅಧ್ಯಯನ ಕೈಗೊಂಡಿರುವ ಹೈದ್ರಾಬಾದ್-ಕರ್ನಾಟಕ ಪ್ರದೇಶದ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಅಧ್ಯಯನ ಕೈಗೊಂಡಿದ್ದು, ಪ್ರಸ್ತುತ ಈ ಭಾಗದಲ್ಲಿ ಬಾಲಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಬಾಲಕಾರ್ಮಿಕ ಪದ್ಧತಿಯಲ್ಲಿ ತೊಡಗಿಕೊಳ್ಳಲು ಪ್ರಮುಖ ಕಾರಣ ಬಡತನ ಹಾಗೂ ಅಜ್ಞಾನ ಎಂದು ಹೇಳಬಹುದು. ಹಾಗೆಯೇ ಬಾಲಕಾರ್ಮಿಕರು ಹೆಚ್ಚಾಗಿರಲು ಪೋಷಕರು ತಮ್ಮ ಮಕ್ಕಳ ಬಗ್ಗೆ ಕಾಳಜಿ ವಹಿಸದೇ ಇರುವುದು ಇನ್ನೊಂದು ಪ್ರಮುಖ ಕಾರಣವಾಗಿದೆ.

ಒಟ್ಟಾರೆಯಾಗಿ ಅಭಿವೃದ್ಧಿ ಹೊಂದಿದ ತಾಲ್ಲೂಕುಗಳಾದ ಹೊಸಪೇಟೆ ಹಾಗೂ ಗಂಗಾವತಿ ತಾಲ್ಲೂಕುಗಳಲ್ಲಿ ಹೆಚ್ಚಿನ ಸಂಖ್ಯೆಯ ಬಾಲಕಾರ್ಮಿಕರು ಕೃಷಿ ವಲಯದಲ್ಲಿ ದುಡಿಮೆ ಮಾಡುತ್ತಿರುವುದನ್ನು ಕಾಣಬಹುದು. ಹಾಗೂ ಅಭಿವೃದ್ಧಿ ಹೊಂದುತ್ತಿರುವ ತಾಲ್ಲೂಕುಗಳಾದ ಕೊಪ್ಪಳ ಮತ್ತು ಹಗರಿಬೊಮ್ಮನಹಳ್ಳಿ ತಾಲ್ಲೂಕುಗಳಲ್ಲಿ ಹೆಚ್ಚಾಗಿ ಕೃಷಿಯೇತರ ಚಟುವಟಿಕೆಗಳಲ್ಲಿ ಬಾಲಕಾರ್ಮಿಕರು ದುಡಿಯುತ್ತಿರುವುದನ್ನು ಕಾಣಬಹುದು.

ಇಂದಿನ ಮಕ್ಕಳೇ ನಾಳಿನ ಪ್ರಜೆಗಳು ಎಂಬ ಮಾತು ಅಕ್ಷರಶಃ ನಿಜವಾಗಬೇಕಾದರೆ ಮಕ್ಕಳ ಬಗೆಗೆ ಪ್ರತಿಯೊಬ್ಬರು ವಿಶೇಷವಾಗಿ ಕಾಳಜಿ ವಹಿಸುವುದು ತುಂಬಾ ಅಗತ್ಯವಾಗಿದೆ. ವೈಜ್ಞಾನಿಕವಾಗಿ ಮತ್ತು ತಾಂತ್ರಿಕವಾಗಿ ಬಹಳಷ್ಟು ಮುನ್ನಡೆದಿದ್ದೇವೆ ಎನ್ನುವ ನಾವು ಬಾಲಕಾರ್ಮಿಕ ಸಮಸ್ಯೆಯ ನಿವಾರಣೆಯತ್ತ ಸೋತಿದ್ದೇವೆ. ಈ ಸಮಸ್ಯೆ ಹಾಗೆಯೇ ಮುಂದುವರೆದಿದೆ.

ಮಕ್ಕಳ ದುಡಿಮೆಯ ಸಮಸ್ಯೆಯು ದೇಶದಲ್ಲಿ ವ್ಯಾಪಕ ಹಾಗೂ ಗಂಭೀರ ಸ್ವರೂಪದ್ದಾಗಿದ್ದು, ಅದನ್ನು ಸುಧಾರಿಸುವ ಪ್ರಯತ್ನಕ್ಕೆ ಒಂದು ಸವಾಲೆನಿಸಿದೆ. ವ್ಯಾಪಕವಾದ ಬಡತನ ಮತ್ತು ಇತರ ಸಾಮಾಜಿಕ – ಆರ್ಥಿಕ ಪರಿಸ್ಥಿತಿಗಳಿಂದಾಗಿ ಮಕ್ಕಳ ದುಡಿಮೆಯನ್ನು ನಿವಾರಿಸುವುದು ಸಧ್ಯದಲ್ಲಿ ಕಷ್ಟವೆನಿಸಿದೆ.

ಮೊದಲು ನಾವು ಸಮಸ್ಯೆಯ ಮೂಲ ಕಾರಣಗಳನ್ನು ಕಂಡುಹಿಡಿಯಬೇಕು. ಬಾಲಕಾರ್ಮಿಕರ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಸಮಸ್ಯೆಗಳನ್ನು ಕೂಲಂಕುಶವಾಗಿ ವಿಮರ್ಶಿಸಿ ನಿವಾರಣೆಯತ್ತ ನಡೆಯಬೇಕು. ಎಲ್ಲಾ ಎಳೆಯ ಮಕ್ಕಳು ಶಾಲೆಗೆ ಹೋಗುತ್ತಾರೆ ಅಲ್ಲಿ ಸಾಮಾಜಿಕ, ಆರ್ಥಿಕ ಸುಧಾರಣೆ ಆಗಿದೆ ಎಂಬ ಅಂಶ ವ್ಯಕ್ತವಾಗುತ್ತದೆ. ಪ್ರತಿಯೊಬ್ಬ ಬಾಲಕನಿಗೆ ಮೂಲ ಅಗತ್ಯಗಳನ್ನು ಅಂದರೆ ಊಟ, ವಸತಿ, ಬಟ್ಟೆ ಇತ್ಯಾದಿ ಅವಶ್ಯಕತೆಗಳನ್ನು ಪೂರೈಸಿದ್ದೆ ಆದರೆ ಮಕ್ಕಳು ಕಾರ್ಮಿಕರಾಗುವ ಪರಿಸ್ಥಿತಿ ಒದಗದು. ಇವುಗಳ ಜೊತೆಗೆ ಶಿಕ್ಷಣ ತರಬೇತಿ ಸೌಲಭ್ಯಗಳು ಲಭ್ಯವಾಗುವಂತೆ ನೋಡಿಕೊಳ್ಳಬೇಕು.

ಈ ಸಮಸ್ಯೆಯ ಪರಿಹಾರಕ್ಕೆ ಕೆಲವು ತತ್‌ಕ್ಷಣದ ಹಾಗೂ ಕೆಲವು ದೀರ್ಘಕಾಲಿಕ ಕ್ರಮಗಳನ್ನು ಪರಿಶೀಲಿಸಬಹುದು. ಮಕ್ಕಳ ದುಡಿಮೆಯ ಪ್ರಕರಣಗಳು ತೀವ್ರವಾಗಿರುವ ಪ್ರದೇಶಗಳನ್ನು ಗುರುತಿಸುವುದು, ಮಕ್ಕಳು ದುಡಿಮೆಯಲ್ಲಿ ತೊಡಗಿರುವ ಕಾರ್ಯ ಸ್ಥಳಗಳ ಸ್ಥಿತಿಯನ್ನು ಸುಧಾರಿಸುವುದು ಮತ್ತು ಮಕ್ಕಳ ದುಡಿಮೆ (ನಿಷೇಧ ಮತ್ತು ನಿಯಂತ್ರಣ) ಅಧಿನಿಯಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಮೂಲಕ ಅಪಾಯಕರ ಉದ್ಯೋಗಗಳಲ್ಲಿ ಮಕ್ಕಳ ದುಡಿಮೆಯನ್ನು ನಿಷೇಧಿಸುವುದು, ತತ್‌ಕ್ಷಣದ ಕಾರ್ಯಕ್ರಮಗಳ ಅಡಿಯಲ್ಲಿ ಇವುಗಳನ್ನು ಸೇರಿಸಬಹುದು.

ದೀರ್ಘ ಕಾಲಿಕ ಕಾರ್ಯಕ್ರಮಗಳ ಅಡಿಯಲ್ಲಿ ಈ ಕೆಳಗಿನವುಗಳನ್ನು ಪರಿಶೀಲಿಸಬಹುದು. ಮಕ್ಕಳ ದುಡಿಮೆಯ ಸಮಸ್ಯೆಗೆ ಬಡತನವು ಒಂದು ಪ್ರಮುಖ ಹಾಗೂ ಪ್ರಬಲ ಕಾರಣವೆನಿಸುವುದರಿಂದ, ಹಿಂದುಳಿದ ಪ್ರದೇಶಗಳನ್ನು ಗುರುತಿಸುವ ಮತ್ತು ಬಡತನವನ್ನು ಮಿತಿಗೊಳಿಸುವ ಸಂಬಂಧಿತ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬೇಕು. ಮಕ್ಕಳ ದುಡಿಮೆಗೆ ಆರ್ಥಿಕ ಒತ್ತಡವು ಮೂಲ ಕಾರಣವೆನಿಸಿದರೂ, ಪೋಷಕರು ಅದರಲ್ಲಿಯೂ ಮುಖ್ಯವಾಗಿ ಬಡವರ್ಗ ಗಳಲ್ಲಿನ ಪೋಷಕರು, ಶಿಕ್ಷಣದ ಮಹತ್ವವನ್ನು ಗ್ರಹಿಸದೇ ಇರುವ ಕಾರಣ, ಮಕ್ಕಳ ದುಡಿಮೆ ಮುಂದುವರೆಯಲು ಮತ್ತೊಂದು ಕಾರಣವೆನಿಸಿದೆ. ಆದ್ದರಿಂದ ಪೋಷಕರು ತಮ್ಮ ಮಕ್ಕಳನ್ನು ದುಡಿಮೆಯ ಮಾರುಕಟ್ಟೆಗೆ ಬದಲಾಗಿ ಶಾಲೆಗೆ ಕಳುಹಿಸುವಂತೆ ಪ್ರಚೋದಿಸಬಲ್ಲ ಕಾರ್ಯಕ್ರಮಗಳನ್ನು ರೂಪಿಸಬೇಕು.

ಮಕ್ಕಳ ಪರಿಸ್ಥಿತಿ ನಿನ್ನೆಗಿಂತ ಇಂದು ತೀವ್ರಗತಿಯಲ್ಲಿ ಬದಲಾಗುತ್ತಿದೆ. ಮಕ್ಕಳು ಪೋಷಕರಿಂದ, ಸಹವರ್ತಿಗಳಿಂದ ಹಾಗೂ ಸ್ವತಃ ಅಧ್ಯಯನದಿಂದ ಮಾಹಿತಿ ಸಂಗ್ರಹಿಸಿದ್ದಾರೆ. ತಮ್ಮ ಹಕ್ಕು ಸ್ವಾತಂತ್ರ್ಯದ ಹೋರಾಟಕ್ಕೆ ಇಳಿದಿದ್ದಾರೆ. 'ದುಡಿಮೆಯೇ ನಮ್ಮ ಹಕ್ಕು' ಎಂತಲೂ ಹೇಳುತ್ತಿದ್ದಾರೆ. ದಿಢೀರನೇ ಕಾನೂನು

ಜಾರಿ ಮಾಡಿದರೆ ಅವರನ್ನು ಹಸಿವಿನಡೆಗೆ ತಳ್ಳಿದಂತೆ ಎಂದು ಅವರೇ ಹೇಳತ್ತಾರೆ. ಇವರಿಗೆ ಸರಿಯಾದ ವ್ಯವಸ್ಥೆ ರೂಪಿಸಬೇಕಾಗಿದೆ.

ಇಷ್ಟೆಲ್ಲಾ ಕ್ಲಿಷ್ಟ ವ್ಯವಸ್ಥೆ ಇರುವುದರಿಂದ ಈ ದೊಡ್ಡ ಸಮಸ್ಯೆಯನ್ನು ತೊಡೆದು ಹಾಕಲಾಗಿಲ್ಲ. ಇದಕ್ಕಾಗಿ ದೇಶದ ಪ್ರತಿ ಪ್ರಜೆಯು ಟೊಂಕ ಕಟ್ಟಿ ನಿಲ್ಲಬೇಕು. ಮೊದಲನೆಯದಾಗಿ ಚಿಕ್ಕ ಮಕ್ಕಳ ಮೇಲೆ ಸಂಸಾರದ ಆರ್ಥಿಕ ಹೊರೆ ಹೇರುವುದನ್ನು ನಿಲ್ಲಿಸಬೇಕು. ಮಕ್ಕಳಿಂದ ಕೆಲಸ ನಿರೀಕ್ಷಿಸುವ ಮನೋಭಾವ ನಮ್ಮಲ್ಲಿ ಹೋಗಬೇಕು. ಎಲ್ಲಿಯಾದರೂ ಈ ರೀತಿ ದುಡಿಸಿಕೊಳ್ಳುತ್ತಿದ್ದರೆ ಹಿರಿಯರು ಸೇರಿ ಪ್ರತಿಭಟಿಸಬೇಕು.

ವಿಶ್ವಸಂಸ್ಥೆಯು ಮಕ್ಕಳ ಕಲ್ಯಾಣಕ್ಕಾಗಿ ಹೆಚ್ಚು ಮಹತ್ವ ನೀಡಿದೆ. ಅದಕ್ಕಾಗಿಯೇ ಕೆಲವು ಹಕ್ಕುಗಳನ್ನು ಘೋಷಿಸಿದೆ. ಅವರಿಗೆ ವಿದ್ಯಾಭ್ಯಾಸ, ಮನೋರಂಜನೆ, ಪೌಷ್ಠಿಕ ಆಹಾರ ಸೌಲಭ್ಯ ನೀಡುವುದಾಗಿದೆ. ಅವರಿಗೆ ಪ್ರೀತಿ, ವಾತ್ಸಲ್ಯ ತೋರಿಸಿ ರಾಷ್ಟ್ರೀಯತೆ ಸೌಹಾರ್ದತೆ ಮೂಡಿಸುವುದಾಗಿದೆ. ಬಾಲಕಾರ್ಮಿಕರನ್ನು ಸರ್ಕಾರಗಳು ಪತ್ತೆ ಹಚ್ಚಬೇಕು. ಅವರನ್ನು ದುಡಿತದಿಂದ ತಪ್ಪಿಸಿ ಶಾಲೆಗೆ ಹೋಗುವಂತೆ ಪ್ರೋತ್ಸಾಹಿಸಬೇಕು. ಖಾಸಗಿ ಸಂಘ ಸಂಸ್ಥೆಗಳು ಈ ದಿಕ್ಕಿನಲ್ಲಿ ಶ್ರಮಿಸಬೇಕಾಗಿದೆ.

ಎಳೆಯ ವಯಸ್ಸಿನ ಮಕ್ಕಳನ್ನು ದುಡಿಮೆಗೆ ಕಳುಹಿಸುವುದರಿಂದ ಸಮಾಜದ ಮೇಲಾಗುವ ದುಷ್ಪರಿಣಾಮಗಳ ಬಗ್ಗೆ ಸಮೂಹ ಮಾಧ್ಯಮಗಳ ಮೂಲಕ, ವ್ಯಾಪಕ ಪ್ರಚಾರ ಕೊಡಬೇಕು. ಶಿಕ್ಷಣ ಹಾಗೂ ಮನವೊಲಿಕೆಯ ಮೂಲಕ ಕುಟುಂಬ ನಿಯಂತ್ರಣ ಕಾರ್ಯಕ್ರಮಕ್ಕೆ ಒತ್ತು ಕೊಡಬೇಕು. ಸರ್ಕಾರೇತರ ಸಂಸ್ಥೆಗಳ ಸೇವೆಯನ್ನೂ ಈ ಸಮಸ್ಯೆಯ ನಿವಾರಣೆಗೆ ಪೂರ್ಣವಾಗಿ ಬಳಸಿಕೊಳ್ಳಬೇಕು. ಇದರಿಂದ ಮಕ್ಕಳ ಅಭಿವೃದ್ಧಿ ಸಾಧ್ಯ.

ಒಂದು ಅಂದಾಜಿನ ಪ್ರಕಾರ ಭಾರತದಲ್ಲಿ ಹತ್ತು ಕೋಟಿಗಿಂತ ಹೆಚ್ಚು ಬಾಲಕಾರ್ಮಿಕರು ದುಡಿಯುತ್ತಿದ್ದಾರೆ. ಈ ಪ್ರಮಾಣ ಒಟ್ಟು ಕಾರ್ಮಿಕರ ಶೇ.20 ರಷ್ಟಿದೆ. ನಮ್ಮ ರಾಜ್ಯದಲ್ಲಿಯೇ ಸುಮಾರು 12 ರಿಂದ 15 ಸಾವಿರ ಬಾಲಕಾರ್ಮಿಕರು ಅಪಾಯಕಾರಿ ಉದ್ದಿಮೆಗಳಲ್ಲಿಯೂ ಮತ್ತು 30 ರಿಂದ 40 ಸಾವಿರ ಬಾಲಕಾರ್ಮಿಕರು ಅಪಾಯಕಾರಿ ಅಲ್ಲದ ಉದ್ದಿಮೆಗಳಲ್ಲಿ ದುಡಿಯುತ್ತಿದ್ದಾರೆ.

ಭಾರತವು ವಿಶ್ವದಲ್ಲಿಯೇ ಅತೀ ಹೆಚ್ಚು ಮಕ್ಕಳನ್ನು ಹೊಂದಿರುವ ದೇಶ. ಪ್ರತಿ ವರ್ಷ ಇಲ್ಲಿ ಸುಮಾರು ಐವತ್ತು ಸಾವಿರ ಮಕ್ಕಳು ಕಾಣೆಯಾಗುತ್ತಾರೆ. ಇವರಲ್ಲಿ ಸುಮಾರು 15 ಸಾವಿರ ಮಕ್ಕಳು ಪತ್ತೆಯಾಗುವುದೇ ಇಲ್ಲ. ರಾಜ್ಯದಲ್ಲಿ ಪ್ರತಿದಿನ ಒಬ್ಬ ಬಾಲಕಾರ್ಮಿಕ ಅಪಾಯಕಾರಿ ಉದ್ದಿಮೆಗಳಲ್ಲಿ ಕೆಲಸ ಮಾಡುವ ಸಂದರ್ಭದಲ್ಲಿ ದುರ್ಮರಣಕ್ಕೀಡಾಗುತ್ತಾನೆ. ಸಮಾಜದ ನಿರ್ಲಕ್ಷ್ಯ, ಬಂಡವಾಳ ಶಾಹಿಗಳ ದುರಾಸೆ, ಅಧಿಕಾರಿಗಳ ನಿಷ್ಕ್ರಿಯತೆಯಿಂದ ಬಾಲಕಾರ್ಮಿಕ ಪದ್ದತಿ ಇನ್ನೂ ಜೀವಂತವಾಗಿ ಉಳಿದಿದೆ.

1993 ರಿಂದ ಇತ್ತೀಚಿನವರೆಗೂ ಸರ್ಕಾರ ಬಾಲಕಾರ್ಮಿಕ ಪದ್ಧತಿ ನಿಷೇಧಕ್ಕೆ ಸಂಬಂಧಿಸಿದಂತೆ ಅನೇಕ ಕಾಯಿದೆ ಕಾನೂನುಗಳನ್ನು ರೂಪಿಸಿದೆ. ಆದರೆ ಇವುಗಳನ್ನು ಜಾರಿಗೆ ತರಬೇಕಾದ ಅಧಿಕಾರಿಗಳ ನಿಷ್ಕ್ರಿಯತೆ ಮತ್ತು ರಾಜಕೀಯ ಇಚ್ಛಾಶಕ್ತಿಯ ಕೊರತೆಯಿಂದಾಗಿ ಜಾರಿ ಹಂತದಲ್ಲಿಯೇ ಸೋತಿವೆ.

ಕರ್ನಾಟಕ ರಾಜ್ಯ ಸರ್ಕಾರ 2002 ರಲ್ಲಿ ಬಾಲಕಾರ್ಮಿಕ ಪದ್ಧತಿ ನಿರ್ಮೂಲನಾ ಕ್ರಿಯಾ ಯೋಜನೆ ಆರಂಭಿಸಿ ರಾಜ್ಯವನ್ನು 2007 ರ ಒಳಗಾಗಿ ಬಾಲಕಾರ್ಮಿಕ ಮುಕ್ತ ರಾಜ್ಯವನ್ನಾಗಿ ಮಾಡುವುದಾಗಿ ಘೋಷಿಸಿತ್ತು. ಅಧಿಕಾರಿಗಳ ನಿಷ್ಕ್ರಿಯತೆಯಿಂದಾಗಿ ಈ ಯೋಜನೆಯ ಮೂಲ ಉದ್ದೇಶವೇ ವಿಫಲವಾಗಿದೆಯೆಂದು ಹೇಳಲಾಗುತ್ತಿದೆ. ಆದಾಗ್ಯೂ ಈ ಯೋಜನೆಯನ್ನು ಪುನಃ 2012 ರವರೆಗೆ ವಿಸ್ತರಿಸಲಾಗಿದೆ.

ಇದೇ ಸಂದರ್ಭದಲ್ಲಿ ಐ.ಎಲ್.ಓ. (ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆ) ಬಾಲಕಾರ್ಮಿಕರ ಸಮಸ್ಯೆಯ ಸಮೀಕ್ಷೆ ನಡೆಸಿ, ಅದನ್ನು ಬಗೆಹರಿಸುವ ದಿಸೆಯಲ್ಲಿ ಹಲವು ಯೋಜನೆಗಳನ್ನು ರೂಪಿಸಿದೆ. ಸಾಮಾಜಿಕ, ಆರ್ಥಿಕ ಬದಲಾವಣೆ ಮೂಲಕ ಬಾಲಕಾರ್ಮಿಕರ ಸಮಸ್ಯೆಯನ್ನು ಬಗೆಹರಿಸಲು ಪ್ರಯತ್ನಿಸುತ್ತಿದೆ. ಸಮಾಜದಲ್ಲಿ ಮತ್ತು ಬಾಲಕಾರ್ಮಿಕರ ಪೋಷಕರಲ್ಲಿ ಅರಿವು ಮೂಡಿಸುವುದು, ಸ್ವ ಉದ್ಯೋಗಕ್ಕೆ ಉತ್ತೇಜನ ನೀಡುವ ಮೂಲಕ ಆದಾಯ ಸೃಷ್ಟಿಸುವುದು ಹೀಗೆ ಹತ್ತು ಹಲವು ನೀತಿ ನಿರೂಪಣೆಗಳ ಗುರಿಯೊಂದಿಗೆ ಬಾಲಕಾರ್ಮಿಕ ಪದ್ಧತಿಯನ್ನು ತೊಡೆದು ಹಾಕಲು ಪ್ರಯತ್ನಿಸುವುದು ನಮ್ಮೆಲ್ಲರ ಕರ್ತವ್ಯವಾಗಿದೆ.

ಬಾಲಕಾರ್ಮಿಕರ ಸಂರಕ್ಷಣಾ ಕಾನೂನುಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರುವ ಪ್ರಯತ್ನ ನಡೆಯಬೇಕು. ಭಾರತದಲ್ಲಂತೂ ಕಾನೂನುಗಳಿಗೆ ಕೊರತೆ ಇಲ್ಲ. ಆದರೆ ಅನುಷ್ಠಾನ ಮಾತ್ರ ಸಾಧ್ಯವಾಗಿಲ್ಲ. ಸಮೂಹ ಮಾಧ್ಯಮಗಳ ಮುಖಾಂತರ ಈ ಬಗ್ಗೆ ಪ್ರಚಾರ ಆಂದೋಲನವನ್ನು ಕೈಗೊಳ್ಳಬೇಕು. ಇವೆಲ್ಲಕ್ಕಿಂತ ಮಿಗಿಲಾಗಿ ಬಾಲಕಾರ್ಮಿಕರ ಶೋಷಣೆಯ ಬಗೆಗೆ ಸಾಮಾಜಿಕ ಅರಿವು, ಸಾಮಾಜಿಕ ಜಾಗೃತಿ ಪ್ರತಿಯೊಬ್ಬರಲ್ಲಿ ಮೂಡಿಸಬೇಕು. ಪ್ರತಿಯೊಬ್ಬ ತಂದೆ-ತಾಯಿಂದಿರು ತಮ್ಮ ಮಕ್ಕಳ ಭವಿಷ್ಯವನ್ನು ನಿರ್ಧರಿಸುವಲ್ಲಿ ನಿರ್ಣಾಯಕ ಪಾತ್ರ ವಹಿಸಿದ್ದೆ ಆದರೆ ಈ ಸಮಸ್ಯೆಯನ್ನು ಕೆಲವೇ ವರ್ಷಗಳಲ್ಲಿ ಬಗೆಹರಿಸಬಹುದು.

ನಮ್ಮ ದೇಶದಲ್ಲಿ ನವಂಬರ್ 14 ರಂದು ಮಕ್ಕಳ ದಿನಾಚರಣೆಯನ್ನು ಆಚರಿಸುತ್ತೇವೆ. ಅಂದು ಮಕ್ಕಳ ಯೋಗಕ್ಷೇಮ, ಬಾಲಕಾರ್ಮಿಕರ ದುಡಿಮೆಯ ಕುರಿತು ಚರ್ಚಿಸಬೇಕು. ಈ ವಿಚಾರ ಕುರಿತು ಅಂದು ವಿಚಾರ ಸಂಕಿರ್ಣಗಳನ್ನು ಏರ್ಪಡಿಸಬೇಕು. ಈ ನಿಟ್ಟಿನಲ್ಲಿ ತಜ್ಞರು ಸಲಹೆ ಪ್ರವೃತ್ತರಾಗಬೇಕು. ಇಲ್ಲದಿದ್ದರೆ ಈ ಸಮಸ್ಯೆಗೆ ಪರಿಹಾರವಿಲ್ಲ.

"ಇಂದಿನ ಮಕ್ಕಳೇ ನಾಳಿನ ಪ್ರಜೆಗಳು", "ಮಕ್ಕಳೇ ದೇಶದ ನಿಜವಾದ ಸಂಪತ್ತು", "ಮಕ್ಕಳೇ ಭವಿಷ್ಯತ್ತಿನ ಭರವಸೆ"-ಎಂಬ ಮಾತುಗಳು ಕೇವಲ ಘೋಷ ವಾಕ್ಯಗಳಾಗಿ ಉಳಿಯದಿರಬೇಕಾದರೆ ಮಕ್ಕಳ ಬಗ್ಗೆ ಸಮಾಜವು ಎಲ್ಲಾ ಬಗೆಯ ಕಾಳಜಿವಹಿಸಬೇಕಾದ್ದರ ಅಗತ್ಯವಿದೆ. ನಾಳಿನ ಸಮಾಜವು ಯಾವ ದಿಕ್ಕಿನತ್ತ ಹೇಗೆ ಸಾಗಬೇಕೆಂಬುದನ್ನು ನಿರ್ಧರಿಸುವ ಶಕ್ತಿ ಇಂದಿನ ಹಿರಿಯರಿಗೆ ಲಭಿಸುವುದು ಅವರು ತಮ್ಮ ಮಕ್ಕಳನ್ನು ಹೇಗೆ ನೋಡಿಕೊಳ್ಳುತ್ತಾರೆ ಹಾಗೂ ಅವರಿಗಾಗಿ ಏನನ್ನು ಮಾಡುತ್ತಿದ್ದಾರೆ ಎಂಬುದರಿಂದ ಎನ್ನಬಹುದು ಅಮೆರಿಕದ ಅಧ್ಯಕ್ಷರಾಗಿದ್ದ ಅಬ್ರಹಾಂ ಲಿಂಕನ್‌ರವರು ಮಾನವ ಸಮಾಜದಲ್ಲಿ ಮಗುವಿಗಿರುವ ಮಹತ್ವವನ್ನು ಬಹಳ ಸುಂದರವಾಗಿ ಈ ಮುಂದಿನ ಶಬ್ದಗಳಲ್ಲಿ ಹೇಳಿದ್ದಾರೆ: "ನೀವು ಏನನ್ನು ಆರಂಭಿಸಿದ್ದೀರೋ ಅದನ್ನು ಮುಂದುವರಿಸಿಕೊಂಡು ಹೋಗುವ ವ್ಯಕ್ತಿಯೇ ಮಗು. ನೀವು ಎಲ್ಲಿ ಕುಳಿತಿದ್ದಿರೋ ಅಲ್ಲಿ ಆತ ಕುಳಿತುಕೊಳ್ಳಲಿದ್ದಾನೆ, ನೀವು ಮರೆಯಾದ ಮೇಲೆ ನೀವು ಯಾವ ಯಾವ ವಿಷಯಗಳಿಗೆ ಮಹತ್ವ ನೀಡಿದ್ದಿರೋ ಅವುಗಳ ಬಗ್ಗೆ ಗಮನ ಹರಿಸುವ ವ್ಯಕ್ತಿ ಆತನೇ....... ಮಾನವತೆಯ ಭವಿಷ್ಯವೇ ಆತನ ಕೈಯ್ಯಲ್ಲಿದೆ"

ಭಾರತದಲ್ಲಿರುವ ಮಕ್ಕಳ ಭವಿಷ್ಯವು ಉಜ್ವಲವಾಗಬೇಕಾದರೆ ಕೇವಲ ಸರ್ಕಾರೀ ಕಾರ್ಯಕ್ರಮಗಳಿಂದ, ಸಾಂವಿಧಾನಿಕ ಸಂರಕ್ಷಣೆಯಿಂದ ಅಥವಾ ಶಾಸನಾತ್ಮಕ ಕ್ರಮಗಳಿಂದ ಸಾಧ್ಯವಿಲ್ಲ. ಮಕ್ಕಳ ದುಡಿತದ ಸಮಸ್ಯೆಯ ಅಪರಿಹಾರ್ಯವೆಂಬಂತೆ ದೇಶದ ಬಡತನದ ಜೊತೆಗೆ ಸೇರಿಕೊಂಡಿರುವುದರಿಂದ ಈ ದುಡಿತದ ಬವಣೆ ಕೊನೆಗೊಳ್ಳಬೇಕಾದರೆ ನಮ್ಮ ಆರ್ಥಿಕ ಪರಿಸ್ಥಿತಿ ಸುಧಾರಿಸುವುದು ಅಗತ್ಯ. ಆದರೆ ಈಗಿರುವ ಪರಿಸ್ಥಿತಿಯಲ್ಲಿಯೂ ದುಡಿತದಲ್ಲಿರುವ ಮಕ್ಕಳ ಶೋಷಣೆ ಹಾಗೂ ಪೀಡನೆ ನಿಲ್ಲಬೇಕಾದರೆ ಮಕ್ಕಳ ಬಗ್ಗೆ ಸರಿಯಾದ ಸಾಮಾಜಿಕ ಅರಿವು ಮೂಡಿಸುವ ಹಾಗೂ ಸಮಾಜದ ಆತ್ಮಸಾಕ್ಷಿಯನ್ನು ಜಾಗೃತಗೊಳಿಸುವ ಕಾರ್ಯ ಆಗಬೇಕಾಗಿದೆ. ಎಷ್ಟು ಬೇಗನೆ ನಾವಿದನ್ನು ಮಾಡಲು ಸಮರ್ಥರಾಗುತ್ತೇವೆಯೋ ಅಷ್ಟು ಬೇಗನೆ ಇದೀಗ ನೋವು, ಸಂಕಟ, ಪೀಡನೆ ಮತ್ತು ಶೋಷಣೆಗಳಿಗೆ ಒಳಗಾಗಿರುವ ಮಕ್ಕಳು ತಮ್ಮನ್ನು ಕಾಡುವ ಸಮಸ್ಯೆಗಳಿಂದ ಒಂದಿಷ್ಟಾದರೂ ಉಪಶಮನ ಪಡೆಯಬಹುದಾಗಿದೆ.

## 6.2. ಅಧ್ಯಯನದ ಫಲಿತಾಂಶಗಳು

- ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಬಾಲಕಾರ್ಮಿಕರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಬಡತನ, ಅನಕ್ಷರತೆ ಹಾಗೂ ಅಜ್ಞಾನ ಇರುವ ಕಾರಣ ಈ

